**ಕರ್ನಾಟಕ ಸರ್ಕಾರ**

ಸಂ:ಬಿಸಿಡಬ್ಲ್ಯೂ 226 ಬಿಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:15.03.2020

Starred
19/03/2020

ಇವರಿಂದ:

ಸರ್ಕಾರದ ಕಾರ್ಯದರ್ಶಿಗಳು,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ,
ವಿಕಾಸಸೌಧ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಪರಿಷತ್ತ್/ಸಭೆ
ಸುವರ್ಣಸೌಧ,
ಬೆಳಗಾವಿ.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಪರಿಷತ್ತ್/ಸಭೆ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್.(ಸಾಗರ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ. 2551 ಕ್ಕೆ ಉತ್ತರಿಸುವ ಕುರಿತು.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಪರಿಷತ್ತ್/ಸಭೆ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ. 2551 ಕ್ಕೆ ಸಂಬಂಧಿಸಿದಂತೆ ಉತ್ತರದ 20 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

(ಜಿ.ಹೆಚ್.ನಾಗರಾಜು)
ಸರ್ಕಾರದ ಅಧೀನ ಕಾರ್ಯದರ್ಶಿ–2
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

## ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2551 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಹಾಲಪ್ಪ ಹರತಾಳ್ ಹೆಚ್.(ಸಾಗರ) |
| ಉತ್ತರಿಸಬೇಕಾದ ದಿನಾಂಕ | 19.03.2020 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಅಡಿಯಲ್ಲಿ ಬರುವ ಯೋಜನೆಗಳು ಯಾವುವು; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿಯಲ್ಲಿ ಬರುವ ಯೋಜನೆಗಳ ವಿವರವನ್ನು **ಅನುಬಂಧ-1**ರಲ್ಲಿ ಇರಿಸಲಾಗಿದೆ. |
| ಆ) | ಸದರಿ ಯೋಜನೆಗಳ ಅನುಷ್ಠಾನಕ್ಕೆ ಇರುವ ಮಾನದಂಡಗಳೇನು; (ಸಂಪೂರ್ಣ ವಿವರ ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿಯ ಯೋಜನೆಗಳ ಅನುಷ್ಠಾನಕ್ಕೆ ಇರುವ ಮಾನದಂಡಗಳ ವಿವರವನ್ನು **ಅನುಬಂಧ-2**ರಲ್ಲಿ ಇರಿಸಲಾಗಿದೆ. |
| ಇ) | ಕಳೆದ 3 ವರ್ಷಗಳಲ್ಲಿ ಬಿಡುಗಡೆಯಾದ ಅನುದಾನವೆಷ್ಟು (ಅನುದಾನ, ಯೋಜನಾವಾರು. ಪೂರ್ಣ ವಿವರ ಒದಗಿಸುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಕಳೆದ 3 ವರ್ಷಗಳಲ್ಲಿ ಬಿಡುಗಡೆಯಾದ ಅನುದಾನದ ವಿವರಗಳನ್ನು **ಅನುಬಂಧ-3**ರಲ್ಲಿ ಇರಿಸಲಾಗಿದೆ. |
| ಈ) | ಶಿವಮೊಗ್ಗ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ಯಾವ ಯಾವ ಯೋಜನೆಯಡಿಯಲ್ಲಿ ಅನುದಾನ ಒದಗಿಸಲಾಗಿದೆ; (ಫಲಾನುಭವಿಗಳ ವಿವರಗಳೊಂದಿಗೆ ಪೂರ್ಣ ವಿವರ ಒದಗಿಸುವುದು) | ಶಿವಮೊಗ್ಗ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ವಿವಿಧ ಯೋಜನೆಯಡಿ ಒದಗಿಸಿರುವ ಅನುದಾನದ ಫಲಾನುಭವಿಗಳ ಮಾಹಿತಿಯು ಸುಮಾರು 13,500ಕ್ಕೂ ಹೆಚ್ಚಿನ ಪುಟಗಳಿದ್ದು, ಸದರಿ ಮಾಹಿತಿಯ ಸಾಫ್ಟ್ ಕಾಪಿಯನ್ನು ಇ-ಮೇಲ್‌ನಲ್ಲಿ ಕಳುಹಿಸಲಾಗುವುದು. |

ಸಂಖ್ಯೆ:ಹಿಂವಕ 226 ಬಿಎಂಎಸ್ 2020

(ಬಿ.ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

16/3/2020

23

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) ಇವರ**

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2551 ಕ್ಕೆ ಅನುಬಂಧ-1**

**ಕಾರ್ಯಕ್ರಮಗಳ ವಿವರ**

| | ಶೈಕ್ಷಣಿಕ ಕಾರ್ಯಕ್ರಮಗಳು |
|---|---|
| I | **ವಿದ್ಯಾರ್ಥಿನಿಲಯಗಳ ನಿರ್ವಹಣೆ** |
| 1 | ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು |
| 2 | ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು |
| 3 | ಸರ್ಕಾರಿ ಆಶ್ರಮಶಾಲೆಗಳು |
| 4 | ಖಾಸಗಿ ಅನುದಾನಿತ ಮೆಟ್ರಿಕ್-ಪೂರ್ವ ವಿದ್ಯಾರ್ಥಿನಿಲಯಗಳು |
| 5 | ಖಾಸಗಿ ಅನುದಾನಿತ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು |
| 6 | ಖಾಸಗಿ ಅನುದಾನಿತ ಅನಾಥಾಲಯಗಳು |
| 7 | ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ |
| II | **ವಿದ್ಯಾರ್ಥಿವೇತನ ಕಾರ್ಯಕ್ರಮಗಳು** |
| 1 | ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ |
| 2 | ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ |
| 3 | ವಿದ್ಯಾಸಿರಿ-ಊಟ ಮತ್ತು ವಸತಿ ಸಹಾಯ ಯೋಜನೆ |
| 4 | ಶುಲ್ಕ ಮರು ಪಾವತಿ |
| 5 | ಪೂರ್ಣಾವಧಿ ಪಿ.ಎಚ್.ಡಿ ಮಾಡುವ ವಿದ್ಯಾರ್ಥಿಗಳಿಗೆ ಫೆಲೋಷಿಫ್ |
| 6 | ದೇವರಾಜ ಅರಸು ವಿದೇಶಿ ವ್ಯಾಸಂಗ ವೇತನ |
| 7 | ದೇವರಾಜ ಅರಸು ಪ್ರತಿಭಾ ಪುರಸ್ಕಾರ |
| 8 | ನಿಲಯಾರ್ಥಿಗಳಿಗೆ ಪ್ರೋತ್ಸಾಹಧನ |
| 9 | ಐ.ಐ.ಟಿ, ಐ.ಐ.ಎಂ, ಐ.ಐ.ಎಸ್ಸಿ ಇತ್ಯಾದಿಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ ಒಂದು ಬಾರಿ ರೂ.2.00 ಲಕ್ಷ ಪ್ರೋತ್ಸಾಹಧನ |
| III | **ತರಬೇತಿ ಕಾರ್ಯಕ್ರಮಗಳು** |
| 1 | ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಹಾಜರಾಗುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಪರೀಕ್ಷಾ ಪೂರ್ವ ತರಬೇತಿ |
| 2 | ನರ್ಸಿಂಗ್ ತರಬೇತಿ |
| 3 | ವಿಶ್ವವಿದ್ಯಾಲಯಗಳಲ್ಲಿನ ಹಿಂದುಳಿದ ವರ್ಗಗಳ ಕೋಶಕ್ಕೆ ಅನುದಾನ |
| 4 | ಕಾನೂನು ಪದವೀಧರರಿಗೆ ಶಿಷ್ಯವೇತನ |

| | |
|---|---|
| 5 | ಹೊಲಿಗೆ ತರಬೇತಿ ಕೇಂದ್ರಗಳ ನಿರ್ವಹಣೆ |
| 6 | ಸೇನೆಗಳಿಗೆ ಆಯ್ಕೆಯಾಗುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ತರಬೇತಿ |
| 7 | ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿರುವ ವಿದ್ಯಾರ್ಥಿಗಳಿಗೆ ವೃತ್ತಿ ಮಾರ್ಗದರ್ಶನ ಹಾಗೂ ಸ್ಪರ್ಧಾತ್ಮಕ ಪರೀಕ್ಷಾ ಪೂರ್ವ ತರಬೇತಿ |
| IV | ಅಲೆಮಾರಿ ಮತ್ತು ಅರೆಅಲೆಮಾರಿ ಜನಾಂಗದ ಅಭಿವೃದ್ಧಿ ಕಾರ್ಯಕ್ರಮಗಳು |
| 1 | ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ವಿಶೇಷ ಪ್ರೋತ್ಸಾಹಧನ |
| 2 | ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಅರ್ಹತಾ ವಿದ್ಯಾರ್ಥಿವೇತನ |
| 3 | ಆಶ್ರಮ ಶಾಲೆಗಳ ನಿರ್ವಹಣೆ |
| 4 | ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶಾವಕಾಶ |
| 5 | ಅರಿವು ಮೂಡಿಸುವ ಕಾರ್ಯಕ್ರಮ |
| 6 | ಮೂಲಭೂತ ಸೌಕರ್ಯಗಳು |
| 7 | ವಸತಿ ಸೌಲಭ್ಯ |
| 8 | ನಿವೇಶನ ಹಂಚಿಕೆಗಾಗಿ ಜಮೀನು ಖರೀದಿ |
| 9 | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಮೂಲಕ ಅನುಷ್ಠಾನ ಮಾಡಲಾಗುತ್ತಿರುವ ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳು |
| V | ವಿವಿಧ ಸಮುದಾಯಗಳ ಅಭಿವೃದ್ಧಿ |
| 1 | ಹಿಂದುಳಿದ ವರ್ಗಗಳ ಸಮುದಾಯಗಳು ನಿರ್ಮಿಸುವ ಸಮುದಾಯ ಭವನಗಳಿಗೆ ಸಹಾಯಾನುಧಾನ |
| 2 | ಹಿಂದುಳಿದ ವರ್ಗಗಳ ಸಂಘ-ಸಂಸ್ಥೆಗಳು ನಡೆಸುವ ಖಾಸಗಿ ವಿದ್ಯಾರ್ಥಿನಿಲಯಗಳಿಗೆ ಒಂದು ಬಾರಿಯ ಅನುದಾನ |
| 3 | ದೇವರಾಜ ಅರಸು ಭವನ ನಿರ್ಮಾಣ |

8

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2551 ಕ್ಕೆ ಅನುಬಂಧ-2**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಯೋಜನೆಗಳ ಅನುಷ್ಠಾನಕ್ಕೆ ಇರುವ ಮಾನದಂಡಗಳ ವಿವರ**

## I. ವಿದ್ಯಾರ್ಥಿನಿಲಯಗಳ ನಿರ್ವಹಣೆ

**1) ಮೆಟ್ರಿಕ್-ಪೂರ್ವ ವಿದ್ಯಾರ್ಥಿನಿಲಯಗಳ ಪ್ರವೇಶಕ್ಕಾಗಿ ಅನುಸರಿಸುವ ಮಾನದಂಡಗಳು**

1. ವಿದ್ಯಾರ್ಥಿಗಳು ಅಂಗೀಕೃತ ಶಿಕ್ಷಣ ಸಂಸ್ಥೆಗಳಲ್ಲಿ 5ರಿಂದ 10ನೇ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರಬೇಕು.
2. ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ ಹಾಗೂ ಪ್ರವರ್ಗ 2ಎ, 2ಬಿ, 3ಎ, 3ಬಿಯ ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ವರಮಾನ ಮಿತಿ ರೂ.44,500/-ಕ್ಕೆ ನಿಗದಿಪಡಿಸಿದೆ.
3. ಶೈಕ್ಷಣಿಕ ಸಂಸ್ಥೆಯಿಂದ 5 ಕಿ.ಮೀ ದೂರದಲ್ಲಿ ವಾಸಿಸುವ ವಿದ್ಯಾರ್ಥಿಗಳಿಗೆ ಶೇಕಡಾ 90ರಷ್ಟು ಸ್ಥಾನಗಳನ್ನು ಹಾಗೂ ಉಳಿದ 10ರಷ್ಟು ಸ್ಥಾನಗಳನ್ನು 5 ಕಿ.ಮೀ.ಗಳಿಗಿಂತ ಕಡಿಮೆ ದೂರದ ಸ್ಥಳಗಳ ವಿದ್ಯಾರ್ಥಿಗಳಿಗೆ ನೀಡಲಾಗುವುದು.
4. ಪ್ರತಿ ವರ್ಷ ಜೂನ್ 1ರಂದು ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಿ, ಹಿಂದಿನ ವಾರ್ಷಿಕ ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾದ ನಿಲಯಾರ್ಥಿಗಳನ್ನು ಮಾತ್ರ ನವೀಕರಣ ವಿದ್ಯಾರ್ಥಿಗಳೆಂದು ಪರಿಗಣಿಸಿ ಆಯ್ಕೆ ಸಮಿತಿಯ ಅನುಮೋದನೆಗೆ ಒಳಪಟ್ಟು ನವೀಕರಣ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲಾಗುವುದು.
5. ನವೀಕರಣ ವಿದ್ಯಾರ್ಥಿಗಳ ಪ್ರವೇಶಾತಿಯ ಬಳಿಕ ಉಳಿದ ಸ್ಥಾನಗಳಿಗೆ ಆಯ್ಕೆ ಸಮಿತಿಯು ಆಯ್ಕೆ ಮಾಡಿದ ಹೊಸ ವಿದ್ಯಾರ್ಥಿಗಳಿಗೆ ಪ್ರವೇಶ ಕಲ್ಪಿಸುವುದು.

**ವಿದ್ಯಾರ್ಥಿನಿಲಯಗಳ ಪ್ರವೇಶಾತಿಗೆ ನಿಗದಿಪಡಿಸಿದ ಪ್ರವರ್ಗವಾರು ಮೀಸಲಾತಿ**

| | | |
|---|---|---|
| 1 | ಪ್ರವರ್ಗ – 1 | ಶೇಕಡ 10 |
| 2 | ಪ್ರವರ್ಗ – 2ಎ | ಶೇಕಡ 35 |
| 3 | ಪ್ರವರ್ಗ – 2ಬಿ | ಶೇಕಡ 09 |
| 4 | ಪ್ರವರ್ಗ – 3ಎ | ಶೇಕಡ 09 |
| 5 | ಪ್ರವರ್ಗ – 3ಬಿ | ಶೇಕಡ 12 |
| 6 | ಪರಿಶಿಷ್ಟ ಜಾತಿ | ಶೇಕಡ 21 |
| 7 | ಪರಿಶಿಷ್ಟ ಪಂಗಡ | ಶೇಕಡ 04 |
| | ಒಟ್ಟು | ಶೇಕಡ 100 |

**ಆಯ್ಕೆ ಸಮಿತಿಯ ವಿವರ**

| | | |
|---|---|---|
| 1. | ತಾಲ್ಲೂಕಿನ ಹೆಚ್ಚಿನ ಭಾಗ ಪ್ರತಿನಿಧಿಸುವ ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ತಾಲ್ಲೂಕಿನ ಉಳಿದ ಭಾಗ ಪ್ರತಿನಿಧಿಸುವ ವಿಧಾನಸಭಾ ಸದಸ್ಯರು | ಸದಸ್ಯರು |
| 3. | ಆಯಾ ಕ್ಷೇತ್ರದ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 4. | ಸಂಬಂಧಪಟ್ಟ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಗಳು | ಸದಸ್ಯರು |
| 5. | ಕ್ಷೇತ್ರ ಶಿಕ್ಷಣಾಧಿಕಾರಿಗಳು (ಬಿ.ಇ.ಓ) | ಸದಸ್ಯರು |
| 6. | ಆಯಾ ತಾಲ್ಲೂಕಿನ ತಹಶೀಲ್ದಾರರು | ಸದಸ್ಯರು |
| 7. | ಆಯಾ ತಾಲ್ಲೂಕಿನ ಸ್ಥಳೀಯ ಸರ್ಕಾರಿ ಆಸ್ಪತ್ರೆಯ ವೈದ್ಯಾಧಿಕಾರಿಗಳು | ಸದಸ್ಯರು |
| 8. | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯಾ ತಾಲ್ಲೂಕಿನ ವಿಸ್ತರಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |

2) ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳ ಪ್ರವೇಶಕ್ಕಾಗಿ ಅನುಸರಿಸುವ ಮಾನದಂಡಗಳು

1. ವಿದ್ಯಾರ್ಥಿನಿಲಯಗಳು ಇರುವ ಸ್ಥಳಗಳ ಕಾಲೇಜುಗಳಿಂದ 5 ಕಿ.ಮೀ.ಗಿಂತ ದೂರದ ಸ್ಥಳಗಳಿಂದ ಬರುವ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶಾವಕಾಶ ಕಲ್ಪಿಸಲಾಗುವುದು. ಸ್ಥಳೀಯ ವಿದ್ಯಾರ್ಥಿಗಳು ಪ್ರವೇಶಕ್ಕೆ ಅನರ್ಹರು.
2. ಈ ವಸತಿನಿಲಯಗಳಿಗೆ ಪ್ರವೇಶ ಪಡೆಯಲು ಪ್ರವರ್ಗ-2ಎ, 2ಬಿ, 3ಎ, 3ಬಿ ವರ್ಗಗಳ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ವರಮಾನ ಮಿತಿ ರೂ.1.00 ಲಕ್ಷ ಹಾಗೂ ಪ್ರವರ್ಗ-1, ಎಸ್.ಸಿ/ಎಸ್.ಟಿ ವಿದ್ಯಾರ್ಥಿಗಳಿಗೆ ರೂ.2.50 ಲಕ್ಷ ನಿಗದಿಪಡಿಸಿದ್ದು, ಅರ್ಹತೆ ಮತ್ತು ಆದಾಯದ ಮಾನದಂಡದ ಮೇಲೆ ಆಯ್ಕೆ ಮಾಡಲಾಗುವುದು.
3. ವಿದ್ಯಾರ್ಥಿಗಳನ್ನು ಈ ಕೆಳಕಂಡ ಮೀಸಲಾತಿ ಅನುಪಾತದಂತೆ ಪ್ರವೇಶಕ್ಕೆ ಆಯ್ಕೆ ಮಾಡಲಾಗುವುದು.

| | | |
|---|---|---|
| 1 | ಪ್ರವರ್ಗ – 1 | ಶೇಕಡ 10 |
| 2 | ಪ್ರವರ್ಗ – 2ಎ | ಶೇಕಡ 35 |
| 3 | ಪ್ರವರ್ಗ – 2ಬಿ | ಶೇಕಡ 09 |
| 4 | ಪ್ರವರ್ಗ – 3ಎ | ಶೇಕಡ 09 |
| 5 | ಪ್ರವರ್ಗ – 3ಬಿ | ಶೇಕಡ 12 |
| 6 | ಪರಿಶಿಷ್ಟ ಜಾತಿ | ಶೇಕಡ 21 |
| 7 | ಪರಿಶಿಷ್ಟ ಪಂಗಡ | ಶೇಕಡ 04 |
| | ಒಟ್ಟು | ಶೇಕಡ 100 |

4. ಸರ್ಕಾರಿ ಸುತ್ತೋಲೆ ಸಂಖ್ಯೆ ಸಕಇ 53 ಬಿಎಂಎಸ್ 2009 ದಿ:26.2.2009ರಲ್ಲಿ ವಿದ್ಯಾರ್ಥಿ ನಿಲಯಗಳಲ್ಲಿ ಲಭ್ಯವಿರುವ ಖಾಲಿ ಸ್ಥಾನಗಳಲ್ಲಿ ಶೇಕಡ 20ರಷ್ಟು ಸ್ಥಾನಗಳನ್ನು ಸ್ವಾತಂತ್ರ್ಯ ಹೋರಾಟಗಾರರ ಮಕ್ಕಳು, ಮಾಜಿ ಸೈನಿಕರ ಮಕ್ಕಳು, ವಿಧವೆಯರ ಮಕ್ಕಳು, ದೇವದಾಸಿಯರ ಮಕ್ಕಳು, ಅಂಗವಿಕಲ ಮಕ್ಕಳು, ತಂದೆ ಹಾಗೂ ತಾಯಿ ಇಲ್ಲದ ಅನಾಥ ಮಕ್ಕಳು, ಪ್ರಮಾಣೀಕೃತ ಬಾಲಕಾರ್ಮಿಕರು, ಯೋಜನಾ ನಿರ್ವಸಿತ ಪೋಷಕರ ಮಕ್ಕಳು, ದೌರ್ಜನ್ಯದಲ್ಲಿ ಮೃತಪಟ್ಟ / ಶಾಶ್ವತ ಅಂಗವಿಕಲ ಪೋಷಕರ ಮಕ್ಕಳು, ಅಪಘಾತದಲ್ಲಿ ಮೃತಪಟ್ಟ/ಶಾಶ್ವತ ಅಂಗವಿಕಲರಾಗಿರುವ ಪೋಷಕರ ಮಕ್ಕಳು, ಆದಿವಾಸಿ ಪಂಗಡದ (ಜೇನು ಕುರುಬ ಹಾಗೂ ಕೊರಗ ಸಮಾಜ) ಮಕ್ಕಳು, ಅಲೆಮಾರಿ ಜನಾಂಗದ ಮಕ್ಕಳು, ಭಿಕ್ಷುಕರ ಮಕ್ಕಳು, ಸಫಾಯಿ ಕರ್ಮಚಾರಿ ಮಕ್ಕಳಿಗೆ ಮೀಸಲಿರಿಸಲಾಗಿದೆ.

**ತಾಲ್ಲೂಕು ಮಟ್ಟದ ಆಯ್ಕೆ ಸಮಿತಿಯ ವಿವರ**

| | | |
|---|---|---|
| 1. | ತಾಲ್ಲೂಕಿನ ಹೆಚ್ಚಿನ ಭಾಗ ಪ್ರತಿನಿಧಿಸುವ ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. | ತಾಲ್ಲೂಕಿನ ಉಳಿದ ಭಾಗ ಪ್ರತಿನಿಧಿಸುವ ವಿಧಾನ ಸಭಾ ಸದಸ್ಯರು | ಸದಸ್ಯರು |
| 3. | ಆಯಾ ಕ್ಷೇತ್ರದ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 4. | ಸಂಬಂಧ ಪಟ್ಟ ತಾಲ್ಲೂಕ್ ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | ಸದಸ್ಯರು |
| 5. | ಕ್ಷೇತ್ರ ಶಿಕ್ಷಣಾಧಿಕಾರಿಗಳು (ಬಿ.ಇ.ಓ) | ಸದಸ್ಯರು |
| 6. | ಆಯಾ ತಾಲ್ಲೂಕಿನ ತಹಶೀಲ್ದಾರರು | ಸದಸ್ಯರು |
| 7. | ಆಯಾ ತಾಲ್ಲೂಕಿನ ಸ್ಥಳೀಯ ಸರ್ಕಾರಿ ಆಸ್ಪತ್ರೆಯ ವೈದ್ಯಾಧಿಕಾರಿಗಳು | ಸದಸ್ಯರು |
| 8. | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯಾ ತಾಲ್ಲೂಕಿನ ವಿಸ್ತರಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |

3) ಆಶ್ರಮಶಾಲೆಗಳ ಪ್ರವೇಶಕ್ಕಾಗಿ ಅನುಸರಿಸುವ ಮಾನದಂಡಗಳ ವಿವರ

1. ವಿದ್ಯಾರ್ಥಿಗಳನ್ನು ಪ್ರವೇಶಕ್ಕೆ ಆಯ್ಕೆ ಮಾಡುವಾಗ ಮಂಜೂರಾತಿ ಸಂಖ್ಯೆಯ ಶೇಕಡ 75 ರಷ್ಟನ್ನು ಪ್ರವರ್ಗ–1ಕ್ಕೆ ಸೇರಿದ ವಿದ್ಯಾರ್ಥಿಗಳನ್ನು ಹಾಗೂ ಶೇಕಡ 25 ರಷ್ಟನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಬೇಕು.
2. ಪ್ರವರ್ಗ–1ಕ್ಕೆ ಸೇರಿದ ವಿದ್ಯಾರ್ಥಿಗಳು ಸಾಕಷ್ಟು ಸಂಖ್ಯೆಯಲ್ಲಿ ದೊರೆಯದಿದ್ದಲ್ಲಿ, ಮೀಸಲಾತಿ ಪ್ರಮಾಣವು ಈ ಕೆಳಕಂಡಂತಿರಬೇಕು.

| 1 | ಪ್ರವರ್ಗ – 2ಎ | ಶೇಕಡ 54 |
|---|---|---|
| 2 | ಪ್ರವರ್ಗ – 2ಬಿ | ಶೇಕಡ 14 |
| 3 | ಪ್ರವರ್ಗ – 3ಎ | ಶೇಕಡ 14 |
| 4 | ಪ್ರವರ್ಗ – 3ಬಿ | ಶೇಕಡ 18 |
| | ಒಟ್ಟು | ಶೇಕಡ 100 |

3. ಪ್ರವರ್ಗ–1ರ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ ಹಾಗೂ ಪ್ರವರ್ಗ 2ಎ, 2ಬಿ, 3ಎ, 3ಬಿ ಸೇರಿದ ವಿದ್ಯಾರ್ಥಿಗಳಿಗೆ ರೂ.44,500/– ಗಳ ವಾರ್ಷಿಕ ಆದಾಯ ಮಿತಿಯನ್ನು ನಿಗದಿಪಡಿಸಲಾಗಿದೆ.

4) ಖಾಸಗಿ ಹಿಂದುಳಿದ ವರ್ಗಗಳ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು:

ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ.1000/– ರಂತೆ 10 ತಿಂಗಳ ಅವಧಿಗೆ ಆಹಾರ ವೆಚ್ಚ ನೀಡಲಾಗುವುದು. ವಿದ್ಯಾರ್ಥಿನಿಲಯಗಳಲ್ಲಿ ಚಾಲ್ತಿಯಲ್ಲಿರುವ ನಿಯಮಾನುಸಾರ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸತಕ್ಕದ್ದು.

| 1 | ಪ್ರವರ್ಗ – 1 | ಶೇಕಡ 10 |
|---|---|---|
| 2 | ಪ್ರವರ್ಗ – 2ಎ | ಶೇಕಡ 35 |
| 3 | ಪ್ರವರ್ಗ – 2ಬಿ | ಶೇಕಡ 09 |
| 4 | ಪ್ರವರ್ಗ – 3ಎ | ಶೇಕಡ 09 |
| 5 | ಪ್ರವರ್ಗ – 3ಬಿ | ಶೇಕಡ 12 |
| 6 | ಪರಿಶಿಷ್ಟ ಜಾತಿ | ಶೇಕಡ 21 |
| 7 | ಪರಿಶಿಷ್ಟ ಪಂಗಡ | ಶೇಕಡ 04 |
| | ಒಟ್ಟು | ಶೇಕಡ 100 |

ನಿಬಂಧನೆಗಳು:

1. ಪ್ರವರ್ಗ–1 ರ ವಿದ್ಯಾರ್ಥಿಗಳಿಗೆ ರೂ.1.00ಲಕ್ಷ ಹಾಗೂ ಪ್ರವರ್ಗ–2ಎ, 2ಬಿ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ ರೂ.44,500/– ಗಳ ಆದಾಯಮಿತಿ ನಿಗದಿಪಡಿಸಿದೆ.
2. 5 ರಿಂದ 10ನೇ ತರಗತಿವರೆಗಿನ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ
3. ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ.1000/– ರಂತೆ 10 ತಿಂಗಳ ಅವಧಿಗೆ ಆಹಾರ ವೆಚ್ಚ ನೀಡಲಾಗುವುದು.

5) ಖಾಸಗಿ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು:

ವಿದ್ಯಾರ್ಥಿನಿಲಯಗಳಲ್ಲಿ ಚಾಲ್ತಿಯಲ್ಲಿರುವ ನಿಯಮಾನುಸಾರ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸತಕ್ಕದ್ದು.

| 1 | ಪ್ರವರ್ಗ– 1 | ಶೇಕಡ 20 |
|---|---|---|
| 2 | ಪ್ರವರ್ಗ – 2ಎ | ಶೇಕಡ 25 |
| 3 | ಪ್ರವರ್ಗ – 2ಬಿ | ಶೇಕಡ 20 |

| 4 | ಪ್ರವರ್ಗ - 3ಎ | ಶೇಕಡ 20 |
|---|---|---|
| 5 | ಪ್ರವರ್ಗ - 3ಬಿ | ಶೇಕಡ 15 |
| ಒಟ್ಟು | | ಶೇಕಡ 100 |

ನಿಬಂಧನೆಗಳು:

1. ಪ್ರವರ್ಗ-1 ರ ವಿದ್ಯಾರ್ಥಿಗಳಿಗೆ ರೂ.2.50ಲಕ್ಷ ಹಾಗೂ ಪ್ರವರ್ಗ-2ಎ, 2ಬಿ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ ಆದಾಯಮಿತಿ ನಿಗದಿಪಡಿಸಿದೆ.
2. ಪದವಿ ಪೂರ್ವ ಕೋರ್ಸಿನಿಂದ ಸ್ನಾತಕೋತ್ತರ ಪದವಿಗಳವರೆಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ
3. ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ.1100/- ರಂತೆ 10 ತಿಂಗಳ ಅವಧಿಗೆ ಆಹಾರ ವೆಚ್ಚ ನೀಡಲಾಗುವುದು.

**6) ಖಾಸಗಿ ಅನುದಾನಿತ ಅನಾಥಾಲಯಗಳು:**

1. ಅನಾಥ ವಿದ್ಯಾರ್ಥಿಗಳಿಗೆ ಆದಾಯಮಿತಿ ಇರುವುದಿಲ್ಲ.
2. ನಿರ್ಗತಿಕ ವಿದ್ಯಾರ್ಥಿಗಳು ವಾರ್ಷಿಕ ಆದಾಯಮಿತಿ- ಪ್ರವರ್ಗ-1 ರೂ.1.00 ಲಕ್ಷ, ಪ್ರವರ್ಗ-2ಎ, 2ಬಿ, 3ಎ, ಮತ್ತು 3ಬಿ – ರೂ.44,500/- ನಿಗದಿಪಡಿಸಿದೆ.
3. 1 ರಿಂದ 10ನೇ ತರಗತಿವರೆಗೆ ವ್ಯಾಸಂಗ ಮಾಡುತ್ತಿರುವ ನಿರ್ಗತಿಕ ಹಾಗೂ ಅನಾಥ ಮಕ್ಕಳು ಸೌಲಭ್ಯಕ್ಕೆ ಅರ್ಹರು.

**7) ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ:**

ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾವತಿಯಿಂದ 2438 ಮೆಟ್ರಿಕ್-ಪೂರ್ವ/ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಈ ಪೈಕಿ 1325 ವಿದ್ಯಾರ್ಥಿ ನಿಲಯಗಳು ಸ್ವಂತ ಕಟ್ಟಡಗಳನ್ನು ಹೊಂದಿರುತ್ತವೆ. ಹಿಂದುಳಿದ ವರ್ಗಗಳ ವಿದ್ಯಾರ್ಥಿ ನಿಲಯಗಳಿಗೆ ಸ್ವಂತ ಕಟ್ಟಡವನ್ನು ನಿರ್ಮಿಸುವ ಸಂಬಂಧ ನಿವೇಶನಗಳನ್ನು ಪಡೆಯಲಾಗುತ್ತಿದ್ದು, ಖಾಲಿ ಇರುವ ನಿವೇಶನಗಳಲ್ಲಿ ಸ್ವಂತ ಕಟ್ಟಡವನ್ನು ಅನುದಾನದ ಲಭ್ಯತೆಯ ಅನುಸಾರ ಹಂತ ಹಂತವಾಗಿ ವಿವಿಧ ಏಜೆನ್ಸಿಗಳ ಮೂಲಕ ನಿರ್ಮಾಣ ಮಾಡಲಾಗುತ್ತಿದೆ. ಸ್ವಂತ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿ ನಿಲಯಗಳಿಗೆ ವಾರ್ಷಿಕ ದುರಸ್ತಿ, ಸುಣ್ಣ-ಬಣ್ಣ, ಹೆಚ್ಚುವರಿ ಕೊಠಡಿ ನಿರ್ಮಾಣ ಇತ್ಯಾದಿ ಕಾಮಗಾರಿಗಳನ್ನು ಜಿಲ್ಲಾ ವಲಯದ ಕಟ್ಟಡಗಳ ನಿರ್ವಹಣೆ ಮತ್ತು ದುರಸ್ತಿ ಕಾರ್ಯಕ್ರಮದಡಿ ಮಾಡಲಾಗುತ್ತಿದೆ. ಉತ್ತಮ ಸೌಕರ್ಯಗಳನ್ನು ನಿರಂತರವಾಗಿ ನೀಡುವ ಹಾಗೂ ಕಟ್ಟಡಗಳನ್ನು ಉತ್ತಮ ಸ್ಥಿತಿಯಲ್ಲಿ ಇಟ್ಟಿರಲು ಅನುಕೂಲವಾಗುವಂತೆ ದುರಸ್ತಿ ಕಾರ್ಯವನ್ನು ಕೈಗೊಳ್ಳಲಾಗುವುದು.

## II. ವಿದ್ಯಾರ್ಥಿವೇತನ ಕಾರ್ಯಕ್ರಮಗಳು

**1) ಮೆಟ್ರಿಕ್-ಪೂರ್ವ ವಿದ್ಯಾರ್ಥಿವೇತನ:**

1. ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ ಮತ್ತು 3ಬಿಗೆ ಸೇರಿದವರಾಗಿರಬೇಕು.
2. ವಾರ್ಷಿಕ ಆದಾಯಮಿತಿ ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ, ಪ್ರವರ್ಗ-2ಎ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ – ರೂ.44,500/- ನಿಗದಿಪಡಿಸಿದೆ. ಕೇಂದ್ರ ಪುರಸ್ಕೃತ ವಿದ್ಯಾರ್ಥಿವೇತನಕ್ಕೆ ವಾರ್ಷಿಕ ರೂ.2.50 ಲಕ್ಷ ಆದಾಯಮಿತಿ.
3. ಸರ್ಕಾರದ/ಸರ್ಕಾರದಿಂದ ಮಾನ್ಯತೆ ಪಡೆದ ಅನುದಾನಿತ /ಅನುದಾನರಹಿತ ಶಾಲೆಗಳಲ್ಲಿ ವ್ಯಾಸಂಗ ಮಾಡುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಅರ್ಹರು.
4. ಸರ್ಕಾರದ/ಸರ್ಕಾರದ ಅನುದಾನಿತ ವಿದ್ಯಾರ್ಥಿನಿಲಯಗಳಲ್ಲಿ/ವಸತಿಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ವಿದ್ಯಾರ್ಥಿವೇತನ ಪಡೆಯಲು ಅರ್ಹರಿರುವುದಿಲ್ಲ.
5. ಹಿಂದಿನ ತರಗತಿಯಲ್ಲಿ ಶೇ.75 ಕ್ಕಿಂತ ಹೆಚ್ಚು ಹಾಜರಾತಿ ಹೊಂದಿದವರು ಮಾತ್ರ ಅರ್ಹರು.

6. ಹಿಂದಿನ ತರಗತಿಯಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗಳು, ವಿದ್ಯಾರ್ಥಿವೇತನ ಪಡೆಯಲು ಅರ್ಹರಿರುವುದಿಲ್ಲ.

**ಆಯ್ಕೆ ವಿಧಾನ:**

1. ಕೇಂದ್ರ ಪುರಸ್ಕೃತ ಅನುದಾನವನ್ನು ಅತ್ಯಂತ ಕಡಿಮೆ ಆದಾಯ ಮತ್ತು ಮೆರಿಟ್ ಇರುವ ವಿದ್ಯಾರ್ಥಿಗಳಿಗೆ ಅನುದಾನದ ಲಭ್ಯತೆಗೊಳಪಟ್ಟು ಮಂಜೂರು ಮಾಡಲಾಗುವುದು. ನಂತರ ಉಳಿದ ವಿದ್ಯಾರ್ಥಿಗಳಿಗೆ ರಾಜ್ಯ ಸರ್ಕಾರದ ಮೆಟ್ರಿಕ್-ಪೂರ್ವ ವಿದ್ಯಾರ್ಥಿವೇತನ ಮಂಜೂರು ಮಾಡಲಾಗುವುದು.
2. ಮೊದಲನೇ ಆದ್ಯತೆ: ಎಲ್ಲಾ ಅರ್ಹ ನವೀಕರಣ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮಂಜೂರು ಮಾಡುವುದು.
3. ಎರಡನೇ ಆದ್ಯತೆ: ಹಿಂದುಳಿದ ವರ್ಗಗಳ ಪ್ರವರ್ಗ-1ರ ಎಲ್ಲಾ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಮಂಜೂರು ಮಾಡುವುದು.
4. ಮೂರನೇ ಆದ್ಯತೆ: ಉಳಿದ ಮೊತ್ತವನ್ನು ಅರ್ಹವಿರುವ ಪ್ರವರ್ಗ-2ಎ, 3ಎ, 3ಬಿ ಮತ್ತು ಇತರೆ ಹಿಂದುಳಿದ ವರ್ಗಗಳ (ಕೇಂದ್ರ/ರಾಜ್ಯ ಸರ್ಕಾರದ ಹಿಂದುಳಿದ ವರ್ಗದ ಪಟ್ಟಿಯಲ್ಲಿ ಇರುವ ಜಾತಿಗಳು ಮಾತ್ರ) ವಿದ್ಯಾರ್ಥಿಗಳಿಗೆ ಆದಾಯ ಮತ್ತು ಅರ್ಹತೆಯ ಆಧಾರದ ಮೇಲೆ ಈ ಕೆಳಕಂಡ ಪ್ರಮಾಣದಂತೆ ಮಂಜೂರು ಮಾಡಲಾಗುವುದು.

| 1 | ಪ್ರವರ್ಗ - 2ಎ | ಶೇಕಡ 61 |
|---|---|---|
| 2 | ಪ್ರವರ್ಗ - 3ಎ | ಶೇಕಡ 17 |
| 3 | ಪ್ರವರ್ಗ - 3ಬಿ | ಶೇಕಡ 21 |
| 4 | ಇತರೆ ಹಿಂದುಳಿದ ವರ್ಗ | ಶೇಕಡ 01 |
| | **ಒಟ್ಟು** | **ಶೇಕಡ 100** |

**2) ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ**

1. ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿಯಾಗಿರಬೇಕು ಹಾಗೂ ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿರಬೇಕು.
2. ಕರ್ನಾಟಕದ ಶಾಸನಬದ್ಧ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ ಸರ್ಕಾರಿ/ಸ್ಥಳೀಯ ಸಂಸ್ಥೆ/ಅನುದಾನಿತ ಸಂಸ್ಥೆ/ಮಾನ್ಯತೆ ಪಡೆದ ಅನುದಾನರಹಿತ ಖಾಸಗಿ ಸಂಸ್ಥೆಗಳಲ್ಲಿ ಮೆಟ್ರಿಕ್-ನಂತರದ ಶಿಕ್ಷಣವನ್ನು ಪಡೆಯುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಮೆಟ್ರಿಕ್-ನಂತರದ ವಿದ್ಯಾರ್ಥಿವೇತನ ಪಡೆಯಲು ಅರ್ಹರಿರುತ್ತಾರೆ.
3. ಸರ್ಕಾರದ ವಿದ್ಯಾರ್ಥಿನಿಲಯಗಳಲ್ಲಿ/ವಸತಿ ಕಾಲೇಜುಗಳಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳು ಮೆಟ್ರಿಕ್-ನಂತರದ ವಿದ್ಯಾರ್ಥಿವೇತನವನ್ನು ಪಡೆಯಲು ಅರ್ಹರಿರುವುದಿಲ್ಲ.
4. ವಾರ್ಷಿಕ ಆದಾಯಮಿತಿ ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ.2.50 ಲಕ್ಷ, ಪ್ರವರ್ಗ-2ಎ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ – ರೂ.1.00 ಲಕ್ಷ ನಿಗದಿಪಡಿಸಿದೆ.
5. ಹೊಸ ಮತ್ತು ನವೀಕರಣ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನಕ್ಕಾಗಿ ಹಿಂದಿನ ತರಗತಿಗಳಲ್ಲಿ ನಿಗದಿಪಡಿಸಿರುವ ಕನಿಷ್ಠ ಅಂಕ

| ಕ್ರ ಸಂ. | ಪ್ರವರ್ಗ | ಹೊಸ | ನವೀಕರಣ |
|---|---|---|---|
| 1 | ಪ್ರವರ್ಗ-1 | 40% | 50% |
| 2 | ಪ್ರವರ್ಗ-2ಎ, 3ಎ ಮತ್ತು 3ಬಿ | 50% | 60% |

6. ಸಮಾನ ಕೋರ್ಸುಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ, ವಿದ್ಯಾರ್ಥಿವೇತನಕ್ಕೆ ಅರ್ಹರಿರುವುದಿಲ್ಲ.

7. ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.
8. ವಿವಿಧ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮೆಟ್ರಿಕ್-ನಂತರದ ವಿದ್ಯಾರ್ಥಿಗಳಿಗೆ ಕೋರ್ಸಿನ ಗುಂಪುವಾರು ಪ್ರತಿ ತಿಂಗಳಿಗೆ ಮೆಟ್ರಿಕ್-ನಂತರದ ವಿದ್ಯಾರ್ಥಿವೇತನವನ್ನು 10 ತಿಂಗಳ ಅವಧಿಗೆ ಅರ್ಹತೆ ಮತ್ತು ಆದಾಯಮಿತಿಯನ್ನು ಪರಿಗಣಿಸಿ, ಮಂಜೂರು ಮಾಡಲಾಗುವುದು.

**ಅನುದಾನದ ಹಂಚಿಕೆ ವಿಧಾನ:**

ಆಯಾ ಆರ್ಥಿಕ ವರ್ಷಕ್ಕೆ ಲಭ್ಯವಾಗುವ ಅನುದಾನವನ್ನು ಪ್ರವರ್ಗವಾರು ಈ ಕೆಳಗಿನಂತೆ ಶೇಕಡವಾರು ಹಂಚಿಕೆ ಮಾಡಲಾಗುವುದು.

| 1 | ಪ್ರವರ್ಗ-1 | 15% |
|---|---|---|
| 2 | ಪ್ರವರ್ಗ - 2ಎ | 52% |
| 3 | ಪ್ರವರ್ಗ - 3ಎ | 14% |
| 4 | ಪ್ರವರ್ಗ - 3ಬಿ | 18% |
| 5 | ಇತರೆ ಹಿಂದುಳಿದ ವರ್ಗ | 01% |
| ಒಟ್ಟು | | 100% |

**3) ವಿದ್ಯಾಸಿರಿ- ಊಟ ಮತ್ತು ವಸತಿ ಸಹಾಯ ಯೋಜನೆ**

1. ಅ) ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿ ಆಗಿರಬೇಕು.
   ಆ) ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ, ಇತರೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿರಬೇಕು.
   ಇ) ಕರ್ನಾಟಕದ ಶಾಸನಬದ್ಧ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ, ಸರ್ಕಾರಿ / ಸ್ಥಳೀಯ ಸಂಸ್ಥೆ/ ಅನುದಾನಿತ ಸಂಸ್ಥೆಗಳು / ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ - ಮೆಟ್ರಿಕ್ ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಾಗಿರಬೇಕು.

2. ಅ) ಈ ಮೇಲಿನ ಸೌಲಭ್ಯ ಪಡೆಯಲು ವಿದ್ಯಾರ್ಥಿಯ, ತಂದೆ-ತಾಯಿ/ಪೋಷಕರ ಕುಟುಂಬದ, ಒಟ್ಟು ವಾರ್ಷಿಕ ವರಮಾನ (Gross Annual Income) ಈ ಕೆಳಗೆ ನಿಗದಿಪಡಿಸಿದ ಮಿತಿಯೊಳಗೆ ಇರಬೇಕು.
   (i) ಪ್ರವರ್ಗ-1 ರ ವಿದ್ಯಾರ್ಥಿಗಳಿಗೆ ರೂ.2.50 ಲಕ್ಷ
   (ii) ಪ್ರವರ್ಗ-2ಎ, 3ಎ ಮತ್ತು 3ಬಿ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ
   ಆ) ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶದವಾಗಿರಬೇಕು ಹಾಗೂ ವ್ಯಾಸಂಗ ಮಾಡುವ ಕಾಲೇಜಿನಿಂದ ಕನಿಷ್ಠ 5 ಕಿ.ಮೀ. ದೂರದವರಾಗಿರಬೇಕು. ಆದರೆ, ವಿದ್ಯಾರ್ಥಿಯ ಸ್ವಂತ ಸ್ಥಳ, ನಗರ/ಪಟ್ಟಣ ಆಗಿದ್ದು, ಅವರು ಬೇರೆ ನಗರ/ಪಟ್ಟಣದಲ್ಲಿ ಇರುವ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಈ ಸೌಲಭ್ಯಕ್ಕೆ ಅರ್ಹರಿರುತ್ತಾರೆ.
   ಇ) ಹೊಸ ಮತ್ತು ನವೀಕರಣ ವಿದ್ಯಾರ್ಥಿಗಳು ಈ ಸೌಲಭ್ಯ ಪಡೆಯಲು ಈ ಹಿಂದಿನ ವರ್ಷದ ವಾರ್ಷಿಕ ಪರೀಕ್ಷೆಯಲ್ಲಿ ಈ ಕೆಳಗಿನಂತೆ ಕನಿಷ್ಠ ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು.

| ಕ್ರ. ಸಂ. | ಪ್ರವರ್ಗ | ಹೊಸ | ನವೀಕರಣ |
|---|---|---|---|
| 1 | ಪ್ರವರ್ಗ-1 | 40% | 50% |
| 2 | ಪ್ರವರ್ಗ-2ಎ, 3ಎ ಮತ್ತು 3ಬಿ | 50% | 60% |

(ಒಂದು ವೇಳೆ, ವೈದ್ಯಕೀಯ ಕಾರಣಗಳಿಂದಾಗಿ ಪರೀಕ್ಷೆಗೆ ಹಾಜರಾಗಲು ಸಾಧ್ಯವಾಗದಿದ್ದಲ್ಲಿ, ಅಂತಹವರು, ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು.)

3. ಅ) ಸಮಾನ ಕೋರ್ಸುಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಅರ್ಹರಿರುವುದಿಲ್ಲ. (ಉದಾ: ಬಿ.ಎ ನಂತರ ಬಿ.ಕಾಂ, ಎಂ.ಎ (ಕನ್ನಡ) ನಂತರ ಎಂ.ಎ (ಇಂಗ್ಲೀಷ್), ಬಿ.ಎಡ್ ನಂತರ ಎಲ್.ಎಲ್.ಬಿ, ಇತ್ಯಾದಿಗಳಿಗೆ ಪ್ರವೇಶ ಪಡೆದಿದ್ದಲ್ಲಿ)
ಆ) ಸ್ನಾತಕೋತ್ತರ ವೈದ್ಯಕೀಯ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು, ಕೋರ್ಸಿನ ಅವಧಿಯಲ್ಲಿ ಮೆಡಿಕಲ್ ಪ್ರಾಕ್ಟೀಸ್ ಮಾಡುತ್ತಿದ್ದಲ್ಲಿ, ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.
ಇ) ಕಲೆ, ವಿಜ್ಞಾನ, ಹಾಗೂ ವಾಣಿಜ್ಯ ಕೋರ್ಸುಗಳ, ಪದವಿ ಅಥವಾ ಸ್ನಾತಕೋತ್ತರ ಪದವಿಗಳಲ್ಲಿ ಉತ್ತೀರ್ಣ / ಅನುತ್ತೀರ್ಣರಾದವರು ಅಂಗೀಕೃತ ವೃತ್ತಿಪರ ಅಥವಾ ತಾಂತ್ರಿಕ ಸರ್ಟಿಫಿಕೇಟ್, ಡಿಪ್ಲೋಮ, ಪದವಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ, ಹಾಗೂ ಇತರೆ ರೀತಿ ಅರ್ಹರಿದ್ದಲ್ಲಿ ಅವರು ಈ ಯೋಜನೆಯ ಅಡಿ ಸೌಲಭ್ಯಗಳಿಗೆ ಅರ್ಹರಿರುತ್ತಾರೆ. ಒಂದಕ್ಕಿಂತ ಹೆಚ್ಚು ಬಾರಿ ಕೋರ್ಸುಗಳ ಬದಲಾವಣೆ ಮಾಡಿಕೊಂಡವರು ಅರ್ಹರಿರುವುದಿಲ್ಲ.
ಈ) ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಆದರೆ, ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.

**4) ಶುಲ್ಕ ವಿನಾಯಿತಿ**

1. ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿಯಾಗಿರಬೇಕು ಹಾಗೂ ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿರಬೇಕು.
2. ಕರ್ನಾಟಕದ ಶಾಸನಬದ್ಧ ವಿಶ್ವ ವಿದ್ಯಾಲಯಗಳ ಅಧೀನಕ್ಕೆ ಒಳಪಡುವ ಸರ್ಕಾರಿ / ಸ್ಥಳೀಯ ಸಂಸ್ಥೆ/ ಅನುದಾನಿತ ಸಂಸ್ಥೆ / ಮಾನ್ಯತೆ ಪಡೆದ ಅನುದಾನರಹಿತ ಖಾಸಗಿ ಸಂಸ್ಥೆಗಳಲ್ಲಿ ಮೆಟ್ರಿಕ್-ನಂತರದ ಶಿಕ್ಷಣವನ್ನು ಪಡೆಯುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಮೆಟ್ರಿಕ್-ನಂತರದ ವಿದ್ಯಾರ್ಥಿವೇತನ ಪಡೆಯಲು ಅರ್ಹರಿರುತ್ತಾರೆ.
3. ಈ ಸೌಲಭ್ಯವನ್ನು ಪಡೆಯಲು ವಿದ್ಯಾರ್ಥಿಯ ತಂದೆ-ತಾಯಿ/ಪೋಷಕರ ಕುಟುಂಬದ ವಾರ್ಷಿಕ ವರಮಾನ ಈ ಕೆಳಗೆ ನಿಗದಿಪಡಿಸಿದ ಗರಿಷ್ಠ ಮಿತಿಯೊಳಗೆ ಇರಬೇಕು.
   - ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ.2.50 ಲಕ್ಷ ಹಾಗೂ
   - ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಧಿಸೂಚಿಸಿರುವ ಇತರೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿದ ಮತ್ತು ಎಲ್ಲಾ ಧರ್ಮಗಳ, ಜಾತಿಗಳ ಹಾಗೂ ಸಮುದಾಯಗಳ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ
   - ಆದರೆ, ಸಮಾಜ ಕಲ್ಯಾಣ/ ಪರಿಶಿಷ್ಟ ವರ್ಗಗಳ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗಳ ವ್ಯಾಪ್ತಿಗೆ ಬರುವ ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಸೌಲಭ್ಯಗಳನ್ನು ಪಡೆಯಲು ಅರ್ಹರಿರುವುದಿಲ್ಲ.

4. ಅ) ಸಮಾನ ಕೋರ್ಸುಗಳಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ವ್ಯಾಸಂಗ ಮಾಡುತ್ತಿದ್ದಲ್ಲಿ, ಅಂತಹವರು ಅರ್ಹರಿರುವುದಿಲ್ಲ.
ಆ) ಸ್ನಾತಕೋತ್ತರ, ವೈದ್ಯಕೀಯ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ಕೋರ್ಸಿನ ಅವಧಿಯಲ್ಲಿ ಮೆಡಿಕಲ್ ಪ್ರಾಕ್ಟೀಸ್ ಮಾಡುತ್ತಿದ್ದಲ್ಲಿ, ಈ ಸೌಲಭ್ಯಕ್ಕೆ ಅರ್ಹರಿರುವುದಿಲ್ಲ.
ಇ) ಕಲೆ, ವಿಜ್ಞಾನ ಹಾಗೂ ವಾಣಿಜ್ಯ ಕೋರ್ಸುಗಳ, ಪದವಿ ಅಥವಾ ಸ್ನಾತಕೋತ್ತರ ಪದವಿಗಳಲ್ಲಿ ಉತ್ತೀರ್ಣ / ಅನುತ್ತೀರ್ಣರಾದವರು ಅಂಗೀಕೃತ ವೃತ್ತಿಪರ ಅಥವಾ ತಾಂತ್ರಿಕ ಸರ್ಟಿಫಿಕೇಟ್, ಡಿಪ್ಲೋಮಾ, ಪದವಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಹಾಗೂ ಇತರೆ ರೀತಿ ಅರ್ಹರಿದ್ದಲ್ಲಿ ಅವರು ಈ ಯೋಜನೆಯ ಅಡಿ ಸೌಲಭ್ಯಗಳಿಗೆ ಅರ್ಹರಿರುತ್ತಾರೆ. ಒಂದಕ್ಕಿಂತ ಹೆಚ್ಚು ಬಾರಿ ಕೋರ್ಸುಗಳ ಬದಲಾವಣೆ ಮಾಡಿಕೊಂಡವರು ಅರ್ಹರಿರುವುದಿಲ್ಲ.
ಈ) ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಆದರೆ, ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.

**ಅ) ಶುಲ್ಕ ವಿನಾಯಿತಿಗೆ ಅರ್ಹ ಇರುವ ಶುಲ್ಕಗಳು:**
ರಾಜ್ಯಮಟ್ಟದ ಸಮಿತಿಯು ನಿಗದಿಪಡಿಸುವ ದರಗಳಂತೆ ಈ ಕೆಳಗಿನ ಐದು ಶುಲ್ಕಗಳಿಗೆ ಮಾತ್ರ ವಿನಾಯಿತಿ ನೀಡಲಾಗುವುದು.

ಅ) ಬೋಧನಾ ಶುಲ್ಕ
ಆ) ಪ್ರಯೋಗಾಲಯ ಶುಲ್ಕ (ಯಾವ ಕೋರ್ಸುಗಳಲ್ಲಿ ಪ್ರಯೋಗಾಲಯ ಕಡ್ಡಾಯವಿದೆಯೋ ಆ ಕೋರ್ಸುಗಳಿಗೆ ಮಾತ್ರ)
ಇ) ಪರೀಕ್ಷಾ ಶುಲ್ಕ
ಈ) ಕ್ರೀಡಾ ಶುಲ್ಕ
ಉ) ಗ್ರಂಥಾಲಯ ಶುಲ್ಕ

**5) ಪಿಹೆಚ್.ಡಿ ಪೂರ್ಣಾವಧಿ ಅಧ್ಯಯನದಲ್ಲಿ ತೊಡಗಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಫೆಲೋಶಿಪ್**

1. ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿಯಾಗಿರಬೇಕು.
2. ಕರ್ನಾಟಕ ಸರ್ಕಾರ ಅಧಿಸೂಚಿಸಿರುವ ಹಿಂದುಳಿದ ವರ್ಗಗಳ ಪಟ್ಟಿಗೆ ಸೇರಿರಬೇಕು.
3. ಕರ್ನಾಟಕದ ಶಾಸನಬದ್ಧ ವಿಶ್ವವಿದ್ಯಾಲಯಗಳಲ್ಲಿ/ಅಧೀನಕ್ಕೆ ಒಳಪಡುವ ಸಂಸ್ಥೆಗಳಲ್ಲಿ ಪೂರ್ಣಾವಧಿ (Full Time) ಪಿಎಚ್.ಡಿ ಅಧ್ಯಯನದಲ್ಲಿ ತೊಡಗಿರಬೇಕು.
4. ಈ ಸೌಲಭ್ಯವನ್ನು ಪಡೆಯಬಚ್ಛಿಸುವ ಅಭ್ಯರ್ಥಿಯು ಭಾರತ ಸರ್ಕಾರ / ಕರ್ನಾಟಕ ಸರ್ಕಾರ / ವಿಶ್ವವಿದ್ಯಾಲಯ ಅಥವಾ ಇತರೆ ಯಾವುದೇ ಸಂಸ್ಥೆಗಳಿಂದ ಮಾಸಿಕ ವ್ಯಾಸಂಗ ವೇತನ/ಫೆಲೋಶಿಪ್‌ಗೆ ಆಯ್ಕೆಯಾಗಿರಬಾರದು.

**ಶೈಕ್ಷಣಿಕ ಅರ್ಹತೆ**

1. ಸ್ನಾತಕೋತ್ತರ ಪದವಿಯಲ್ಲಿ ಕನಿಷ್ಠ ಶೇ.55 ಅಂಕಗಳನ್ನು ಪಡೆದಿರಬೇಕು.
2. ವಿಶ್ವವಿದ್ಯಾಲಯ/ಅಧಿಕೃತ ಸಂಸ್ಥೆಗಳಲ್ಲಿನ ಸಂಶೋಧನಾ ಮಾರ್ಗದರ್ಶಕರಡಿಯಲ್ಲಿ ಪಿಎಚ್.ಡಿ ಅಧ್ಯಯನಕ್ಕಾಗಿ ನೋಂದಣಿ ಮಾಡಿಕೊಂಡಿರಬೇಕು.
3. ಈ ನೋಂದಣಿಯು ವ್ಯಾಸಂಗ ವೇತನ/ಫೆಲೋಶಿಪ್‌ಗಾಗಿ ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಹಿಂದಿನ 2 ವರ್ಷಗಳೊಳಗಿದ್ದು, ಅರ್ಜಿ ಸಲ್ಲಿಸುವ ಸಾಲಿನಿಂದ ಪ್ರಥಮ ವರ್ಷದ ಪಿಎಚ್.ಡಿ ಅಧ್ಯಯನದಲ್ಲಿ ತೊಡಗಿರಬೇಕು.

**ವಯೋಮಿತಿ:** ಅಭ್ಯರ್ಥಿಯ ಗರಿಷ್ಠ ವಯೋಮಿತಿ 35 ವರ್ಷಗಳು.

**ಕುಟುಂಬದ ಒಟ್ಟು ವಾರ್ಷಿಕ ಆದಾಯಮಿತಿ**

ಪ್ರವರ್ಗ-1 – ರೂ.4.50 ಲಕ್ಷ.
ಪ್ರವರ್ಗ-2(ಎ), 3(ಎ) ಮತ್ತು 3(ಬಿ) – ರೂ.3.50 ಲಕ್ಷ.

1. ಕೇಂದ್ರ / ರಾಜ್ಯ ಸರ್ಕಾರಿ / ಅನುದಾನಿತ ಸಂಸ್ಥೆ / ಸಾರ್ವಜನಿಕ ಸ್ವಾಮ್ಯತೆಗೆ ಒಳಪಟ್ಟ ಸಂಸ್ಥೆಗಳ ಉದ್ಯೋಗಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಲ್ಲ.
2. ಒಂದೇ ಕುಟುಂಬದ ಇಬ್ಬರು ಗಂಡು ಮಕ್ಕಳು ಮಾತ್ರ ಈ ಯೋಜನೆಗೆ ಅರ್ಹರು. ಆದರೆ ಈ ನಿರ್ಬಂಧ ಹೆಣ್ಣು ಮಕ್ಕಳಿಗೆ ಅನ್ವಯಿಸುವುದಿಲ್ಲ.
3. ಒಬ್ಬ ಅಭ್ಯರ್ಥಿಗೆ ಒಂದು ಬಾರಿ ಮಾತ್ರ ಪಿಎಚ್.ಡಿ ಅಧ್ಯಯನಕ್ಕಾಗಿ ಈ ಸೌಲಭ್ಯವನ್ನು ಒದಗಿಸುವುದು.

**6) ಡಿ. ದೇವರಾಜ ಅರಸು ವಿದೇಶಿ ವ್ಯಾಸಂಗ ವೇತನ**

1) ಭಾರತ ದೇಶದ ಪ್ರಜೆಯಾಗಿದ್ದು, ಕರ್ನಾಟಕ ರಾಜ್ಯದ ಖಾಯಂ ನಿವಾಸಿಯಾಗಿರಬೇಕು.
2) ಸ್ನಾತಕೋತ್ತರ ಪದವಿ/ಪಿಹೆಚ್.ಡಿ/ಸಂಶೋಧನೆ– ಸಂಬಂಧಪಟ್ಟ ಪದವಿ/ಸ್ನಾತಕೋತ್ತರ ಪದವಿಯಲ್ಲಿ ಕನಿಷ್ಠ ಶೇ.70 ಅಂಕಗಳು ಅಥವಾ ಸಮಾನವಾದ ಗ್ರೇಡ್ ಪಡೆದಿರಬೇಕು.
3) **ವಯೋಮಿತಿ:** ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಸರಿಯಾಗಿ ಸ್ನಾತಕೋತ್ತರ ಪದವಿಗೆ 25 ವರ್ಷ ಹಾಗೂ ಪಿಹೆಚ್.ಡಿ ಗೆ 27 ವರ್ಷದ ಮಿತಿಯೊಳಗಿರಬೇಕು.
4) **ಆದಾಯಮಿತಿ:** ವಿದ್ಯಾರ್ಥಿ ಮತ್ತು ಕುಟುಂಬದ ವಾರ್ಷಿಕ ಆದಾಯ ರೂ.6.00 ಲಕ್ಷ

5) ಧನಸಹಾಯದ ಮೊತ್ತ:

ಅ) ವಾರ್ಷಿಕವಾಗಿ ಗರಿಷ್ಠ ರೂ.10.00 ಲಕ್ಷ ಅಥವಾ ವಾಸ್ತವ ವೆಚ್ಚ ಇವೆರಡರಲ್ಲಿ ಯಾವುದು ಕಡಿಮೆಯೋ ಆ ಮೊತ್ತವನ್ನು ನೀಡಲಾಗುವುದು.

ಆ) ಒಂದು ಕುಟುಂಬದ ಒಬ್ಬ ವಿದ್ಯಾರ್ಥಿಗೆ ಮಾತ್ರ ಈ ಧನಸಹಾಯವನ್ನು ನೀಡಲಾಗುವುದು.

6) ಧನ ಸಹಾಯದ ಅವಧಿ

ಅ) ಸ್ನಾತಕೋತ್ತರ ಪದವಿ – ಗರಿಷ್ಠ 2 ವರ್ಷ ಅಥವಾ ಕೋರ್ಸ್ ಮುಕ್ತಾಯದ ಅವಧಿಯಲ್ಲಿ ಯಾವುದು ಮೊದಲೋ ಆ ಅವಧಿಯನ್ನು ಪರಿಗಣಿಸಲಾಗುವುದು.

ಆ) ಪಿಎಚ್.ಡಿ/ಸಂಶೋಧನೆ – ಗರಿಷ್ಠ 3 ವರ್ಷ ಅಥವಾ ಕೋರ್ಸ್ ಮುಕ್ತಾಯದ ಅವಧಿಯಲ್ಲಿ ಯಾವುದು ಮೊದಲೋ ಆ ಅವಧಿಯನ್ನು ಪರಿಗಣಿಸಲಾಗುವುದು.

7) ಆಯ್ಕೆ ವಿಧಾನ – ಮೂರು ಹಂತಗಳನ್ನು ಒಳಗೊಂಡಿದೆ.

ಅ) ವಿದ್ಯಾರ್ಥಿಯಿಂದ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಕೆ.

ಆ) ಸಂಬಂಧಪಟ್ಟ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಮೂಲ ದಾಖಲೆಗಳ ಪರಿಶೀಲನೆ ಮತ್ತು ಮನೆ ಭೇಟಿ ಮಾಡಿ ಸ್ಥಳ ಪರಿಶೀಲನೆ.

ಇ) ಸರ್ಕಾರದ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಂದರ್ಶನ.

8) ನಿಗದಿಪಡಿಸಿರುವ ಮೀಸಲಾತಿ –

| ಪ್ರವರ್ಗ | ಶೇಕಡವಾರು |
|---|---|
| ಪ್ರವರ್ಗ–1 | 24% |
| ಪ್ರವರ್ಗ–2ಎ | 46% |
| ಪ್ರವರ್ಗ–3ಎ | 14% |
| ಪ್ರವರ್ಗ–3ಬಿ | 16% |
| ಒಟ್ಟು | 100% |

ಪ್ರತಿ ಪ್ರವರ್ಗದಲ್ಲಿ ಶೇ.33 ರಷ್ಟು ಮಹಿಳಾ ವಿದ್ಯಾರ್ಥಿಗಳು, ಶೇ.5 ರಷ್ಟು ಗ್ರಾಮೀಣ ಅಭ್ಯರ್ಥಿಗಳು ಮತ್ತು ಶೇ.3 ರಷ್ಟು ವಿಶೇಷ ಚೇತನ ವಿದ್ಯಾರ್ಥಿಗಳಿಗೆ ವಿದೇಶಿ ವ್ಯಾಸಂಗ ವೇತನ ನೀಡಲಾಗುವುದು.

7) ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ 'ಡಿ. ದೇವರಾಜ ಅರಸು ಪ್ರತಿಭಾ ಪುರಸ್ಕಾರ:

1. ಭಾರತದ ಪ್ರಜೆಯಾಗಿದ್ದು, ಕರ್ನಾಟಕದ ಖಾಯಂ ನಿವಾಸಿಯಾಗಿರಬೇಕು.
2. ಕರ್ನಾಟಕ ಸರ್ಕಾರ ಅಧಿಸೂಚಿಸಿರುವ ಹಿಂದುಳಿದ ವರ್ಗಗಳ ಪಟ್ಟಿಗೆ ಸೇರಿರಬೇಕು.
3. ಶಾಸನಬದ್ಧ ವಿಶ್ವವಿದ್ಯಾಲಯಗಳು/ಅಧೀನಕ್ಕೆ ಒಳಪಡುವ/ಸರ್ಕಾರಿ/ಸ್ಥಳೀಯ ಸಂಸ್ಥೆಗಳು/ ಅನುದಾನಿತ ಸಂಸ್ಥೆಗಳು/ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ ಅಧ್ಯಯನ ಮಾಡಿರಬೇಕು.
4. ಸಮಾನ ಕೋರ್ಸ್‌ಗಳಿಗೆ ಸಂಬಂಧಿಸಿದಂತೆ ಒಬ್ಬ ವಿದ್ಯಾರ್ಥಿಗೆ ಒಂದು ಬಾರಿ ಮಾತ್ರ ಈ ಸೌಲಭ್ಯವನ್ನು ಒದಗಿಸುವುದು.
5. ಕುಟುಂಬದ ಒಟ್ಟು ವಾರ್ಷಿಕ ಆದಾಯಮಿತಿ:
   ಪ್ರವರ್ಗ–1 – ರೂ.2.50 ಲಕ್ಷ.
   ಪ್ರವರ್ಗ–2(ಎ), 3(ಎ) ಮತ್ತು 3(ಬಿ) – ರೂ.1.00 ಲಕ್ಷ.

8) ನಿಲಯಾರ್ಥಿಗಳಿಗೆ ಪ್ರೋತ್ಸಾಹಧನ

1. ವಾರ್ಷಿಕ ಪಬ್ಲಿಕ್ ಪರೀಕ್ಷೆಗಳಲ್ಲಿ ಮೊದಲ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ನಿಲಯಾರ್ಥಿಗಳು ನಿಗದಿತ ಕಾಲಾವಕಾಶದೊಳಗೆ ಸಂಬಂಧಪಟ್ಟ ವಿದ್ಯಾರ್ಥಿನಿಲಯದ ಮೇಲ್ವಿಚಾರಕರು/ ನಿಲಯಪಾಲಕರ ಮುಖಾಂತರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು/ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿಗಳಿಗೆ ಅರ್ಜಿ ಸಲ್ಲಿಸಬೇಕು.

2. ನಿಲಯದ ಮೇಲ್ವಿಚಾರಕರು/ನಿಲಯಪಾಲಕರು ಸದರಿ ವಿದ್ಯಾರ್ಥಿನಿಲಯದ ನಿಲಯಾರ್ಥಿಯಾಗಿದ್ದರೆಂದು ಪ್ರಮಾಣೀಕರಿಸಬೇಕು ಮತ್ತು ಅವನ/ಅವಳ ಹೆಸರನ್ನು ಪ್ರೋತ್ಸಾಹಧನ ಮಂಜೂರಾತಿಗಾಗಿ ಶಿಫಾರಸ್ಸು ಮಾಡಬೇಕು.
3. ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿಗಳು ನಿಲಯಾರ್ಥಿಗಳ ಹೆಸರು, ವಿದ್ಯಾರ್ಥಿ ನಿಲಯದ ಹೆಸರು, ಪರೀಕ್ಷೆ ಮತ್ತು ಯಾವ ಪರೀಕ್ಷೆಯಲ್ಲಿ ಅವನು/ಅವಳು ಪ್ರಥಮ ದರ್ಜೆಯನ್ನು ಪಡೆದಿದ್ದಾರೆ ಮುಂತಾದ ಮಾಹಿತಿಯನ್ನೊಳಗೊಂಡು ಕ್ರೋಢೀಕೃತ ಪ್ರಸ್ತಾವನೆಯನ್ನು ತಯಾರಿಸಿ ಅಗತ್ಯ ಮಾಹಿತಿಗಳೊಡನೆ ಮಂಜೂರಾತಿಗಾಗಿ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸಲ್ಲಿಸಬೇಕು.
4. ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ವಯ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಪ್ರಸ್ತಾವನೆಯನ್ನು ಪರಿಶೀಲಿಸಿ ಮಂಜೂರಾತಿ ಆದೇಶವನ್ನು ನೀಡುವುದು.
5. ನಿಲಯಾರ್ಥಿಗಳು ಹಾಜರುಪಡಿಸುವ ಮೂಲ ಅಂಕಪತ್ರಗಳನ್ನು ಪರಿಶೀಲಿಸಿದ ನಂತರ ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿಗಳು ಹಣವನ್ನು ಖಜಾನೆಯಿಂದ ಪಡೆದು ಸಂಬಂಧಪಟ್ಟವರಿಗೆ ಹಂಚಿಕೆ ಮಾಡುವುದು.

**9) IIT/IIM/IISc ಮುಂತಾದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ**

1. ಅಭ್ಯರ್ಥಿಯು ಭಾರತ ದೇಶದ ಪ್ರಜೆಯಾಗಿದ್ದು, ಕರ್ನಾಟಕ ರಾಜ್ಯದ ಖಾಯಂ ನಿವಾಸಿಯಾಗಿರಬೇಕು.
2. ಕೇಂದ್ರ/ರಾಜ್ಯ ಸರ್ಕಾರದ/ಅನುದಾನಿತ ಸಂಸ್ಥೆಗಳ/ಸಾರ್ವಜನಿಕ ಸ್ವಾಮ್ಯತೆಗೆ ಒಳಪಟ್ಟ ಸಂಸ್ಥೆಗಳಲ್ಲಿನ ನೌಕರರು ಈ ಯೋಜನೆಗೆ ಅರ್ಜಿ ಸಲ್ಲಿಸಲು ಮತ್ತು ಧನಸಹಾಯ ಪಡೆಯಲು ಅರ್ಹರಲ್ಲ.
3. ರಾಜ್ಯದ ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ ಅಥವಾ 3ಬಿ ಗೆ ಸೇರಿದವರಾಗಿರಬೇಕು ಅರ್ಜಿದಾರರ ಕುಟುಂಬದ ವಾರ್ಷಿಕ ಆದಾಯ ರೂ.6.00 ಲಕ್ಷಗಳಿಗೆ ಮೀರಿರಬಾರದು. ಆರ್ಥಿಕವಾಗಿ ಹಿಂದುಳಿದ, ವಾರ್ಷಿಕವಾಗಿ ರೂ.6.00 ಲಕ್ಷಗಳಿಗಿಂತ ಕಡಿಮೆ ಆದಾಯ ಹೊಂದಿರುವ ಸಾಮಾನ್ಯ ಅಭ್ಯರ್ಥಿಗಳು ಸಹ ಈ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.
4. ಅರ್ಜಿಯೊಂದಿಗೆ ವಿದ್ಯಾರ್ಥಿಗಳು ಸಲ್ಲಿಸಿರುವ ದಾಖಲೆಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಿ ಮೂಲ ದಾಖಲೆಗಳನ್ನು ಪರಿಶೀಲಿಸಿಕೊಳ್ಳತಕ್ಕದ್ದು.
5. IIM,IIT,IISC– ಮುಂತಾದ ಪ್ರತಿಷ್ಠಿತ ರಾಷ್ಟ್ರೀಯ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆದಿರಬೇಕು.
6. ಆದಾಯ ಮಿತಿ – ಅರ್ಜಿದಾರರು ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ ಅಥವಾ 3ಬಿ ಗೆ ಸೇರಿದವರಾಗಿರಬೇಕು. ಅಭ್ಯರ್ಥಿ ಮತ್ತು ಕುಟುಂಬದ ವಾರ್ಷಿಕ ಆದಾಯ ರೂ.6.00 ಲಕ್ಷಗಳಿಗೆ ಮೀರಿರಬಾರದು.
7. IIM,IIT,IISC – ಮುಂತಾದ ಒಟ್ಟು 13 ಪ್ರತಿಷ್ಠಿತ ರಾಷ್ಟ್ರೀಯ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪದವಿ, ಸ್ನಾತಕೋತ್ತರ ಪದವಿ ಹಾಗೂ ಪೂರ್ಣಾವಧಿ ಪಿಹೆಚ್.ಡಿಗಾಗಿ ಪ್ರಥಮ ವರ್ಷಕ್ಕೆ ಪ್ರವೇಶ ಪಡೆದು ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಸದರಿ ಕಾರ್ಯಕ್ರಮದಡಿ ಸೌಲಭ್ಯ ಒದಗಿಸಲಾಗುವುದು.
8. ಈ ಮೇಲ್ಕಂಡ ಸಂಸ್ಥೆಗಳಲ್ಲಿ ಡಿಪ್ಲೋಮಾ, ಪಿಜಿ ಡಿಪ್ಲೋಮಾ ಹಾಗೂ ಇತರೆ ಸರ್ಟಿಫಿಕೇಟ್ ಕೋರ್ಸುಗಳಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಈ ಕಾರ್ಯಕ್ರಮದಲ್ಲಿ ಧನ ಸಹಾಯ ಪಡೆಯಲು ಅರ್ಹರಿರುವುದಿಲ್ಲ.
9. IIM,IIT,IISC ಮುಂತಾದ ಪ್ರತಿಷ್ಠಿತ ಸಂಸ್ಥೆಗಳಲ್ಲಿ ಪ್ರಥಮ ವರ್ಷಕ್ಕೆ ಪ್ರವೇಶ ಪಡೆದ ವಿದ್ಯಾರ್ಥಿಗಳು ತಮ್ಮ ಜೀವಿತಾವಧಿಯಲ್ಲಿ ಒಂದು ಭಾರಿ ಮಾತ್ರ ಈ ಸೌಲಭ್ಯವನ್ನು ಪಡೆಯಲು ಅರ್ಹರಿರುತ್ತಾರೆ.
10. ಈ ಕಾರ್ಯಕ್ರಮವು ವಿದ್ಯಾರ್ಥಿಗಳಿಗೆ ಅವರ ಶಿಕ್ಷಣವನ್ನು ಮುಂದುವರೆಸಲು ಪ್ರೋತ್ಸಾಹ ನೀಡುವ ಕಾರ್ಯಕ್ರಮವಾಗಿದ್ದು, ಈ ಸೌಲಭ್ಯವನ್ನು ಪಡೆಯುವ ವಿದ್ಯಾರ್ಥಿಗಳು ಶುಲ್ಕ ವಿನಾಯಿತಿ ಯೋಜನೆಯಡಿಯು ಸಹ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.

## III. ತರಬೇತಿ ಕಾರ್ಯಕ್ರಮಗಳು

### 1) ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳ ಪರೀಕ್ಷಾ ಪೂರ್ವ ತರಬೇತಿ

ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಐ.ಎ.ಎಸ್, ಕೆ.ಎ.ಎಸ್ ಹಾಗೂ ಬ್ಯಾಂಕ್ ಪ್ರೊಬೇಷನರ್ ಆಫೀಸರ್ಸ್ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿಯನ್ನು ಖಾಸಗಿ ತರಬೇತಿ ಸಂಸ್ಥೆಗಳ ಮೂಲಕ ನೀಡಲಾಗುತ್ತಿದೆ.

**ಅರ್ಹತೆಗಳು:**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಹಿಂದುಳಿದ ವರ್ಗಗಳ ಅಭ್ಯರ್ಥಿಯು ಐ.ಎ.ಎಸ್, ಕೆ.ಎ.ಎಸ್ ಅಥವಾ ಬ್ಯಾಂಕ್ ಪ್ರೊಬೇಷನರ್ ಆಫೀಸರ್ಸ್ ಪರೀಕ್ಷೆಗಳ ಪರೀಕ್ಷಾ ಪೂರ್ವ ತರಬೇತಿಗಳಲ್ಲಿ ಯಾವುದಾರೊಂದಕ್ಕೆ ಒಂದು ಬಾರಿ ಮಾತ್ರ ಉಚಿತ ಪರೀಕ್ಷಾ ಪೂರ್ವ ತರಬೇತಿಯನ್ನು ಪಡೆಯಬಹುದು.

1. ಕರ್ನಾಟಕ ರಾಜ್ಯದ ನಿವಾಸಿಯಾಗಿದ್ದು, ಹಿಂದುಳಿದ ವರ್ಗಗಳ ಪ್ರವರ್ಗ-1, 2(ಎ), 3(ಎ) ಅಥವಾ 3(ಬಿ) ಗೆ ಸೇರಿದ ಅರ್ಹ ಅಭ್ಯರ್ಥಿಗಳು online ಮೂಲಕ ಅರ್ಜಿಗಳನ್ನು ಸಲ್ಲಿಸುವುದು.
2. ಅಭ್ಯರ್ಥಿಯ ಮತ್ತು ಕುಟುಂಬದ ವಾರ್ಷಿಕ ಆದಾಯ ಮಿತಿ ಪ್ರವರ್ಗ 1 ರ ಅಭ್ಯರ್ಥಿಗಳಿಗೆ ರೂ.4.50 ಲಕ್ಷ ಹಾಗೂ ಪ್ರವರ್ಗ 2(ಎ), 3(ಎ) ಮತ್ತು 3(ಬಿ) ಅಭ್ಯರ್ಥಿಗಳಿಗೆ ರೂ.3.50 ಲಕ್ಷಗಳು.
3. ಅಭ್ಯರ್ಥಿಯು ಸಕ್ಷಮ ಪ್ರಾಧಿಕಾರದಿಂದ ಪಡೆದಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರವನ್ನು ಹೊಂದಿರಬೇಕು.
4. ಅಭ್ಯರ್ಥಿಯು ಯಾವುದಾದರೊಂದು ಅಂಗೀಕೃತ ವಿಶ್ವವಿದ್ಯಾಲಯದ ಪದವೀಧರನಾಗಿರಬೇಕು ಅಥವಾ ಕೇಂದ್ರ ಲೋಕಸೇವಾ ಆಯೋಗ/ಕರ್ನಾಟಕ ಲೋಕಸೇವಾ ಆಯೋಗ/ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು (ಬ್ಯಾಂಕ್) ಕೋರುವ ಷರತ್ತಿಗೊಳಪಟ್ಟಿರಬೇಕು.
5. ಅಭ್ಯರ್ಥಿಯು ಕನಿಷ್ಠ 21 ವರ್ಷ ವಯಸ್ಸಿನವರಾಗಿರಬೇಕು.
6. ಕೇಂದ್ರ/ರಾಜ್ಯ ಸರ್ಕಾರದ/ಅನುದಾನಿತ ಸಂಸ್ಥೆಗಳ/ಸಾರ್ವಜನಿಕ ಸ್ವಾಮ್ಯತೆಗೆ ಒಳಪಟ್ಟ ಸಂಸ್ಥೆಗಳಲ್ಲಿನ ನೌಕರರು ಅರ್ಜಿ ಸಲ್ಲಿಸಲು ಮತ್ತು ತರಬೇತಿ ಪಡೆಯಲು ಅರ್ಹರಲ್ಲ.

### 2) ಹಿಂದುಳಿದ ವರ್ಗದ ನರ್ಸಿಂಗ್ ವಿದ್ಯಾರ್ಥಿಗಳಿಗೆ ಶಿಷ್ಯವೇತನ, ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ:

**ಅವಧಿ:**

ಡಿ.ಜಿ.ಎನ್.ಎಂ. – 3 1/2 ವರ್ಷಗಳು.

ಬಿ.ಎಸ್ಸಿ. ನರ್ಸಿಂಗ್ – 4 ವರ್ಷಗಳು.

ಪ್ಯಾರಾ ಮೆಡಿಕಲ್ (ಎಸ್.ಎಸ್.ಎಲ್.ಸಿ) – 3 ವರ್ಷಗಳು.

ಪ್ಯಾರಾ ಮೆಡಿಕಲ್ (ಪಿ.ಯು.ಸಿ) – 2 ವರ್ಷಗಳು.

**ಅಭ್ಯರ್ಥಿಗಳಿಗೆ ನಿಗದಿಪಡಿಸಿರುವ ಅರ್ಹತೆ:**

1. ಅಭ್ಯರ್ಥಿಗಳ ಮತ್ತು ಕುಟುಂಬದ ವಾರ್ಷಿಕ ಆದಾಯ ಮಿತಿ ಪ್ರವರ್ಗ 1 ರ ಅಭ್ಯರ್ಥಿಗಳಿಗೆ ರೂ.2.50 ಲಕ್ಷ ಹಾಗೂ ಪ್ರವರ್ಗ 2 (ಎ), 3 (ಎ) ಮತ್ತು 3 (ಬಿ) ಅಭ್ಯರ್ಥಿಗಳಿಗೆ ರೂ.1.00 ಲಕ್ಷಗಳು.
2. ಡಿ.ಜಿ.ಎನ್.ಎಂ, ಬಿ.ಎಸ್ಸಿ. ನರ್ಸಿಂಗ್ ಮತ್ತು ಪ್ಯಾರಾ ಮೆಡಿಕಲ್ (ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ.) ಅಭ್ಯರ್ಥಿಗಳನ್ನು ಅವರ ಹಿಂದಿನ ವಾರ್ಷಿಕ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳ ಆಧಾರದ ಮೇಲೆ ತರಬೇತಿಗೆ ಆಯ್ಕೆ ಮಾಡಲಾಗುವುದು.

### 3) ವಿಶ್ವವಿದ್ಯಾಲಯಗಳಲ್ಲಿನ ಹಿಂದುಳಿದ ವರ್ಗಗಳ ಕೋಶಕ್ಕೆ ಅನುದಾನ:

1. ಕರ್ನಾಟಕ ರಾಜ್ಯದ ಸರ್ಕಾರಿ ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ ಸ್ಥಾಪಿಸಿರುವ ಹಿಂದುಳಿದ ವರ್ಗಗಳ ಕೋಶವನ್ನು ಬಲಪಡಿಸುವುದು.

2. ಹಿಂದುಳಿದ ವರ್ಗಗಳ ಕೋಶದ ಮೂಲಕ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ವಿವಿಧ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲು ವಿಶ್ವವಿದ್ಯಾಲಯಗಳಿಗೆ ಧನಸಹಾಯವನ್ನು ಒದಗಿಸುವುದು.

**4) ಕಾನೂನು ಪದವೀಧರರಿಗೆ ತರಬೇತಿ**

1. ಅಭ್ಯರ್ಥಿಗಳ ಮತ್ತು ಕುಟುಂಬದ ವಾರ್ಷಿಕ ಆದಾಯ ಮಿತಿ ಪ್ರವರ್ಗ 1 ರ ಅಭ್ಯರ್ಥಿಗಳಿಗೆ ರೂ.3.50 ಲಕ್ಷ ಹಾಗೂ ಪ್ರವರ್ಗ 2 (ಎ), 3 (ಎ) ಮತ್ತು 3 (ಬಿ) ಅಭ್ಯರ್ಥಿಗಳಿಗೆ ರೂ.2.50 ಲಕ್ಷಗಳು.
2. ಪ್ರವರ್ಗ–1 ರ ಅಭ್ಯರ್ಥಿಗಳಿಗೆ 31 ವರ್ಷಗಳು ಮತ್ತು ಇತರ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ 30 ವರ್ಷ ಗರಿಷ್ಠ ವಯೋಮಿತಿ ಇರುತ್ತದೆ.
3. ಅರ್ಭರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿರಬೇಕು. ತರಬೇತಿಗೆ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕಕ್ಕೆ ಹಿಂದೆ 2 ವರ್ಷಗಳೊಳಗಾಗಿ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
4. ಅವಧಿ: 4 ವರ್ಷಗಳ ಅವಧಿಗೆ ವಕೀಲಿ ವೃತ್ತಿಯಲ್ಲಿ ತರಬೇತಿ.
5. ಅಭ್ಯರ್ಥಿಗಳ ಸಂಖ್ಯೆ ಪ್ರತಿ ಜಿಲ್ಲೆಯಲ್ಲಿ ಗರಿಷ್ಠ 10 ಅಭ್ಯರ್ಥಿಗಳು (ಜಿಲ್ಲಾವಲಯ ಕಾರ್ಯಕ್ರಮವಾಗಿದೆ).

**5) ಹೋಂಗಾರ್ಡ್ ತರಬೇತಿ**

1. ಅಭ್ಯರ್ಥಿಯು 7ನೇ ತರಗತಿಯಲ್ಲಿ ತೇರ್ಗಡೆಯಾಗಿರಬೇಕು.
2. ಅಭ್ಯರ್ಥಿಗಳ ಮತ್ತು ಕುಟುಂಬದ ವಾರ್ಷಿಕ ಆದಾಯ ಮಿತಿ ಪ್ರವರ್ಗ 1 ರ ಅಭ್ಯರ್ಥಿಗಳಿಗೆ ರೂ.2.50 ಲಕ್ಷ ಹಾಗೂ ಪ್ರವರ್ಗ 2(ಎ), 3(ಎ) ಅಥವಾ 3(ಬಿ) ಅಭ್ಯರ್ಥಿಗಳಿಗೆ ರೂ.1.00 ಲಕ್ಷಗಳು
3. ಹೋಂಗಾರ್ಡ್ ತರಬೇತಿ ಕೇಂದ್ರಗಳಲ್ಲಿ ನಡೆಸುವ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳು 2 ವರ್ಷದೊಳಗೆ ಮತ್ತೆ ಒಮ್ಮೆ ಪರೀಕ್ಷೆಗೆ ಹಾಜರಾಗಲು ಅವಕಾಶವಿರುತ್ತದೆ.

**6) ಭಾರತೀಯ ಸೇನೆಗೆ ಸೇರ ಬಯಸುವ ರಾಜ್ಯದ ಹಿಂದುಳಿದ ವರ್ಗಗಳ ಅರ್ಹ ಅಭ್ಯರ್ಥಿಗಳಿಗೆ ಆಯ್ಕೆಯ ಪೂರ್ವ ಸಿದ್ಧತೆ ಬಗ್ಗೆ ವೃತ್ತಿ ಮಾರ್ಗದರ್ಶನ ಮತ್ತು ತರಬೇತಿ.**

1. ಅಭ್ಯರ್ಥಿಯು ಕರ್ನಾಟಕ ರಾಜ್ಯದ ಖಾಯಂ ನಿವಾಸಿಯಾಗಿದ್ದು, ರಾಜ್ಯದ ಹಿಂದುಳಿದ ವರ್ಗಗಳ ಪ್ರವರ್ಗ–1, 2(ಎ), 3(ಎ) ಅಥವಾ 3(ಬಿ) ಗೆ ಸೇರಿರಬೇಕು.
2. ಅಭ್ಯರ್ಥಿಯ ಮತ್ತು ಕುಟುಂಬದ ಒಟ್ಟು ವಾರ್ಷಿಕ ಆದಾಯ ಮಿತಿ – ಪ್ರವರ್ಗ–1ರ ಅಭ್ಯರ್ಥಿಗಳಿಗೆ ರೂ.2.50 ಲಕ್ಷ ಮತ್ತು ಪ್ರವರ್ಗ 2(ಎ), 3(ಎ) ಮತ್ತು 3(ಬಿ) ಗಳ ಅಭ್ಯರ್ಥಿಗಳಿಗೆ ರೂ.1.00 ಲಕ್ಷ.
3. ಭಾರತೀಯ ಸೇನೆಗಳಿಗೆ ನಿಗದಿಪಡಿಸುವ ವಿದ್ಯಾರ್ಹತೆ, ವಯೋಮಿತಿ ಮತ್ತು ಇತರೆ ಅರ್ಹತೆಗಳನ್ನು ಹೊಂದಿರಬೇಕು.

**7) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿರುವ ವಿದ್ಯಾರ್ಥಿಗಳಿಗೆ ವೃತ್ತಿ ಮಾರ್ಗದರ್ಶನ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ.**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿರುವ ಅಂತಿಮ ಪದವಿ ಮತ್ತು ಸ್ನಾತಕೋತ್ತರ ಪದವಿಯನ್ನು ಅಧ್ಯಯನ ಮಾಡುತ್ತಿರುವ ಆಸಕ್ತ ವಿದ್ಯಾರ್ಥಿಗಳಲ್ಲಿ ಐ.ಎ.ಎಸ್, ಐ.ಪಿ.ಎಸ್, ಕೆ.ಎ.ಎಸ್, ಬ್ಯಾಂಕಿಂಗ್ ಇತ್ಯಾದಿ ಸ್ಪರ್ಧಾತ್ಮಕ ಪರೀಕ್ಷೆಗಳ ಬಗ್ಗೆ ತಿಳುವಳಿಕೆ ಹೆಚ್ಚಿಸಲು ಮತ್ತು ಮಾರ್ಗದರ್ಶನ ನೀಡಲು ಪ್ರತಿ ಶೈಕ್ಷಣಿಕ ವರ್ಷದಲ್ಲಿ 3 ಬಾರಿ 1 ದಿನದ ಕಾರ್ಯಕ್ರಮವನ್ನು ತಾಲ್ಲೂಕು ಮಟ್ಟದಲ್ಲಿ ಅನುಷ್ಠಾನಗೊಳಿಸುವುದು.

## IV. ಅಲೆಮಾರಿ ಮತ್ತು ಅರೆಅಲೆಮಾರಿ ಜನಾಂಗದ ಅಭಿವೃದ್ಧಿ ಕಾರ್ಯಕ್ರಮಗಳು

**1) ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ವಿಶೇಷ ಪ್ರೋತ್ಸಾಹಧನ**

1. ಹಿಂದುಳಿದ ವರ್ಗಗಳ ಅಲೆಮಾರಿ ಹಾಗೂ ಅರೆಅಲೆಮಾರಿ ಪಂಗಡಕ್ಕೆ ಸೇರಿದ ವಿದ್ಯಾರ್ಥಿ ಆಗಿರಬೇಕು.
2. ವಿದ್ಯಾರ್ಥಿಯ, ಅವರ ತಂದೆ-ತಾಯಿ ಪಾಲಕರು/ಪೋಷಕರ ವಾರ್ಷಿಕ ಆದಾಯ ರೂ.2.00 ಲಕ್ಷ ಮಿತಿಯೊಳಗಿರಬೇಕು.
3. ವಿದ್ಯಾರ್ಥಿಯು, 1 ರಿಂದ 10ನೇ ತರಗತಿಯವರೆಗೆ, ಸರ್ಕಾರಿ ಅಥವಾ ಸರ್ಕಾರದಿಂದ ಮಾನ್ಯತೆ ಪಡೆದ ಖಾಸಗಿ ಶಿಕ್ಷಣ ಸಂಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿರಬೇಕು.
4. ಈ ಯೋಜನೆಯಡಿ ಅರ್ಜಿ ಸಲ್ಲಿಸಲು ವಿದ್ಯಾರ್ಥಿ ಹಿಂದಿನ ತರಗತಿಯ ವಾರ್ಷಿಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
5. ವಿದ್ಯಾರ್ಥಿಯು ಸರ್ಕಾರದ ಇನ್ನಾವುದೇ ಯೋಜನೆಯಿಂದ ವಿದ್ಯಾರ್ಥಿವೇತನ ಅಥವಾ ವಸತಿನಿಲಯ ಸೌಲಭ್ಯವನ್ನು ಪಡೆದಿರಬಾರದು.
6. ಈ ಪ್ರೋತ್ಸಾಹಧನವನ್ನು ನವೀಕರಿಸಲು ವಿದ್ಯಾರ್ಥಿಯು ಹಿಂದಿನ ತರಗತಿಯ ವಾರ್ಷಿಕ ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗಿರಬೇಕು.

**2) ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಅರ್ಹತಾ ವಿದ್ಯಾರ್ಥಿವೇತನ**

1. ವಿದ್ಯಾರ್ಥಿಯು ಹಿಂದುಳಿದ ವರ್ಗಗಳ ಅಲೆಮಾರಿ ಹಾಗೂ ಅರೆಅಲೆಮಾರಿ ಪಂಗಡಗಳಿಗೆ ಸೇರಿರಬೇಕು. (ಹಾಲಿ ಚಾಲ್ತಿಯಲ್ಲಿರುವ ಹಿಂದುಳಿದ ವರ್ಗಗಳ ಪಟ್ಟಿಯ ಪ್ರವರ್ಗ-1ರಲ್ಲಿ ಸೇರಿಸಲ್ಪಟ್ಟಿರಬೇಕು ಹಾಗೂ ದಿನಾಂಕ: 01-02-1966ರ ಆದೇಶದಲ್ಲಿ ಅಲೆಮಾರಿ ಹಾಗೂ ಅರೆಅಲೆಮಾರಿ ಪಂಗಡಗಳೆಂದು ಗುರ್ತಿಸಲ್ಪಟ್ಟಿರಬೇಕು)
2. ಅಭ್ಯರ್ಥಿಯು ಈ ಯೋಜನೆಯ ಸೌಲಭ್ಯಕ್ಕೆ ಪ್ರಥಮವಾಗಿ ಅರ್ಜಿ ಸಲ್ಲಿಸಲು ಹಿಂದಿನ ತರಗತಿಯ ವಾರ್ಷಿಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
3. ಈ ಅರ್ಹತಾ ವಿದ್ಯಾರ್ಥಿ ವೇತನದ ನವೀಕರಣಕ್ಕೆ ವಿದ್ಯಾರ್ಥಿಯು ಹಿಂದಿನ ತರಗತಿ ಪರೀಕ್ಷೆಯ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗಿರಬೇಕು.
4. ವಿದ್ಯಾರ್ಥಿಯು ಪೋಷಕರ/ಪಾಲಕರ ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷಗಳಿಗಿಂತ ಮೀರಿರಬಾರದು.
5. ವಿದ್ಯಾರ್ಥಿಯು ಸರ್ಕಾರದಿಂದ/ ವಿಶ್ವವಿದ್ಯಾಲಯದಿಂದ ಇನ್ನಾವುದೇ ವಿದ್ಯಾರ್ಥಿವೇತನ ಅಥವಾ ಉಚಿತ ವಿದ್ಯಾರ್ಥಿನಿಲಯ ಸೌಲಭ್ಯ ಪಡೆದಿರಬಾರದು.

**3) ಆಶ್ರಮ ಶಾಲೆಗಳ ಪ್ರಾರಂಭ ಹಾಗೂ ನಿರ್ವಹಣೆ:**

1. ಹಿಂದುಳಿದ ವರ್ಗಗಳ ಅಲೆಮಾರಿ ಹಾಗೂ ಅರೆಅಲೆಮಾರಿ ಪಂಗಡಗಳಿಗೆ ಸೇರಿರಬೇಕು. (ಹಾಲಿ ಚಾಲ್ತಿಯಲ್ಲಿರುವ ಹಿಂದುಳಿದ ವರ್ಗಗಳ ಪಟ್ಟಿಯ ಪ್ರವರ್ಗ-1ರಲ್ಲಿ ಸೇರಿಸಲ್ಪಟ್ಟಿರಬೇಕು ಹಾಗೂ ದಿನಾಂಕ: 01-02-1966ರ ಆದೇಶದಲ್ಲಿ ಅಲೆಮಾರಿ ಹಾಗೂ ಅರೆಅಲೆಮಾರಿ ಪಂಗಡಗಳೆಂದು ಗುರ್ತಿಸಲ್ಪಟ್ಟಿರಬೇಕು)
2. 1ನೇ ತರಗತಿಗೆ ಪ್ರವೇಶ ಪಡೆಯುವ ಮಕ್ಕಳ ವಯಸ್ಸು ಸಾರ್ವಜನಿಕ ಶಿಕ್ಷಣ ಇಲಾಖೆಯು ಪ್ರಾಥಮಿಕ ಶಾಲೆ ಪ್ರವೇಶಕ್ಕೆ ನಿಗದಿಪಡಿಸಿರುವ ಕನಿಷ್ಠ ವಯೋಮಿತಿ ಉಳ್ಳವರಾಗಿರತಕ್ಕದ್ದು.
3. ಈ ಆಶ್ರಮ ಶಾಲೆಗಳಲ್ಲಿ ಶೇ.75 ಭಾಗ ಅಲೆಮಾರಿ ಹಾಗೂ ಅರೆಅಲೆಮಾರಿ ಜನಾಂಗದ ಮಕ್ಕಳಿಗೆ ಕಡ್ಡಾಯವಾಗಿ ಮೀಸಲಿಡಲಾಗಿರುತ್ತದೆ. ಉಳಿದ ಶೇಕಡ 25 ರಷ್ಟು ಸ್ಥಾನಗಳನ್ನು ಈ ಕೆಳಗಿನ ಶೇಕಡವಾರು ಅನುಪಾತದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ-1, 2ಎ, 2ಬಿ, 3ಎ ಮತ್ತು 3ಬಿ ಮಕ್ಕಳಿಗೆ ಕಾಯ್ದಿರಿಸಲಾಗುತ್ತದೆ.

| ಪ್ರವರ್ಗ | 1 | 2ಎ | 2ಬಿ | 3ಎ | 3ಬಿ | ಎಸ್.ಸಿ. | ಎಸ್.ಟಿ. | ಒಟ್ಟು |
|---|---|---|---|---|---|---|---|---|
| ಶೇಕಡವಾರು ಅನುಪಾತ | 10 | 35 | 09 | 09 | 12 | 21 | 4 | 100% |

4) ರಾಜ್ಯದ ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶಾವಕಾಶ ಸೌಲಭ್ಯ.

ವಿದ್ಯಾರ್ಥಿಗಳು ಹಿಂದುಳಿದ ವರ್ಗಗಳ ಅಲೆಮಾರಿ / ಅರೆ ಅಲೆಮಾರಿ ಜಾತಿಗಳಿಗೆ ಸೇರಿರತಕ್ಕದ್ದು. ಹಾಲಿ ಚಾಲ್ತಿಯಲ್ಲಿರುವ ಹಿಂದುಳಿದ ವರ್ಗಗಳ ಪಟ್ಟಿಯ ಪ್ರವರ್ಗ-1ರಲ್ಲಿ ಸೇರಿಸಲ್ಪಟ್ಟಿರಬೇಕು ಹಾಗೂ ದಿನಾಂಕ: 01-02-1966ರ ಆದೇಶದಲ್ಲಿ ಅಲೆಮಾರಿ ಹಾಗೂ ಅರೆಅಲೆಮಾರಿ ಪಂಗಡಗಳೆಂದು ಗುರ್ತಿಸಲ್ಪಟ್ಟಿರಬೇಕು)
ಆದಾಯ ಮಿತಿ: ವಿದ್ಯಾರ್ಥಿಯ ಕುಟುಂಬದ ವಾರ್ಷಿಕ ಆದಾಯ ರೂ.2.00 ಲಕ್ಷದೊಳಗಿರಬೇಕು.

5) ಅರಿವು ಮೂಡಿಸುವ ಕಾರ್ಯಕ್ರಮ:

1. ಗೊಲ್ಲ ಹಾಗೂ ಇತರೆ ಅಲೆಮಾರಿ/ ಅರೆಅಲೆಮಾರಿ ಸಮುದಾಯದವರ ಅತ್ಯಂತ ಹೆಚ್ಚು ಜನಸಂಖ್ಯೆಯುಳ್ಳ ಕಾಲೋನಿ/ ಹಟ್ಟಿಗಳನ್ನು ಅರಿವು ಮೂಡಿಸುವ ಕಾರ್ಯಕ್ರಮಗಳಿಗಾಗಿ ಆಯ್ಕೆ ಮಾಡಲಾಗುವುದು.
2. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ವಾರ್ತಾ ಇಲಾಖೆಯ ಸಹಯೋಗದೊಂದಿಗೆ ಅರಿವು ಮೂಡಿಸುವ ಕಾರ್ಯಕ್ರಮವನ್ನು ಆಯೋಜಿಸುವುದು.
3. ಅಲೆಮಾರಿ/ ಅರೆಅಲೆಮಾರಿ ಸಮುದಾಯದವರಿಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ / ಇತರೆ ಇಲಾಖೆಗಳಿಂದ ದೊರೆಯುವ ಸವಲತ್ತುಗಳ ಬಗ್ಗೆ ಅರಿವು ಮೂಡಿಸುವುದು.
4. ಗೊಲ್ಲ ಸಮುದಾಯದ ಕಾಲೋನಿಗಳಲ್ಲಿ ಹೆಣ್ಣು ಮಕ್ಕಳ ಹೆರಿಗೆ ಹಾಗೂ ಮಾಸಿಕ ಋತುಚಕ್ರದ ಸಂದರ್ಭದಲ್ಲಿ ಗೊಲ್ಲರಹಟ್ಟಿಯಿಂದ ದೂರವಿಡುವ ಪದ್ಧತಿಯ ವಿರುದ್ಧ ಅರಿವನ್ನು ಮೂಡಿಸುವುದು.
5. ಒಂದು ಕಾರ್ಯಕ್ರಮಕ್ಕೆ ರೂ.10,000/-ದಂತೆ ಅನುದಾನ ಬಿಡುಗಡೆ ಮಾಡಲಾಗುವುದು.

6) ಮೂಲಭೂತ ಸೌಕರ್ಯಗಳು – ಕಾಂಕ್ರಿಟ್ ರಸ್ತೆ ಮತ್ತು ಚರಂಡಿ :

1. ಅಲೆಮಾರಿ / ಅರೆ ಅಲೆಮಾರಿ ಜನಾಂಗದವರು ಹೆಚ್ಚಾಗಿ ವಾಸಿಸುತ್ತಿರುವ ಕಾಲೋನಿಗಳು ಹಾಗೂ ಹೊಸದಾಗಿ ನಿರ್ಮಿಸಿರುವ ಬಡಾವಣೆಗಳಲ್ಲಿ ಕಾಂಕ್ರಿಟ್ ರಸ್ತೆ ಮತ್ತು ಚರಂಡಿ ನಿರ್ಮಾಣಕ್ಕಾಗಿ ಬರುವ ಪ್ರಸ್ತಾವನೆಗಳನ್ನು ಕರ್ನಾಟಕ ಅಲೆಮಾರಿ / ಅರೆ ಅಲೆಮಾರಿ ಅಭಿವೃದ್ಧಿ ಮಂಡಳಿಯ ಸಭೆಯಲ್ಲಿ ಮಂಡಿಸಿ, ಅನುದಾನ ಬಿಡುಗಡೆ ಮಾಡುವ ಬಗ್ಗೆ ಚರ್ಚಿಸಿ ತೀರ್ಮಾನ ಕೈಗೊಳ್ಳಲಾಗುವುದು.
2. ಜಿಲ್ಲಾಧಿಕಾರಿಗಳ ಹಂತದಲ್ಲೇ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿ, ಅನುಷ್ಠಾನ ಮಾಡುವ ಸಂಸ್ಥೆಗಳನ್ನು ಗುರುತಿಸಿ, ಕಾಮಗಾರಿಯನ್ನು ಅನುಷ್ಠಾನ ಮಾಡಲಾಗುತ್ತದೆ.

7) ವಸತಿ ಯೋಜನೆ

- ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಹಿಂದುಳಿದ ವರ್ಗಗಳ ಅಲೆಮಾರಿ / ಅರೆಅಲೆಮಾರಿ ಜನಾಂಗದ ಎಲ್ಲಾ ಜಾತಿಗಳಿಗೂ ಪ್ರಾತಿನಿಧ್ಯತೆಯನ್ನು ನೀಡುವುದು
  (ಹಾಲಿ ಚಾಲ್ತಿಯಲ್ಲಿರುವ ಹಿಂದುಳಿದ ವರ್ಗಗಳ ಪಟ್ಟಿಯ ಪ್ರವರ್ಗ-1ರಲ್ಲಿ ಸೇರಿಸಲ್ಪಟ್ಟಿರಬೇಕು ಹಾಗೂ ದಿನಾಂಕ: 01-02-1966ರ ಆದೇಶದಲ್ಲಿ ಅಲೆಮಾರಿ ಹಾಗೂ ಅರೆಅಲೆಮಾರಿ ಪಂಗಡಗಳೆಂದು ಗುರ್ತಿಸಲ್ಪಟ್ಟಿರಬೇಕು)
  - ಫಲಾನುಭವಿಯು ಬೇರೆ ಯಾವುದೇ ಯೋಜನೆ ಅಥವಾ ಇಲಾಖೆಯಿಂದ ವಸತಿ ಸೌಲಭ್ಯವನ್ನು ಪಡೆದಿರಬಾರದು.
  - ಕನಿಷ್ಠ 20 ವರ್ಷದವರೆಗೆ ಈ ನಿವೇಶನವನ್ನು ಪರಭಾರೆ ಪಡೆತಕ್ಕದ್ದಲ್ಲ. ಈ ಅವಧಿಯಲ್ಲಿ ಪರಭಾರೆ ಮಾಡಿದ್ದಲ್ಲಿ, ಮಾರಾಟ ಮಾಡುವಾಗ ಇದ್ದ ಮಾರುಕಟ್ಟೆ ಬೆಲೆಯನ್ನು ಸರ್ಕಾರಕ್ಕೆ ಪಾವತಿ ಮಾಡಬೇಕು.
  - ವಸತಿ ರಹಿತರು ಸ್ವಂತ ನಿವೇಶನ ಹೊಂದಿರಬೇಕು ಹಾಗೂ ನಿವೇಶನವು ಕುಟುಂಬದ ಮಹಿಳೆಯರ/ ಪುರುಷರ ಹೆಸರಿನಲ್ಲಿ ನೊಂದಣಿಯಾಗಿರಬೇಕು.
  - ರಾಜೀವ ಗಾಂಧಿ ವಸತಿ ನಿಗಮದ ಮೂಲಕ ಅನುಷ್ಠಾನವಾಗುವ ಎಲ್ಲಾ ವಸತಿ ಯೋಜನೆಗಳ ನಿಯಮಗಳು ಈ ಯೋಜನೆಗೂ ಅನ್ವಯವಾಗುತ್ತದೆ.
  - ಕುಟುಂಬದ ಒಟ್ಟು ವಾರ್ಷಿಕ ವರಮಾನ ರೂ.2.00 ಲಕ್ಷದ ಮಿತಿಯೊಳಗೆ ಇರಬೇಕು.

8) ನಿವೇಶನ ರಹಿತರಿಗೆ ವಸತಿ ನಿವೇಶನ ಒದಗಿಸಲು ಜಮೀನು ಖರೀದಿ

- ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಅಲೆಮಾರಿ/ಅರೆಅಲೆಮಾರಿ ಜನಾಂಗದ ಎಲ್ಲಾ ಜಾತಿಗಳಿಗೂ ಪ್ರಾತಿನಿಧ್ಯತೆಯನ್ನು ನೀಡುವುದು.
  (ಹಾಲಿ ಚಾಲ್ತಿಯಲ್ಲಿರುವ ಹಿಂದುಳಿದ ವರ್ಗಗಳ ಪಟ್ಟಿಯ ಪ್ರವರ್ಗ-1ರಲ್ಲಿ ಸೇರಿಸಲ್ಪಟ್ಟಿರಬೇಕು ಹಾಗೂ ದಿನಾಂಕ: 01-02-1966ರ ಆದೇಶದಲ್ಲಿ ಅಲೆಮಾರಿ ಹಾಗೂ ಅರೆಅಲೆಮಾರಿ ಪಂಗಡಗಳೆಂದು ಗುರ್ತಿಸಲ್ಪಟ್ಟಿರಬೇಕು)
- ಸರ್ಕಾರದ ಆದೇಶ ಸಂ.ಪಿಹೆಚ್ಎಸ್ 262 ಎಸ್ಇಡಬ್ಲ್ಯೂ 65, ದಿ:1.02.1966 ರಲ್ಲಿ ನಮೂದಿಸಿರುವ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಜಮೀನು ಖರೀದಿ ಸಮಿತಿಯಲ್ಲಿ ಸರ್ಕಾರದ ನಿಯಮಾವಳಿ ಅನುಸಾರ ಮಾರ್ಗಸೂಚಿಗಳನ್ವಯ ಜಮೀನು ಖರೀದಿಸಿ ಬಡಾವಣೆ ಅಭಿವೃದ್ಧಿ ಪಡಿಸಿ ನಿವೇಶನಗಳನ್ನು ಹಂಚುವುದು.
- ಖರೀದಿಗೆ ಪ್ರಸ್ತಾಪಿಸುವ ಜಮೀನು ಯಾವುದೇ ಋಣಭಾರದಿಂದ ಮುಕ್ತವಾಗಿರತಕ್ಕದ್ದು.

## IV. ವಿವಿಧ ಸಮುದಾಯಗಳ ಅಭಿವೃದ್ಧಿ

1) ಸಮುದಾಯ ಭವನಗಳ / ಖಾಸಗಿ ವಿದ್ಯಾರ್ಥಿನಿಲಯಗಳ ಕಟ್ಟಡ ನಿರ್ಮಾಣ

1. ಸಹಾಯಧನ ಪಡೆಯುವ ಸಂಸ್ಥೆಯು, ಕರ್ನಾಟಕ ಸಂಘ-ಸಂಸ್ಥೆಗಳ ನೋಂದಣಿ ಕಾಯ್ದೆ 1960 ಅಥವಾ ಟ್ರಸ್ಟ್ ಕಾಯ್ದೆಯನ್ವಯ/ನೋಂದಣಿ ನಿಯಮಗಳನ್ವಯ ನೋಂದಾಯಿತ ಸಂಸ್ಥೆಯಾಗಿರಬೇಕು. ಸಂಸ್ಥೆಯು ನೋಂದಣಿಯಾಗಿ ಕನಿಷ್ಠ 2 ವರ್ಷಗಳಾಗಿರಬೇಕು.
2. ಟ್ರಸ್ಟ್‌ನ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರಬೇಕು.
3. ಸಹಾಯಧನ ಬಯಸುವ ಸಂಘ ಸಂಸ್ಥೆಗಳು/ಟ್ರಸ್ಟ್‌ಗಳು, ಹಿಂದಿನ 2 ವರ್ಷಗಳ ಆಡಿಟ್ ವರದಿಗಳನ್ನು, ಚಾರ್ಟರ್ಡ್ ಅಕೌಂಟೆಂಟ್‌ರವರಿಂದ ಆಡಿಟ್ ಮಾಡಿಸಿ ಅರ್ಜಿಯೊಂದಿಗೆ ಸಲ್ಲಿಸಬೇಕು.
4. ಸಮುದಾಯ ಭವನ/ವಿದ್ಯಾರ್ಥಿ ನಿಲಯದ ಕಟ್ಟಡದ ನಿರ್ಮಾಣಕ್ಕೆ ಅನುದಾನ ಬಯಸುವವರು ಅಂದಾಜು ವೆಚ್ಚದ ಕನಿಷ್ಠ 25 ರಷ್ಟು ಮೊತ್ತವನ್ನು ಅವರ ಸ್ವಂತ ಸಂಪನ್ಮೂಲಗಳಿಂದ ಭರಿಸಬೇಕು.
5. ಸಹಾಯಧನ ಬಯಸುವ ಸಂಘ/ಸಂಸ್ಥೆಗಳು/ಟ್ರಸ್ಟ್‌ಗಳು ಉದ್ದೇಶಿಸಿರುವ ಕಟ್ಟಡ ನಿರ್ಮಾಣಕ್ಕೆ ಸಂಸ್ಥೆಯ ಹೆಸರಿನಲ್ಲಿ ಜಮೀನು/ನಿವೇಶನವನ್ನು ಹೊಂದಿರಬೇಕು ಅಥವಾ ಸರ್ಕಾರಿ/ ಸರ್ಕಾರೇತರ ಸಂಸ್ಥೆಗಳಿಂದ ಕನಿಷ್ಠ 30 ವರ್ಷಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಗುತ್ತಿಗೆಗೆ (ಲೀಸ್) ಪಡೆದಿರಬೇಕು.
6. ಕಟ್ಟಡದ ನೀಲ ನಕ್ಷೆಗೆ ಸ್ಥಳೀಯ ಮಹಾನಗರಪಾಲಿಕೆ/ನಗರಸಭೆ / ಪುರಸಭೆ / ಗ್ರಾಮ ಪಂಚಾಯ್ತಿಯಿಂದ ಅನುಮೋದನೆ ಪಡೆದಿರಬೇಕು ಮತ್ತು ಕಟ್ಟಡ ನಿರ್ಮಿಸಲು ಪರವಾನಿಗೆಯನ್ನು ಪಡೆದಿರಬೇಕು
7. ಉದ್ದೇಶಿತ ಕಟ್ಟಡದ ಅಂದಾಜು ಪಟ್ಟಿಯನ್ನು ಸರ್ಕಾರದ ಸಂಸ್ಥೆಗಳ ಸಹಾಯಕ ಕಾರ್ಯಪಾಲಕ ಅಭಿಯಂತರರು / ಕಾರ್ಯಪಾಲಕ ಅಭಿಯಂತರರು ಅಥವಾ ಅಂಗೀಕೃತ ಅಭಿಯಂತರರಿಂದ ಅಥವಾ ಅಂಗೀಕೃತ ವಾಸ್ತುಶಿಲ್ಪಿಗಳಿಂದ ಅನುಮೋದಿಸಲ್ಪಟ್ಟಿರಬೇಕು.
8. ಈ ಕೆಳಗಿನ ಪ್ರದೇಶಗಳಲ್ಲಿ ನಿರ್ಮಿಸುವ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡಗಳಿಗೆ ಅನುದಾನದ ಗರಿಷ್ಠ ಮಿತಿಯನ್ನು ಕೆಳಕಂಡಂತೆ ನಿಗದಿಪಡಿಸಿದೆ.

| ಕ್ರ ಸಂ | ಸ್ಥಳ | ಗರಿಷ್ಠ ಸಹಾಯಧನ |
|---|---|---|
| 1 | ಗ್ರಾಮ ಪಂಚಾಯಿತಿ /ಪಟ್ಟಣ ಪಂಚಾಯಿತಿ | ರೂ.10.00 ಲಕ್ಷ |
| 2 | ತಾಲ್ಲೂಕು ಕೇಂದ್ರ ಸ್ಥಾನ. | ರೂ.25.00 ಲಕ್ಷ |
| 3 | ಜಿಲ್ಲಾ ಕೇಂದ್ರಸ್ಥಾನ | ರೂ.50.00 ಲಕ್ಷ |

9. ಸಹಾಯಧನ ಪಡೆಯಲಿಚ್ಛಿಸುವ ಸಂಸ್ಥೆಗಳು / ಟ್ರಸ್ಟ್‌ಗಳು ಅನುಬಂಧ-ಆ ರ' ಅರ್ಜಿ ನಮೂನೆಯಲ್ಲಿ ನಿಗದಿತ ದಾಖಲಾತಿಯೊಂದಿಗೆ, ಅರ್ಜಿಯನ್ನು ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು.
10. ಒಂದು ಸಂಘ ಅಥವಾ ಸಂಸ್ಥೆಯು ಈ ಕಾರ್ಯಕ್ರಮದಡಿ ಇಲಾಖೆಯಿಂದ ಒಂದು ಸ್ಥಳದಲ್ಲಿ ಒಂದು ಬಾರಿಗೆ ಕಟ್ಟಡ ನಿರ್ಮಾಣ ಮಾಡಲು ಮಾತ್ರ ಸಹಾಯಧನ ಪಡೆಯಲು ಅರ್ಹವಾಗಿರುತ್ತದೆ.
11. ಮಂಜೂರು ಮಾಡಿದ ಸಹಾಯಧನವನ್ನು ಒಂದೇ ಕಂತಿನಲ್ಲಿ ಅಥವಾ ಸರ್ಕಾರದ ಆದೇಶಾನುಸಾರ ಸಂಬಂಧಿಸಿದ ಜಿಲ್ಲಾಧಿಕಾರಿಗಳ ಪಿ.ಡಿ ಖಾತೆ/ಇತರೆ ಖಾತೆಗಳಿಗೆ ಬಿಡುಗಡೆ ಮಾಡುವುದು.
12. ನೇರವಾಗಿ ಸರ್ಕಾರದಿಂದ ಸಹಾಯಧನ ಮಂಜೂರಾದ ಪ್ರಕರಣಗಳಲ್ಲಿ ಮಾರ್ಗಸೂಚಿಯಲ್ಲಿರುವ ದಾಖಲಾತಿಗಳನ್ನು ಆಯಾ ಜಿಲ್ಲಾಧಿಕಾರಿಗಳು ಸಂಸ್ಥೆಗಳಿಂದ ಪಡೆದು ಹಣ ಬಿಡುಗಡೆ ಮಾಡುವುದು.
13. ಸಂಬಂಧಿಸಿದ ಸಂಸ್ಥೆಗೆ, ಕಟ್ಟಡದ ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಜಿಲ್ಲಾಧಿಕಾರಿಗಳ ಹಂತದಲ್ಲಿಯೇ ಮೂರು ಕಂತುಗಳಲ್ಲಿ ಸಹಾಯಧನ'ವನ್ನು 25:50:25 ರ ಅನುಪಾತದಂತೆ ಬಿಡುಗಡೆ ಮಾಡಲಾಗುವುದು.
14. ಕಟ್ಟಡ ನಿರ್ಮಾಣಕ್ಕೆ ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ನಾಲ್ಕು ತಿಂಗಳುಗಳೊಳಗಾಗಿ ಕಟ್ಟಡದ ಕಾಮಗಾರಿಯನ್ನು ಸಂಸ್ಥೆ ಪ್ರಾರಂಭಿಸದಿದ್ದಲ್ಲಿ ಬಿಡುಗಡೆ ಮಾಡಲಾಗಿರುವ ಪೂರ್ಣ ಮೊತ್ತವನ್ನು ಸಂಸ್ಥೆಯಿಂದ ಜಿಲ್ಲಾಧಿಕಾರಿಗಳು ಹಿಂದಕ್ಕೆ ಪಡೆಯತಕ್ಕದ್ದು.
15. ಕಟ್ಟಡ ನಿರ್ಮಾಣಕ್ಕೆ, ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ಮೂರು ವರ್ಷಗಳೊಳಗಾಗಿ, ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸತಕ್ಕದ್ದು. ಅನುಮತಿಯೊಂದಿಗೆ ಒಂದು ವರ್ಷ ಹೆಚ್ಚು ಅವಧಿಯಲ್ಲಿ ಪೂರ್ಣಗೊಳಿಸಬೇಕು.
16. ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಕಟ್ಟಡದ ಕಾಮಗಾರಿಯ ಆರ್ಥಿಕ ಮತ್ತು ಭೌತಿಕ ಪ್ರಗತಿಯ ಬಗ್ಗೆ ವರದಿಯನ್ನು 8 ವಿವಿಧ ಕೋನಗಳಿಂದ ತೆಗೆದ ಛಾಯಾಚಿತ್ರಗಳನ್ನು ಆಧರಿಸಿ ಜಿಲ್ಲಾಧಿಕಾರಿಗಳು ಹಣ ಬಿಡುಗಡೆ ಮಾಡುವುದು.
17. ಸರ್ಕಾರದ ಅನುದಾನ ಪಡೆದು ನಿರ್ಮಿಸುವ ವಿದ್ಯಾರ್ಥಿ ನಿಲಯದ ಕಟ್ಟಡವನ್ನು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಉಪಯೋಗಕ್ಕೆ ಮಾತ್ರ ಬಳಸತಕ್ಕದ್ದು.
18. ಸಮುದಾಯ ಭವನಗಳನ್ನು ನಿರ್ಮಿಸಲು ಹಿಂದುಳಿದ ವರ್ಗಗಳ ಅನುಕೂಲಕ್ಕೋಸ್ಕರ ಅವಶ್ಯಕತೆ ಇರುವ ಗ್ರಾಮಗಳಲ್ಲಿ/ಸ್ಥಳಗಳಲ್ಲಿ ನೋಂದಾಯಿತ ಸಂಘ/ಸ್ವಯಂಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ಮುಂದೆ ಬಾರದೆ ಇದ್ದಲ್ಲಿ, ಅಥವಾ ಸಂಸ್ಥೆಗಳು ಇಲ್ಲದಿದ್ದಲ್ಲಿ ಹಿಂದುಳಿದ ವರ್ಗಗಳ ಸಮುದಾಯ ಭವನಗಳು ಆ ಗ್ರಾಮಗಳಲ್ಲಿ ಅವಶ್ಯಕತೆ ಇದ್ದಲ್ಲಿ ಅಂತಹ ಗ್ರಾಮಗಳಲ್ಲಿ ಸರ್ಕಾರಿ ಅಂಗ ಸಂಸ್ಥೆ/ಇಲಾಖೆಗಳ ಮುಖಾಂತರ ನಿರ್ಮಾಣ ಮಾಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಲಾಗಿದೆ.

ಸಹಾಯಧನವನ್ನು ಮಂಜೂರು ಮಾಡುವ ಅಧಿಕಾರವನ್ನು ಈ ಕೆಳಗಿನಂತೆ ವಹಿಸಲಾಗಿದೆ.

| | | |
|---|---|---|
| (ಅ) | ರೂ.10.00ಲಕ್ಷಗಳವರೆಗೆ | – ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |
| (ಆ) | ರೂ.10.00ಲಕ್ಷಗಳಿಗಿಂತ ಮೇಲ್ಪಟ್ಟು | – ರಾಜ್ಯ ಸರ್ಕಾರ |

**2) ಹಿಂದುಳಿದ ವರ್ಗಗಳ ಜನಾಂಗದ ಸಂಘ-ಸಂಸ್ಥೆಗಳು ನಡೆಸುವ ಅನುದಾನರಹಿತ /ಅನುದಾನಿತ ಖಾಸಗಿ ವಿದ್ಯಾರ್ಥಿನಿಲಯಗಳಿಗೆ ಒಂದು ಬಾರಿಗೆ ಅನುದಾನ**

(ಅ) ಈ ಕಾರ್ಯಕ್ರಮದಡಿ ಸಹಾಯಧನ ಪಡೆಯಲು ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ, ಮತ್ತು 3ಬಿ ಗೆ ಸೇರಿದ ನೊಂದಾಯಿತ ಸಂಘ/ಸ್ವಯಂ ಸೇವಾ ಸಂಸ್ಥೆ/ಟ್ರಸ್ಟ್‌ಗಳು ಅರ್ಹರಿರುತ್ತವೆ.
(ಆ) ಸಂಸ್ಥೆಯು ವಿದ್ಯಾರ್ಥಿನಿಲಯವನ್ನು ಕನಿಷ್ಠ 5 ವರ್ಷಗಳಿಂದ ನಡೆಸುತ್ತಿರಬೇಕು.

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2551 ಕ್ಕೆ ಅನುಬಂಧ-3**

4

(ರೂ. ಲಕ್ಷಗಳಲ್ಲಿ)

| ಕ್ರ ಸಂ. | ಲೆಕ್ಕಶೀರ್ಷಿಕೆ | ಯೋಜನೆಯ ಹೆಸರು | 2016-17 ಬಿಡುಗಡೆಯಾದ ಅನುದಾನ | 2017-18 ಬಿಡುಗಡೆಯಾದ ಅನುದಾನ | 2018-19 ಬಿಡುಗಡೆಯಾದ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| ರಾಜ್ಯವಲಯ ಯೋಜನೆ | | | | | |
| 1 | 2225-03-277-2-08 | ದೇವರಾಜ ಅರಸು ಸಂಶೋಧನಾ ಸಂಸ್ಥೆ ಮತ್ತು ದೇವರಾಜ ಅರಸು ಪುಣ್ಯತಿಥಿ ಮತ್ತು ಜನ್ಮ ದಿನಾಚರಣೆ | 50.50 | 141.00 | 146.00 |
| 2 | 2225-03-800-0-12 | ಅಲೆಮಾರಿ ಅರೆ ಅಲೆಮಾರಿ ಜನಾಂಗದವರಿಗೆ ಅಭಿವೃದ್ಧಿ ಕಾರ್ಯಕ್ರಮಗಳು | 10000.00 | 10000.00 | 8000.00 |
| 3 | 2225-03-277-2-57 | ಹಿಂದುಳಿದ ವರ್ಗದ ನರ್ಸಿಂಗ್ ವಿದ್ಯಾರ್ಥಿಗಳಿಗೆ ಶಿಷ್ಯವೇತನ | 0.00 | 0.00 | 0.00 |
| 4 | 4225-03-277-2-04 | ಹುಡ್ಕೋ ಸಾಲಗಳು ( ಕ.ರಾ.ವ.ಶಿ.ಸಂ.ಸಂ) | 9846.00 | 15919.00 | 9870.00 |
| 5 | 2225-03-277-2-62 | ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು | 16275.00 | 18970.00 | 19208.00 |
| 6 | 4225-03-277-1-03 | ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣ ಆರ್.ಐ.ಡಿ.ಎಫ್ | 0.00 | 0.00 | 0.00 |
| 7 | 4225-03-277-2-07 | ಮೊರಾರ್ಜಿ ದೇ ವ ಶಾಲೆಗಳ ಕಟ್ಟಡ ನಿರ್ಮಾಣ ಆರ್.ಐ.ಡಿ.ಎಫ್ | 0.00 | 0.00 | 0.00 |
| 8 | 4225-03-800-0-01 | ದೇವರಾಜ ಅರಸು ಭವನ ನಿರ್ಮಾಣ | 1000.00 | 1000.00 | 1000.00 |
| 9 | 2225-03-001-0-05 | ವಿವಿಧ ಸಮುದಾಯಗಳ ಅಭಿವೃದ್ಧಿ | 8250.00 | 15525.00 | 9600.00 |
| 10 | 2225-03-800-0-19 | ಮಾದರಿ ವಸತಿ ನಿಲಯಗಳು | 0.00 | 0.00 | 0.00 |
| 11 | 2225-03-277-2-73 | ವಿದ್ಯಾರ್ಥಿ ನಿಲಯಗಳ ಆಧುನೀಕರಣ | 0.00 | 0.00 | 0.00 |
| 12 | 2225-03-277-2-79 | ಜಿ.ಪಂ (ಹಿಂ.ವ) ಯಿಂದ ವರ್ಗಾವಣೆಯಾದ ಮೊ.ದೇ.ವ.ಶಾಲೆಗಳು | 0.00 | 0.00 | 0.00 |

(ರೂ. ಲಕ್ಷಗಳಲ್ಲಿ)

| ಕ್ರ ಸಂ. | ಲೆಕ್ಕಶೀರ್ಷಿಕೆ | ಯೋಜನೆಯ ಹೆಸರು | 2016-17 | 2017-18 | 2018-19 |
|---|---|---|---|---|---|
| | | | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ |
| 1 | 2 | 3 | 4 | 5 | 6 |
| 13 | 2225-03-277-3-01 | ನವೋದಯ ರೀತಿಯ ವ ಶಾಲೆಗಳಿಗೆ ಹುಡ್ಕೋ ಸಾಲಗಳು | 0.00 | 0.00 | 0.00 |
| 15 | 4225-03-277-2-06 | ಹುಡ್ಕೋ ಸಾಲಗಳು-ಹಾಸ್ಟೆಲ್ ಕಟ್ಟಡ | 14350.00 | 27890.00 | 28000.00 |
| 16 | 2225-03-277-2-37 | ಕೌಶಲ್ಯ – ಹಿಂದುಳಿದ ವರ್ಗಗಳು | 3515.50 | 5800.00 | 5500.00 |
| 17 | 2225-03-277-2-51 | ಇತರೆ ಹಿಂ ವ ವಿದ್ಯಾರ್ಥಿಗಳಿಗೆ ಮೆ ನಂ ವಿ ವೇತನ (ಕೇಂ.ಪು.ಯೋ) | 28309.94 | 32625.00 | 32625.00 |
| 18 | 2225-03-277-2-52 | ಇತರೆ ಹಿಂ ವ ವಿದ್ಯಾರ್ಥಿಗಳಿಗೆ ಮೆ ಪೂ ವಿ ವೇತನ (ಕೇಂ.ಪು.ಯೋ) | 10023.70 | 11250.00 | 11250.00 |
| 19 | 2225-03-277-2-53 | ಇತರೆ ಹಿಂ.ವ. ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸುವುದು | 16625.00 | 17184.00 | 17269.00 |
| 20 | 4225-03-277-7-01 | ಹಾಸ್ಟೆಲ್ ಮತ್ತು ನಿವಾಸಿ ಶಾಲೆಗಳ ನಿರ್ಮಾಣ (ಕೇಂ.ಪು.ಯೋ) | 2625.00 | 0.00 | 0.00 |
| 21 | 2225-03-800-0-31 | ವಸತಿ ಮತ್ತು ಭೋಜನಕ್ಕೆ ಸಹಾಯ | 10690.00 | 11649.00 | 15000.00 |
| 22 | 2225-03-277-3-11 | ತಾಲ್ಲೂಕಿನಲ್ಲಿರುವ ಹಿಂದುಳಿದ ವರ್ಗಗಳ ಕಲ್ಯಾಣ ಕಛೇರಿಗಳು | 400.00 | 1044.00 | 1364.90 |
| 23 | 2225-03-1-102-06 | ಅಧಿಸೂಚನೆಯಿಂದ ತೆಗೆದುಹಾಕಿದ ಅಲೆಮಾರಿ ಗಿರಿಜನರ ಕಲ್ಯಾಣ | 0.00 | 0.00 | 0.00 |
| 24 | 2225-03-800-0-32 | ವೇತನಕ್ಕಾಗಿ ಹೆಚ್ಚುವರಿ ಅನುದಾನ (6ನೇ ವೇತನ ಆಯೋಗ) | 0.00 | 0.00 | 0.00 |
| 25 | 4225-03-800-0-05 | ಅಲೆಮಾರಿ ಜನಾಂಗದವರಿಗೆ 4 ಸಮುದಾಯ ಭವನ ನಿರ್ಮಾಣ | 0.00 | 0.00 | 0.00 |
| 26 | 2225-03-001-0-06 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಕಾಯ್ದೆ | 0.00 | 0.00 | 0.00 |
| 27 | 4225-03-277-2-11 | ನಬಾರ್ಡ್ ಕಾಮಗಾರಿಗಳು | 0.00 | 0.00 | 0.00 |
| | ಒಟ್ಟು | | 131960.64 | 168997.00 | 158832.90 |

(ರೂ. ಲಕ್ಷಗಳಲ್ಲಿ)

2

| ಕ್ರ ಸಂ. | ಲೆಕ್ಕಶೀರ್ಷಿಕೆ | ಯೋಜನೆಯ ಹೆಸರು | 2016-17 | 2017-18 | 2018-19 |
|---|---|---|---|---|---|
| | | | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ | ಬಿಡುಗಡೆಯಾದ ಅನುದಾನ |
| 1 | 2 | 3 | 4 | 5 | 6 |
| ರಾಜ್ಯವಲಯ ಯೋಜನೇತರ | | | | | |
| 1 | 2225-03-001-0-01 | ಆಡಳಿತ ಮತ್ತು ಮಾರ್ಗದರ್ಶನ | 388.00 | 434.00 | 372.00 |
| 2 | 2225-03-277-2-08 | ಸ್ಪರ್ಧಾತ್ಮಕ ಪರೀಕ್ಷೆಗಳಿಗಾಗಿ ಬೋಧನಾ ಕೇಂದ್ರಗಳು | 40.00 | 0.00 | 0.00 |
| 3 | 2225-03-277-2-77 | ಜಿ.ಪಂ (ಹಿಂ.ವ) ಯಿಂದ ವರ್ಗಾವಣೆಯಾದ ಮೊ ದೇ ವ ಶಾಲೆಗಳು | 472.00 | 439.00 | 490.00 |
| | ಒಟ್ಟು | | 900.00 | 873.00 | 862.00 |
| ಜಿಲ್ಲಾವಲಯ ಯೋಜನೆ | | | | | |
| 1 | 2225-00-103-0-72 | ಮೆಟ್ರಿಕ್ ಪೂರ್ವ ಮತ್ತು ಮೆ ನಂ ವಿ ನಿಲಯಗಳ ಸುಧಾರಣೆ | 704.59 | 863.66 | 900.00 |
| 2 | 2225-00-103-0-39 | ಜಿಲ್ಲಾ ಕಛೇರಿ | 36.91 | 0.00 | 0.00 |
| 3 | 2225-00-103-0-26 | ವಿದ್ಯಾರ್ಥಿ ನಿಲಯಗಳ ನಿರ್ವಹಣೆ | 19498.96 | 0.00 | 0.00 |
| 4 | 2225-00-103-0-53 | ಹೊಲಿಗೆ ತರಬೇತಿ ಕೇಂದ್ರಗಳ ನಿರ್ವಹಣೆ | 45.66 | 50.20 | 38.16 |
| 5 | 2225-00-103-0-40 | ಕಟ್ಟಡಗಳ ವೆಚ್ಚ ಮತ್ತು ನಿರ್ವಹಣೆ | 1172.75 | 1410.00 | 1500.00 |
| 6 | 2225-00-103-0-74 | ಹಿಂದುಳಿದ ವರ್ಗಗಳ ತಾಲ್ಲೂಕು ವಿಸ್ತರಣಾ ಕಛೇರಿಗಳು | 450.07 | 0.00 | 0.00 |
| 7 | 2225-00-103-0-66 | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ | 3384.24 | 0.00 | 0.00 |
| 8 | 2225-00-103-0-76 | ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಹಣ ಸಂದಾಯ | 0.00 | 0.00 | 0.00 |
| 9 | 2225-00-103-0-58 | ವಕೀಲರಿಗೆ ಶಿಷ್ಯವೇತನ | 137.82 | 218.58 | 576.00 |
| | ಒಟ್ಟು | | 25431.00 | 2542.44 | 3014.16 |
| ಜಿಲ್ಲಾವಲಯ ಯೋಜನೇತರ | | | | | |

(ರೂ. ಲಕ್ಷಗಳಲ್ಲಿ)

| ಕ್ರ ಸಂ. | ಲೆಕ್ಕಶೀರ್ಷಿಕೆ | ಯೋಜನೆಯ ಹೆಸರು | 2016-17 ಬಿಡುಗಡೆಯಾದ ಅನುದಾನ | 2017-18 ಬಿಡುಗಡೆಯಾದ ಅನುದಾನ | 2018-19 ಬಿಡುಗಡೆಯಾದ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | 2225-00-103-0-66 | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ | 3769.00 | 8897.30 | 9342.17 |
| 2 | 2225-00-103-0-39 | ಜಿಲ್ಲಾ ಕಛೇರಿ | 1104.00 | 1335.62 | 1813.00 |
| 3 | 2225-00-103-0-79 | ವಿದ್ಯಾರ್ಥಿ ನಿಲಯಗಳಲ್ಲಿರುವವರಿಗೆ ಪ್ರೋತ್ಸಾಹಕ | 178.00 | 899.70 | 950.02 |
| 4 | 2225-00-103-0-72 | ಮೆಟ್ರಿಕ್ ಪೂರ್ವ ಮತ್ತು ಮೆ ನಂ ವಿ ನಿಲಯಗಳ ಸುಧಾರಣೆ | 150.00 | 0.00 | 0.00 |
| 5 | 2225-00-103-0-74 | ಹಿಂದುಳಿದ ವರ್ಗಗಳ ತಾಲ್ಲೂಕು ವಿಸ್ತರಣಾ ಕಛೇರಿಗಳು | 585.00 | 1066.10 | 1321.00 |
| 6 | 2225-00-103-0-41 | ಆಶ್ರಮಶಾಲೆಗಳು | 421.00 | 372.79 | 389.21 |
| 7 | 2225-00-103-0-28 | ಇತರೆ ಹಿಂ ವರ್ಗಗಳಿಗೆ ಶುಲ್ಕರಿಯಾಯಿತಿ | 27927.00 | 34908.75 | 35000.00 |
| 8 | 2225-00-103-0-26 | ವಿದ್ಯಾರ್ಥಿ ನಿಲಯಗಳ ನಿರ್ವಹಣೆ | 27748.00 | 58238.00 | 58937.95 |
| 9 | 2225-00-103-0-56 | ದೇವರಾಜ ಅರಸು ಜನ್ಮದಿನಾಚರಣೆ | 30.00 | 30.00 | 30.00 |
| 10 | 2225-00-103-0-76 | ಹೊಲಿಗೆ ತರಬೇತಿ ಕೇಂದ್ರಗಳ ನಿರ್ವಹಣೆ | 223.00 | 191.76 | 234.97 |
| 11 | 2225-00-103-0-73 | ಅನಾಥಾಲಯಗಳಿಗೆ ಸಹಾಯಧನ | 467.00 | 799.34 | 364.66 |
| | ಒಟ್ಟು | | 62622.00 | 106739.36 | 108382.98 |
| | ಒಟ್ಟು ಎಲ್ಲಾ ಕಾರ್ಯಕ್ರಮಗಳು ಸೇರಿ | | 220913.64 | 279151.80 | 271092.04 |

(ಇ) ಈ ಕಾರ್ಯಕ್ರಮದಡಿ ಒಂದು ಬಾರಿಗೆ ರೂ.5.00 ಲಕ್ಷಗಳ ಸಹಾಯಧನವನ್ನು ಮಂಜೂರು ಮಾಡುವ ಅಥವಾ ಅವಶ್ಯಕತೆಗೆ ತಕ್ಕಷ್ಟು ಹಣವನ್ನು ಬಿಡುಗಡೆಗೊಳಿಸುವ ಷರತ್ತಿಗೊಳಪಟ್ಟಿದೆ.

(ಈ) ಈ ಕಾರ್ಯಕ್ರಮದಡಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಅನುದಾನ ಪಡೆಯುತ್ತಿರುವ ಅನುದಾನಿತ ಖಾಸಗಿ ವಿದ್ಯಾರ್ಥಿ ನಿಲಯಗಳು ಹಾಗೂ ಹಿಂದುಳಿದ ವರ್ಗಗಳ ಸಂಘ-ಸಂಸ್ಥೆಗಳು ನಡೆಸುತ್ತಿರುವ ಅನುದಾನ ರಹಿತ ಖಾಸಗಿ ವಿದ್ಯಾರ್ಥಿ ನಿಲಯಗಳ ಕೂಡ ಒಂದು ಬಾರಿಗೆ ಅನುದಾನ ಪಡೆಯಲು ಅರ್ಹರಿರುತ್ತಾರೆ.

3) ದೇವರಾಜ ಅರಸು ಭವನ ನಿರ್ಮಾಣ

ಪ್ರತಿ ತಾಲ್ಲೂಕು ಕೇಂದ್ರದಲ್ಲಿ ರೂ.1.00 ಕೋಟಿ ವೆಚ್ಚದಲ್ಲಿ ಡಿ.ದೇವರಾಜ ಅರಸು ಭವನ ನಿರ್ಮಾಣ ಕಾರ್ಯವನ್ನು ಕೈಗೊಳ್ಳುತ್ತಿದ್ದು, ನಿವೇಶನ ಲಭ್ಯವಾದಂತೆ, ದೇವರಾಜ ಅರಸು ಭವನಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

## ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 82 ಯೋಸೆಲ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 18.03.2020

ಇವರಿಂದ:-

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಶಿಕ್ಷಣ ಇಲಾಖೆ, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)

ಇವರಿಗೆ:-

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
**ಬೆಂಗಳೂರು.**

**ಮಾನ್ಯರೇ,**

**ವಿಷಯ** :- ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ:1498 ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶ್ರೀ ವೇದವ್ಯಾಸ ಕಾಮತ್ ಡಿ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ :1498 ಕ್ಕೆ ಉತ್ತರವನ್ನು 100/350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿ ಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಎಸ್.ಆರ್.ಎಸ್.ನಾಥನ್)
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ (ಪ್ರಾಥಮಿಕ ಹಾಗೂ ಪ್ರೌಢ)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1498
ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ
(ಮಂಗಳೂರು ನಗರ ದಕ್ಷಿಣ)

ಉತ್ತರಿಸಬೇಕಾದ ದಿನಾಂಕ : 19.03.2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಸರ್ಕಾರಿ ಶಾಲೆಗಳಲ್ಲಿ 2020-21ನೇ ಸಾಲಿನಿಂದ ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಾಲೆಗಳನ್ನು ಆಂಗ್ಲ ಮಾಧ್ಯಮದಲ್ಲಿ ಪ್ರಾರಂಭಿಸಲು ಅನುಮತಿಗಾಗಿ ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>2019-20ನೇ ಸಾಲಿನಲ್ಲಿ ಪ್ರಾಯೋಗಿಕವಾಗಿ 276 ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ (ಎಲ್.ಕೆ.ಜಿ/ಯು.ಕೆ.ಜಿ) ತರಗತಿಗಳನ್ನು ಪ್ರಾರಂಭಿಸಲಾಗಿದೆ.<br><br>2020-21ನೇ ಸಾಲಿನಲ್ಲಿ ಪೂರ್ವ ಪ್ರಾಥಮಿಕ ತರಗತಿಗಳನ್ನು ಇತರ ಸರ್ಕಾರಿ ಶಾಲೆಗಳಿಗೆ ವಿಸ್ತರಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ.<br><br>2020-21ನೇ ಸಾಲಿಗೆ ಹೆಚ್ಚುವರಿಯಾಗಿ ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯ ಆಂಗ್ಲ ಮಾಧ್ಯಮ (ದ್ವಿಭಾಷಾ) ವಿಭಾಗಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ. ನಿಯಮಾನುಸಾರ 835 ಶಾಲೆಗಳಿಗೆ ಪ್ರಸ್ತಾವನೆಯನ್ನು ಸಿದ್ಧಪಡಿಸಲಾಗಿದೆ. |
| (ಆ) | ಬಂದಿದ್ದಲ್ಲಿ, ಜಿಲ್ಲಾವಾರು ಸ್ವೀಕೃತವಾಗಿರುವ ಪ್ರಸ್ತಾವನೆಗಳ ಸಂಖ್ಯೆ ಎಷ್ಟು; | ಜಿಲ್ಲಾವಾರು ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| (ಇ) | ಎಷ್ಟು ಸರ್ಕಾರಿ ಶಾಲೆಗಳಲ್ಲಿ ಆಂಗ್ಲ ಮಾಧ್ಯಮದಲ್ಲಿ ಬೋಧಿಸಲು ಅನುಮತಿ ನೀಡಲಾಗಿದೆ; (ಜಿಲ್ಲಾವಾರು ವಿವರ ನೀಡುವುದು) | 2019-20ನೇ ಸಾಲಿನಲ್ಲಿ 276 ಕೆ.ಪಿ.ಎಸ್. ಶಾಲೆಗಳು ಒಳಗೊಂಡಂತೆ 1001 ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯ ಆಂಗ್ಲ ಮಾಧ್ಯಮ (ದ್ವಿಭಾಷಾ) ವಿಭಾಗಗಳನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ. (ಜಿಲ್ಲಾವಾರು ವಿವರವನ್ನು ಅನುಬಂಧ-2 ರಲ್ಲಿ ಒದಗಿಸಿದೆ) |
| (ಈ) | ಅನುಮತಿ ನೀಡದೇ ತಿರಸ್ಕೃತವಾದ ಅರ್ಜಿಗಳೆಷ್ಟು? (ಜಿಲ್ಲಾವಾರು ಮಾಹಿತಿ ನೀಡುವುದು) | ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯ ಆಂಗ್ಲ ಮಾಧ್ಯಮ (ದ್ವಿಭಾಷಾ) ವಿಭಾಗಗಳನ್ನು ಪ್ರಾರಂಭಿಸಲು ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ.<br>1. ಪ್ರತಿ ವಿಧಾನಸಭಾ ಕ್ಷೇತ್ರಕ್ಕೆ 4 ಶಾಲೆಗಳಂತೆ ಒಂದನೇ ತರಗತಿ ಆಂಗ್ಲ ಮಾಧ್ಯಮ (ದ್ವಿಭಾಷಾ) ವಿಭಾಗಗಳನ್ನು ಆಯ್ಕೆ ಮಾಡುವುದು.<br>2. ದಾಖಲಾತಿ ಪ್ರಮಾಣ ಹೆಚ್ಚಿರುವ ಶಾಲೆಗಳಿಗೆ ಆದ್ಯತೆ ನೀಡುವುದು.<br>3. ಒಂದೇ ಶಾಲಾ ಆವರಣದಲ್ಲಿ 1 ರಿಂದ 10 ನೇ ತರಗತಿಗಳನ್ನು ಹೊಂದಿರುವ ಶಾಲೆಗಳಿಗೆ ಆದ್ಯತೆ ನೀಡುವುದು.<br>4. ಸಾಕಷ್ಟು ತರಗತಿ ಕೊಠಡಿ ಲಭ್ಯವಿರುವ ಶಾಲೆಗಳಿಗೆ ಆದ್ಯತೆ ನೀಡುವುದು.<br><br>ಈ ಮಾನದಂಡಗಳಡಿ ನಿಗದಿತ ಸಂಖ್ಯೆಯ ಶಾಲೆಗಳಲ್ಲಿ ಮಾತ್ರ ಆಂಗ್ಲ ಮಾಧ್ಯಮ(ದ್ವಿಭಾಷಾ) ವಿಭಾಗಗಳನ್ನು ತೆರೆಯಲಾಗಿದೆ. |

ಇಪಿ 82 ಯೋಸಕ 2020

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

## ಚು.ಗು.ಪ್ರ.ಸಂ.1498ಕ್ಕೆ ಅನುಬಂಧ-1

| ಕ್ರ.ಸಂ. | ಜಿಲ್ಲೆ | ಶಾಲೆಗಳ ಸಂಖ್ಯೆ | 2020-21ನೇ ಸಾಲಿನಲ್ಲಿ ಉದ್ದೇಶಿತ ಆಂಗ್ಲ ಮಾಧ್ಯಮ ಶಾಲೆಗಳ ಸಂಖ್ಯೆ |
|---|---|---|---|
| 1 | Bagalkot | 1457 | 24 |
| 2 | Ballari | 1545 | 17 |
| 3 | Belagavi | 1550 | 21 |
| 4 | Belagavi Chikkodi | 1957 | 31 |
| 5 | Bengaluru Rural | 1148 | 25 |
| 6 | Bengaluru U South | 958 | – |
| 7 | Bengaluru U North | 555 | – |
| 8 | Bidar | 1436 | 26 |
| 9 | Chamarajanagara | 864 | 14 |
| 10 | Chikkaballapura | 1584 | 37 |
| 11 | Chikkamangaluru | 1570 | 36 |
| 12 | Chitradurga | 1764 | 40 |
| 13 | Dakshina Kannada | 1084 | – |
| 14 | Davanagere | 1506 | 19 |
| 15 | Dharwad | 870 | 3 |
| 16 | Gadag | 729 | 9 |
| 17 | Hassan | 2635 | 57 |
| 18 | Haveri | 1325 | 23 |
| 19 | Kalburgi | 2072 | 36 |
| 20 | Kodagu | 442 | 8 |
| 21 | Kolar | 1940 | 46 |
| 22 | Koppal | 1122 | 20 |
| 23 | Mandya | 1847 | 34 |
| 24 | Mysuru | 2140 | 31 |
| 25 | Raichur | 1626 | 26 |
| 26 | Ramanagara | 1392 | 26 |
| 27 | Shivamogga | 2034 | 42 |
| 28 | Tumakuru | 2196 | 48 |
| 29 | Tumakuru Madhugiri | 1365 | 31 |
| 30 | Udupi | 714 | 2 |
| 31 | Uttara Kannada | 1034 | 23 |
| 32 | Uttara Kannada Sirsi | 1217 | 31 |
| 33 | Vijayapura | 1989 | 34 |
| 34 | Yadagiri | 1059 | 15 |
| | **TOTAL** | **48726** | **835** |

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರದಿಂದ 8-10 ಕಿ.ಮೀಗಿಂತಲೂ ದೂರವಿರುವ ಗ್ರಾಮಗಳಲ್ಲಿ 150 ಆರೋಗ್ಯ ವಿಸ್ತರಣಾ ಚಿಕಿತ್ಸಾಲಯ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

*****

ಓದಲಾಗಿದೆ: 1. ದಿನಾಂಕ:30-05-2017 ಹಾಗೂ ದಿ:13-07-2017ರ ಇದೇ ಸಮ ಸಂಖ್ಯೆಯ ಸರ್ಕಾರದ ಆದೇಶ.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ: 0-05-2017ರ ಸರ್ಕಾರದ ಆದೇಶದಲ್ಲಿ, ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರದಿಂದ 10 ಕಿ.ಮೀಗಿಂತಲೂ ದೂರವಿರುವ ಗ್ರಾಮಗಳಲ್ಲಿ ತಲಾ ರೂ. 10.00 ಲಕ್ಷಗಳಂತೆ ಒಟ್ಟಾರೆ ರೂ. 15.00 ಕೋಟಿಗಳ ವೆಚ್ಚದಲ್ಲಿ ಒಬ್ಬ ವೈದ್ಯರು, ಒಬ್ಬ ಶುಶ್ರೂಷಕರು, ಒಬ್ಬ ಫಾರ್ಮಸಿಸ್ಟ್ ಮತ್ತು ಅಟೆಂಡರ್ ಒಳಗೊಂಡಂತೆ ಒಟ್ಟು 150 ಆರೋಗ್ಯ ವಿಸ್ತರಣಾ ಚಿಕಿತ್ಸಾಲಯ ಕೇಂದ್ರಗಳನ್ನು ಸ್ಥಾಪಿಸಲು ಹೈದರಾಬಾದ್-ಕರ್ನಾಟಕ ಅಭಿವೃದ್ಧಿ ಪ್ರಾಧಿಕಾರಕ್ಕೆ ಒದಗಿಸಿರುವ ಅನುದಾನದಲ್ಲಿ ವೆಚ್ಚ ಮಾಡಲು ಪರಿಶೀಲಿಸಿ, ಲೆಕ್ಕಶೀರ್ಷಿಕೆ "2210-80-196-1-01-300" ಅಡಿಯಲ್ಲಿ ಒದಗಿಸಿರುವ ಮೊತ್ತದಲ್ಲಿ ರೂ.750.00 ಲಕ್ಷಗಳನ್ನು ಉಪಯೋಗಿಸಿಕೊಂಡು, ಸಚಿವ ಸಂಪುಟದ ಅನುಮೋದನೆ ಪಡೆಯುವ ಷರತ್ತಿಗೊಳಪಟ್ಟು ತಾತ್ವಿಕ ಅನುಮೋದನೆ ನೀಡಿದ್ದು, ದಿನಾಂಕ:13-07-2017ರ ಸರ್ಕಾರದ ಆದೇಶದಲ್ಲಿ ದಿ:30-05-2017ರ ಸರ್ಕಾರದ ಆದೇಶಕ್ಕೆ ಘಟನೋತ್ತರ ಅನುಮೋದನೆ ನೀಡಲಾಗಿತ್ತು.

ರಾಜ್ಯದಲ್ಲಿ ಸ್ಥಾಪಿಸಲಾಗುವ ಒಟ್ಟು 150 ಆರೋಗ್ಯ ವಿಸ್ತರಣಾ ಕೇಂದ್ರಗಳ ಪಟ್ಟಿಯನ್ನು ಸನ್ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಆಕುಕ 78 ಸಿಜಿಇ 2017,**
**ಬೆಂಗಳೂರು, ದಿನಾಂಕ: 27.09.2017.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರದಿಂದ 8-10 ಕಿ.ಮೀಗಿಂತಲೂ ದೂರವಿರುವ ಗ್ರಾಮಗಳಲ್ಲಿ ತಲಾ ರೂ. 10.00 ಲಕ್ಷಗಳಂತೆ ಒಟ್ಟಾರೆ ರೂ. 15.00 ಕೋಟಿಗಳ ವೆಚ್ಚದಲ್ಲಿ ಒಬ್ಬ ವೈದ್ಯರು, ಒಬ್ಬ ಶುಶ್ರೂಷಕರು, ಒಬ್ಬ ಫಾರ್ಮಸಿಸ್ಟ್ ಮತ್ತು ಅಟೆಂಡರ್ ಒಳಗೊಂಡಂತೆ ಸ್ಥಾಪಿಸಲಾಗುವ ಒಟ್ಟು 150 ಆರೋಗ್ಯ ವಿಸ್ತರಣಾ ಚಿಕಿತ್ಸಾಲಯ ಕೇಂದ್ರಗಳ ಪಟ್ಟಿಗೆ ಅನುಮೋದನೆ ನೀಡಿ ಆದೇಶಿಸಲಾಗಿದೆ. 150 ಆರೋಗ್ಯ ವಿಸ್ತರಣಾ ಚಿಕಿತ್ಸಾಲಯ ಕೇಂದ್ರಗಳ ಪಟ್ಟಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ.

-2

ಸದರಿ ಆರೋಗ್ಯ ವಿಸ್ತರಣಾ ಚಿಕಿತ್ಸಾಲಯ ಕೇಂದ್ರಗಳ ಸ್ಥಾಪನೆಗಾಗಿ ತಗುಲುವ ಒಟ್ಟು ವೆಚ್ಚ ರೂ.15.00 ಕೋಟಿಗಳಲ್ಲಿ, ರೂ.750.00 ಲಕ್ಷಗಳನ್ನು ಹೈದರಾಬಾದ್-ಕರ್ನಾಟಕ ಅಭಿವೃದ್ಧಿ ಪ್ರಾಧಿಕಾರದ ಲೆಕ್ಕಶೀರ್ಷಿಕೆ "2210-80-196-1-01-300" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಪದ್ಮ ವಿ) 27/9/17
ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರ)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1 & 2)

ಇವರಿಗೆ:

1. ಪ್ರಧಾನ ಮಹಾಲೇಖಪಾಲರು (ಜಿ & ಎಸ್ಎಸ್ಎ), ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ" ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (ಇ & ಆರ್ಎಸ್ಎ), ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ" ಬೆಂಗಳೂರು.
3. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಬೆಂಗಳೂರು.
4. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
5. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

ಪ್ರತಿ:

1. ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
4. ಸರ್ಕಾರದ ಉಪ ಕಾರ್ಯದರ್ಶಿ,ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
5. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ,(ವೆಚ್ಚ-5), ವಿಧಾನಸೌಧ, ಬೆಂಗಳೂರು.
6. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರದಿಂದ 8-10 ಕಿ.ಮೀ. ಗಿಂತಲೂ ದೂರವಿರುವ ಗ್ರಾಮಗಳಲ್ಲಿ 150 ಆರೋಗ್ಯ ವಿಸ್ತರಣಾ ಕೇಂದ್ರಗಳ ಸ್ಥಾಪನೆ ಹಾಗೂ ಹುದ್ದೆಗಳನ್ನು ಸೃಜಿಸುವ ಬಗ್ಗೆ.

*****

ಓದಲಾಗಿದೆ: ದಿನಾಂಕ:27-09-2017ರ ಇದೇ ಸಮ ಸಂಖ್ಯೆಯ ಸರ್ಕಾರದ ಆದೇಶ.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ:27-09-2017ರ ಸರ್ಕಾರದ ಆದೇಶದಲ್ಲಿ ರಾಜ್ಯದ ಪ್ರಾಥಮಿ ಆರೋಗ್ಯ ಕೇಂದ್ರದಿಂದ 8-10 ಕಿ.ಮೀಗಿಂತಲೂ ದೂರವಿರುವ ಗ್ರಾಮಗಳಲ್ಲಿ ತಲಾ ರೂ. 10.00 ಲಕ್ಷಗಳಂತೆ ಒಟ್ಟಾರೆ ರೂ. 15.00 ಕೋಟಿಗಳ ವೆಚ್ಚದಲ್ಲಿ ಒಂದು ವೈದ್ಯರು, ಒಂದು ಶುಶ್ರೂಷಕರು, ಒಂದ ಫಾರ್ಮಸಿಸ್ಟ್ ಮತ್ತು ಒಂದು ಅಟೆಂಡರ್ ಒಳಗೊಂಡಂತೆ ಒಟ್ಟು 150 ಆರೋಗ್ಯ ವಿಸ್ತರಣಾ ಚಿಕಿತ್ಸಾಲಯ ಕೇಂದ್ರಗಳನ್ನು ಸ್ಥಾಪಿಸಲು ಹಾಗೂ ಸದರಿ ಆರೋಗ್ಯ ವಿಸ್ತರಣಾ ಚಿಕಿತ್ಸಾಲಯ ಕೇಂದ್ರಗಳ ಸ್ಥಾಪನೆಗಾ ತಗಲುವ ಒಟ್ಟು ವೆಚ್ಚ ರೂ.15.00 ಕೋಟಿಗಳಲ್ಲಿ ರೂ. 750.00 ಲಕ್ಷಗಳನ್ನು ಹೈದರಾಬಾದ್-ಕರ್ನಾಟಕ ಅಭಿವೃದ್ಧಿ ಪ್ರಾಧಿಕಾರದ ಲೆಕ್ಕಶೀರ್ಷಿಕೆ "2210-80-196-1-01-300" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸಲು ಆದೇಶಿಸಲಾಗಿತ್ತು.

ಒಟ್ಟು 150 ಆರೋಗ್ಯ ವಿಸ್ತರಣಾ ಕೇಂದ್ರಗಳ ಕಟ್ಟಡದ ಬಗ್ಗೆ, ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಹಾಗೂ ಇದಕ್ಕಾಗಿ ವೆಚ್ಚವನ್ನು ಭರಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿದ್ದು, ದಿ:27-09-2017ರ ಆದೇಶವನ್ನು ಪುನರ್ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ ಆಕುಕ 78 ಸಿಜಿಇ 2017,
ಬೆಂಗಳೂರು, ದಿನಾಂಕ: 01-01-2018.

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ರಾಜ್ಯದಲ್ಲಿ ಒಟ್ಟು 150 ಆರೋಗ್ಯ ವಿಸ್ತರಣಾ ಕೇಂದ್ರಗಳ ಸ್ಥಾಪನೆ ಕುರಿತಂತೆ ಈ ಕೆಳಕಂಡ ಅಂಶಗಳನ್ನು ಮತ್ತು ಷರತ್ತುಗಳನ್ನೊಳಗೊಂಡಂತೆ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

- ಅನುಬಂಧದಲ್ಲಿ ಲಗತ್ತಿಸಿ ವಿವರಿಸಿದಂತೆ ಒಟ್ಟು 150 ಆರೋಗ್ಯ ವಿಸ್ತರಣಾ ಕೇಂದ್ರಗಳನ್ನು ಸ್ಥಾಪಿಸಲು;
- ಒಂದು ಆರೋಗ್ಯ ವಿಸ್ತರಣಾ ಕೇಂದ್ರಕ್ಕೆ ತಲಾ ಒಂದು ವೈದ್ಯ ಹುದ್ದೆ, ಒಂದು ಶುಶ್ರೂಷಕರ ಹುದ್ದೆ ಮತ್ತು ಒಂದು ಗ್ರೂಪ್-ಡಿ ಹುದ್ದೆಯಂತೆ 150 ಆರೋಗ್ಯ ವಿಸ್ತರಣಾ ಕೇಂದ್ರಗಳಿಗೆ ಒಟ್ಟು 450 ಹುದ್ದೆಗಳನ್ನು ಸೃಜಿಸಲು;

- ಸದರಿ ಹುದ್ದೆಗಳಿಗಾಗಿ ಸೇವೆಯನ್ನು ಈ ಕೆಳಕಂಡ ರೀತಿಯಲ್ಲಿ ಪಡೆಯಲು:

| ಹುದ್ದೆ | ಸೇವೆಯ ರೀತಿ | ಸಂಭಾವನೆಯ ಮಿತಿ (ಮಾಸಿಕ ರೂ.ಗಳಲ್ಲಿ) |
|---|---|---|
| ವೈದ್ಯರು – 1 | ಗುತ್ತಿಗೆ ಆಧಾರದ ಮೇಲೆ | 45,000/- |
| ಶುಶ್ರೂಷಕರು– 1 | ಹೊರ ಗುತ್ತಿಗೆಯ ಮೇಲೆ | 13,072/- |
| ಗ್ರೂಪ್ –ಡಿ – 1 | ಹೊರ ಗುತ್ತಿಗೆಯ ಮೇಲೆ | 12,243/- |

- ಆರೋಗ್ಯ ವಿಸ್ತರಣಾ ಕೇಂದ್ರಗಳ ಸಿಬ್ಬಂದಿಯ ಸಂಭಾವನೆಯ ವೆಚ್ಚವನ್ನು ಜಿಲ್ಲಾ ಪಂಚಾಯತ್ ವಲಯದ ಲೆಕ್ಕ ಶೀರ್ಷಿಕೆ "2210-80-196-1-01-300" ಅಡಿಯಲ್ಲಿ ಭರಿಸಲು;
- ಆರೋಗ್ಯ ವಿಸ್ತರಣಾ ಕೇಂದ್ರಗಳನ್ನು ಖಾಲಿ ಇರುವ ಗ್ರಾಮ ಪಂಚಾಯತ್ ಕಛೇರಿಯ ಕೊಠಡಿಗಳಲ್ಲಿ, ಶಾಲೆಗಳಲ್ಲಿ, ಸಮುದಾಯ ಭವನದಲ್ಲಿ ಮತ್ತು ಇತರೆ ಸರ್ಕಾರದ ಕಟ್ಟಡಗಳಲ್ಲಿ ಸ್ಥಾಪಿಸಲು;
- ಸರ್ಕಾರಿ ಕಟ್ಟಡಗಳು ಲಭ್ಯವಿಲ್ಲದಿದ್ದಲ್ಲಿ ಮಾತ್ರ ಇತರೆ ಕಟ್ಟಡಗಳನ್ನು ಮಾಸಿಕ ರೂ.2,000/-ಗಳಂತೆ ಬಾಡಿಗೆಗೆ ಪಡೆಯಲು;
- ಯಾವುದೇ ಹೊಸ ಕಟ್ಟಡಗಳ ನಿರ್ಮಾಣವನ್ನು ಕೈಗೆತ್ತಿಕೊಳ್ಳದಿರಲು;
- ಒಂದು ಘಟಕಕ್ಕೆ ಮಾಸಿಕ ವೆಚ್ಚ ರೂ.10,000/-ಗಳಂತೆ ಔಷಧಿಗಾಗಿ ಅನುದಾನವನ್ನು ನಿಗದಿಪಡಿಸಿದ್ದು, ಔಷಧಿಯನ್ನು ಕರ್ನಾಟಕ ಡ್ರಗ್ಸ್ ಲಾಜಿಸ್ಟಿಕ್ಸ್ & ವೇರ್ ಹೌಸಿಂಗ್ ಸೊಸೈಟಿಯಿಂದ ಪಡೆಯಲು;
- ಒಂದು ಘಟಕಕ್ಕೆ ಪೀಠೋಪಕರಣಗಳಿಗಾಗಿ ಒಂದು ಬಾರಿ ವೆಚ್ಚವಾಗಿ ರೂ. 50,000/-ಅನ್ನು ನಿಗದಿಗೊಳಿಸಲು;

ಸಿಬ್ಬಂದಿಯ ಸಂಭಾವನೆ ವೆಚ್ಚ ಹಾಗೂ ಔಷಧಿ ವೆಚ್ಚವೂ ಸೇರಿದಂತೆ ಒಂದು ಆರೋಗ್ಯ ವಿಸ್ತರಣಾ ಕೇಂದ್ರಕ್ಕೆ ಮಾಸಿಕ ಒಟ್ಟಾರೆ ಆವರ್ತಕ ವೆಚ್ಚ ರೂ.80,315/-ಗಳಾಗಲಿದ್ದು, 150 ಆರೋಗ್ಯ ವಿಸ್ತರಣಾ ಕೇಂದ್ರಗಳಿಗೆ ವಾರ್ಷಿಕ ಒಟ್ಟು ಆವರ್ತಕ ವೆಚ್ಚ ರೂ. 14,45,67,000/- ಗಳಾಗುತ್ತದೆ.

ಪೀಠೋಪಕರಣಗಳಿಗಾಗಿ 150 ಆರೋಗ್ಯ ವಿಸ್ತರಣಾ ಕೇಂದ್ರಗಳಿಗೆ ವಾರ್ಷಿಕ ಅನಾವರ್ತಕ ವೆಚ್ಚ ಒಟ್ಟು ರೂ. 75,00,000/- ಗಳಾಗುತ್ತದೆ.

ಆರೋಗ್ಯ ವಿಸ್ತರಣಾ ಕೇಂದ್ರಗಳಿಗೆ ಸಂಬಂಧಿಸಿದಂತೆ ಹೊರಡಿಸಲಾಗಿದ್ದ ದಿನಾಂಕ:27-09-201 ಸರ್ಕಾರದ ಆದೇಶವನ್ನು ರದ್ದುಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1123/ವೆಚ್ಚ-5/2017, ದಿನಾಂ 13-12-2017 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

01/01/2018
(ಪದ್ಮ .ವಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಆರೋಗ್ಯ 1 & 2)

ಇವರಿಗೆ:

1. ಪ್ರಧಾನ ಮಹಾಲೇಖಪಾಲರು (ಜಿ & ಎಸ್‌ಎಸ್‌ಎ), ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ", ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (ಇ & ಆರ್‌ಎಸ್‌ಎ), ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ ಬೆಂಗಳೂರು.
3. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಬೆಂಗಳೂರು.
4. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
5. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

ಪ್ರತಿ:

1. ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಕಾಸ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ-2 ರವರ ಆಪ್ತ ಸಹಾಯಕರು, ಆರೋಗ್ಯ ಮತ್ತು ಕುಟುಂ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
4. ಉಪ ಕಾರ್ಯದರ್ಶಿ, ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾ ಇಲಾಖೆ, ವಿಕಾಸ ಸೌಧ, ಬೆಂಗಳೂರು.
5. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ.(ವೆಚ್ಚ-5), ವಿಧಾನಸೌಧ, ಬೆಂಗಳೂರು.
6. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

ಸಂಖ್ಯೆ: ಆಕುಕ 78 ಸಿಜಿಇ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 06-01-2018

**ತಿದ್ದುಪಡಿ ಆದೇಶ**

ದಿನಾಂಕ:01-01-2018ರ ಇದೇ ಸಮ ಸಂಖ್ಯೆಯ ಸರ್ಕಾರದ ಆದೇಶದ, ಆದೇಶ ಭಾಗದಲ್ಲಿನ 4ನೇ ಷರತ್ತಾದ "ಆರೋಗ್ಯ ವಿಸ್ತರಣಾ ಕೇಂದ್ರಗಳ ಸಿಬ್ಬಂದಿಯ ಸಂಭಾವನೆಯ ವೆಚ್ಚವನ್ನು ಜಿಲ್ಲಾ ಪಂಚಾಯತ್ ವಲಯದ ಲೆಕ್ಕ ಶೀರ್ಷಿಕೆ 2210-80-196-1-01-300 ಅಡಿಯಲ್ಲಿ ಭರಿಸಲು" ಎಂಬುದರ ಬದಲಾಗಿ ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು:

- ಆರೋಗ್ಯ ವಿಸ್ತರಣಾ ಕೇಂದ್ರಗಳ ಸಿಬ್ಬಂದಿಯ ಸಂಭಾವನೆಯ ವೆಚ್ಚ ಮತ್ತು ಬಾಡಿಗೆಯ ವೆಚ್ಚವನ್ನು ಒಳಗೊಂಡ ಆವರ್ತಕ ವೆಚ್ಚವನ್ನು ಮತ್ತು ಪೀಠೋಪಕರಣಗಳಿಗಾಗಿ ಒಂದು ಬಾರಿ ವೆಚ್ಚವಾದ ಅನಾವರ್ತಕ ವೆಚ್ಚವನ್ನು ಜಿಲ್ಲಾ ಪಂಚಾಯತ್ ಯೋಜನೆಯ ಲೆಕ್ಕ ಶೀರ್ಷಿಕೆ "2210-00-101-0-27-ಪ್ರಾಥಮಿಕ ಆರೋಗ್ಯ ಕೇಂದ್ರಗಳು" (ಲಿಂಕ್ ಕೋಡ್ ಲೆಕ್ಕ ಶೀರ್ಷಿಕೆ "2210-80-196-1-01-300) ಅಡಿಯಲ್ಲಿ ಭರಿಸಲು;

TSP (1)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
(ಪದ್ಮ .ವಿ) 06/01/2018
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1 & 2)

4289
10-1-18

ಇವರಿಗೆ:

1. ಪ್ರಧಾನ ಮಹಾಲೇಖಪಾಲರು (ಜಿ&ಎಸ್‌ಎಸ್‌ಎ), ಕರ್ನಾಟಕ,ಹೊಸ ಕಟ್ಟಡ, "ಆಡಿಟ್ ಭವನ", ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (ಇ&ಆರ್‌ಎಸ್‌ಎ), ಕರ್ನಾಟಕ,ಹೊಸ ಕಟ್ಟಡ, "ಆಡಿಟ್ ಭವನ", ಬೆಂಗಳೂರು.
3. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಬೆಂಗಳೂರು.
4. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
5. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

ಪ್ರತಿ:

1. ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಕಾಸಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ-2 ರವರ ಆಪ್ತ ಸಹಾಯಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
4. ಉಪ ಕಾರ್ಯದರ್ಶಿ, ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
5. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ,(ವೆಚ್ಚ-5), ವಿಧಾನಸೌಧ, ಬೆಂಗಳೂರು.
6. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

3/
15/1/18



10/1/18

ಅನುಬಂಧ

ದಿನಾಂಕ: 27.09.2017ರ ಸರ್ಕಾರದ ಆದೇಶ ಸಂಖ್ಯೆ ಆಕುಕ 78 ಸಿಜಿಇ 2017 ಕ್ಕೆ ಅನುಬಂಧ

## 150 ಆರೋಗ್ಯ ವಿಸ್ತರಣಾ ಚಿಕಿತ್ಸಾಲಯಗಳ ಪಟ್ಟಿ

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಗ್ರಾಮ |
|---|---|---|---|
| 1 | ಬಾಗಲಕೋಟೆ | ಬಾದಾಮಿ | ನಲಗುಂದ |
| 2 | ಬಾಗಲಕೋಟೆ | ಬಾದಾಮಿ | ನೀಲಗುಂದ |
| 3 | ಬಾಗಲಕೋಟೆ | ಬೀಳಗಿ | ಅನಗವಾಡಿ |
| 4 | ಬಾಗಲಕೋಟೆ | ಬೀಳಗಿ | ಬ್ಯಾಡಗಿ |
| 5 | ಬಾಗಲಕೋಟೆ | ಬೀಳಗಿ | ಕಾತರಕಿ |
| 6 | ಬಾಗಲಕೋಟೆ | ಮುಧೋಳ್ | ಕುಳಲಿ |
| 7 | ಬಾಗಲಕೋಟೆ | ಮುಧೋಳ್ | ಸೈದಾಪುರ |
| 8 | ಬಾಗಲಕೋಟೆ | ಮುಧೋಳ್ | ಢವಳೇಶ್ವರ |
| 9 | ಬೆಂಗಳೂರು | ಬೆಂಗಳೂರು ದಕ್ಷಿಣ | ತರಳು |
| 10 | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | ವೆಂಕಟಗಿರಿಕೋಟೆ ವೃತ್ತ |
| 11 | ಬೆಂಗಳೂರು ಗ್ರಾಮಾಂತರ | ಹೊಸಕೋಟೆ | ವಾಗಟ |
| 12 | ಬೆಳಗಾವಿ | ಗೋಕಾಕ್ | ಅರಳಿಮಟ್ಟಿ |
| 13 | ಬೆಳಗಾವಿ | ರಾಯಭಾಗ | ಕೋಳಿಗುಡ್ಡ |
| 14 | ಬೆಳಗಾವಿ | ರಾಯಭಾಗ | ಪರಮನಂದವಾಡಿ |
| 15 | ಬೆಳಗಾವಿ | ರಾಯಭಾಗ | ಯಲ್ಪಾರಟ್ಟಿ |
| 16 | ಚಿಕ್ಕಬಳ್ಳಾಪುರ | ಗೌರಿಬಿದನೂರು | ತರಿದಾಳು |
| 17 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಕಾಚರೆಡ್ಡಹಳ್ಳಿ |
| 18 | ಚಿಕ್ಕಬಳ್ಳಾಪುರ | ಚಿಂತಾಮಣಿ | ದೊಡ್ಡಬೊಮ್ಮನಹಳ್ಳಿ |
| 19 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಹಳೇಹಳ್ಳಿ |
| 20 | ಚಿಕ್ಕಬಳ್ಳಾಪುರ | ಚಿಂತಾಮಣಿ | ಚಿಲಕಲನೇರ್ಪು |
| 21 | ಚಿಕ್ಕಬಳ್ಳಾಪುರ | ಗೌರಿಬಿದನೂರು | ಬಚ್ಚಿರೆಡ್ಡಿಹಳ್ಳಿ |
| 22 | ಚಿತ್ರದುರ್ಗ | ಚಳ್ಳಕೆರೆ | ಹೋಬಳಾಪುರ |
| 23 | ಚಿತ್ರದುರ್ಗ | ಚಳ್ಳಕೆರೆ | ಹಿರೆಹಳ್ಳಿ |
| 24 | ಚಿತ್ರದುರ್ಗ | ಚಿತ್ರದುರ್ಗ | ಅಲಗವಾಡಿ |
| 25 | ದಕ್ಷಿಣ ಕನ್ನಡ | ಬಂಟ್ವಾಳ | ಕುದ್ತಮುಗೇರು |
| 26 | ದಾವಣಗೆರೆ | ಹರಪನಹಳ್ಳಿ | ಜಂಗಮತುಂಬಿಗೆರೆ |
| 27 | ದಾವಣಗೆರೆ | ದಾವಣಗೆರೆ | ಚಿನ್ನ ಸಮುದ್ರ |
| 28 | ದಾವಣಗೆರೆ | ದಾವಣಗೆರೆ | ಚಟ್ಟೋಬನಹಳ್ಳಿ |

27/9/17

| 29 | ಧಾರವಾಡ | ಹುಬ್ಬಳ್ಳಿ | ಕುಸುಗಲ್ |
|---|---|---|---|
| 30 | ಗದಗ | ಗದಗ | ಅಂತೂರು-ಬೆಂತೂರು |
| 31 | ಗದಗ | ಶಿರಹಟ್ಟಿ | ಬನ್ನಿಕೊಪ್ಪ |
| 32 | ಗದಗ | ನರಗುಂದ | ಕೊಣ್ಣೂರು |
| 33 | ಹಾಸನ | ಬೇಲೂರು | ಹೆಬ್ಬಾಳು |
| 34 | ಹಾಸನ | ಹಾಸನ | ಕಂದಾಳಿ |
| 35 | ಹಾಸನ | ಅರಸಿಕೆರೆ | ಯಾರೆಹಳ್ಳಿ |
| 36 | ಹಾವೇರಿ | ಹಾನಗಲ್ | ಗೊಂಡಿ |
| 37 | ಹಾವೇರಿ | ಹಾನಗಲ್ | ಮಸಣಕಟ್ಟಿ |
| 38 | ಹಾವೇರಿ | ಹಾನಗಲ್ | ಸಮ್ಮಸಗಿ |
| 39 | ಹಾವೇರಿ | ಸವಣೂರು | ಹುರಳಿಕುಪ್ಪೆ |
| 40 | ಕೊಡಗು | ಮಡಿಕೇರಿ | ಕರಿಕೆ |
| 41 | ಕೋಲಾರ | ಬಂಗಾರಪೇಟೆ | ಕನುಮನಹಳ್ಳಿ |
| 42 | ಕೋಲಾರ | ಬಂಗಾರಪೇಟೆ | ಮಾವಳ್ಳಿ |
| 43 | ಕೋಲಾರ | ಬಂಗಾರಪೇಟೆ | ಸೂಲಿಕುಂಟೆ |
| 44 | ಕೋಲಾರ | ಶ್ರೀನಿವಾಸಪುರ | ಅಲವಾಟ |
| 45 | ಮಂಡ್ಯ | ಶ್ರೀರಂಗಪಟ್ಟಣ | ನೆಲಮನೆ |
| 46 | ಮಂಡ್ಯ | ಶ್ರೀರಂಗಪಟ್ಟಣ | ಗಮನಹಳ್ಳಿ |
| 47 | ಮಂಡ್ಯ | ಶ್ರೀರಂಗಪಟ್ಟಣ | ಕರಗಟ್ಟ |
| 48 | ರಾಮನಗರ | ಮಾಗಡಿ | ಅಗಲಕೋಟೆ |
| 49 | ರಾಮನಗರ | ಮಾಗಡಿ | ವರದೇನಹಳ್ಳಿ |
| 50 | ಶಿವಮೊಗ್ಗ | ತೀರ್ಥಹಳ್ಳಿ | ಬಸವಾನಿ |
| 51 | ಶಿವಮೊಗ್ಗ | ಭದ್ರಾವತಿ | ಭದ್ರಾಕಾಲೋನಿ |
| 52 | ಶಿವಮೊಗ್ಗ | ಹೊಸನಗರ | ಕವರಿಬೈಲು |
| 53 | ಚಿಕ್ಕಮಗಳೂರು | ತರೀಕೆರೆ | ನಂದೀಪುರ |
| 54 | ಮೈಸೂರು | ಪಿರಿಯಾಪಟ್ಟಣ | ಎಸ್.ಶೆಟ್ಟಳ್ಳಿ |
| 55 | ಮೈಸೂರು | ಪಿರಿಯಾಪಟ್ಟಣ | ಅಂಬಲಾರೆ |
| 56 | ತುಮಕೂರು | ಮಧುಗಿರಿ | ಕಳ್ಳಿದೇವಪುರ |
| 57 | ತುಮಕೂರು | ಕೊರಟಗೆರೆ | ದೊಗ್ಗಾನಹಳ್ಳಿ |
| 58 | ತುಮಕೂರು | ಮಧುಗಿರಿ | ಕಡಗಟ್ಟೂರು |
| 59 | ತುಮಕೂರು | ಮಧುಗಿರಿ | ಶ್ರಾವಂಡ |

| 60 | ತುಮಕೂರು | ಪಾವಗಡ | ಪಳವಳ್ಳಿ |
|---|---|---|---|
| 61 | ತುಮಕೂರು | ಶಿರಾ | ಶಾಕದಾಡು |
| 62 | ತುಮಕೂರು | ಶಿರಾ | ಹುಯಿಲ್‌ದೊರೆ |
| 63 | ತುಮಕೂರು | ಮಧುಗಿರಿ | ಕೊಂಡವಾಡಿ |
| 64 | ತುಮಕೂರು | ಕೊರಟಗೆರೆ | ಮಲ್ಲೇಕಾವು |
| 65 | ತುಮಕೂರು | ತಿಪಟೂರು | ದಸರೀಘಟ್ಟ |
| 66 | ಉತ್ತರ ಕನ್ನಡ | ಮುಂಡಗೋಡ | ನಂದಿಕಟ್ಟಾ |
| 67 | ಉತ್ತರ ಕನ್ನಡ | ಯಲ್ಲಾಪುರ | ಗುಲ್ಲಾಪುರ |
| 68 | ಉತ್ತರ ಕನ್ನಡ | ಯಲ್ಲಾಪುರ | ಹುಣಶೆಟ್ಟಿಕೊಪ್ಪ |
| 69 | ಉತ್ತರ ಕನ್ನಡ | ಹಳಿಯಾಳ್ | ಅರ್ಲವಾಡ |
| 70 | ಉತ್ತರ ಕನ್ನಡ | ಹಳಿಯಾಳ್ | ತಟ್ಟಿಗೇರ |
| 71 | ಉತ್ತರ ಕನ್ನಡ | ಹಳಿಯಾಳ್ | ಜತಗಾಗೌಳಿವಾಡ |
| 72 | ಉತ್ತರ ಕನ್ನಡ | ಜೋಯಿಡಾ | ಅಣಶಿ |
| 73 | ಉತ್ತರ ಕನ್ನಡ | ಜೋಯಿಡಾ | ಅನಮೋಡಾ |
| 74 | ಉತ್ತರ ಕನ್ನಡ | ಜೋಯಿಡಾ | ಸಿಂಗರಗಾಂವ |
| 75 | ವಿಜಯಪುರ | ಇಂಡಿ | ಹಿರೆಬೆವನೂರು |
| 76 | ವಿಜಯಪುರ | ಬಸವನ ಬಾಗೇವಾಡಿ | ಗಣಿ |
| 77 | ವಿಜಯಪುರ | ಮುದ್ದೇಬಿಹಾಳ್ | ಬಸರಕೊಡ |
| 78 | ವಿಜಯಪುರ | ವಿಜಯಪುರ | ದೇವರಗಣ್ಣೂರು |
| 79 | ವಿಜಯಪುರ | ಇಂಡಿ | ಬಬಲದ್ |
| 80 | ಬೀದರ್ | ಔರಾದ್ | ಭೊಂತಿ |
| 81 | ಬೀದರ್ | ಔರಾದ್ | ಕೌತಬ |
| 82 | ಬೀದರ್ | ಬಾಲ್ಕಿ | ಸಿದ್ಧೇಶ್ವರ |
| 83 | ಬೀದರ್ | ಬಾಲ್ಕಿ | ಮೇತಿ ಮೇಲಕುಂಡ |
| 84 | ಬೀದರ್ | ಹುಮನಬಾದ್ | ನಾಗನಕೇರ |
| 85 | ಬೀದರ್ | ಹುಮನಬಾದ್ | ಮುತ್ತನಗಿ |
| 86 | ಬೀದರ್ | ಹುಮನಬಾದ್ | ಮದರಗಿ |
| 87 | ಬೀದರ್ | ಬಸವಕಲ್ಯಾಣ | ಹತ್ಯಾಯಾಳ |
| 88 | ಬೀದರ್ | ಬೀದರ್ | ಹೋಕರ್ಣಾ ಬಿ. |
| 89 | ಬೀದರ್ | ಬೀದರ್ | ಶಿರಸಿ ಎ. |
| 90 | ಬೀದರ್ | ಬೀದರ್ | ಸಿಂಗೊಲಗಿ |

27/9/17

| 91 | ಬೀದರ್ | ಬಸವಕಲ್ಯಾಣ | ದಾನೂರ ಆರ್. |
|---|---|---|---|
| 92 | ಬಳ್ಳಾರಿ | ಹಗರಿಬೊಮ್ಮನಹಳ್ಳಿ | ಸೊನ್ನ |
| 93 | ಬಳ್ಳಾರಿ | ಹಗರಿಬೊಮ್ಮನಹಳ್ಳಿ | ಕಡಲಬಾಳು |
| 94 | ಬಳ್ಳಾರಿ | ಹಗರಿಬೊಮ್ಮನಹಳ್ಳಿ | ಹಂಪಪಟ್ಟಣ |
| 95 | ಬಳ್ಳಾರಿ | ಸಂಡೂರು | ಭುಜಂಗನಗರ |
| 96 | ಬಳ್ಳಾರಿ | ಬಳ್ಳಾರಿ | ಯಾರಂಗಳಿ |
| 97 | ಬಳ್ಳಾರಿ | ಬಳ್ಳಾರಿ | ಸಿಂದಿಗೇರಿ |
| 98 | ಬಳ್ಳಾರಿ | ಬಳ್ಳಾರಿ | ಕೋಂಬಾಳಿ |
| 99 | ಬಳ್ಳಾರಿ | ಹೊಸಪೇಟೆ | ಗರಗ |
| 100 | ಬಳ್ಳಾರಿ | ಹೊಸಪೇಟೆ | ಗದಿಗೇರಿ |
| 101 | ಬಳ್ಳಾರಿ | ಹೊಸಪೇಟೆ | ಚಿತ್ತವಾಡಗಿ |
| 102 | ಬಳ್ಳಾರಿ | ಕುಡ್ಲಗಿ | ಪೂಜಾರಹಳ್ಳಿ |
| 103 | ಬಳ್ಳಾರಿ | ಕುಡ್ಲಗಿ | ರಾಮದುರ್ಗ |
| 104 | ಬಳ್ಳಾರಿ | ಕುಡ್ಲಗಿ | ನಾಗರಕಟ್ಟೆ |
| 105 | ಬಳ್ಳಾರಿ | ಸಂಡೂರು | ಕೃಷ್ಣನಗರ |
| 106 | ಬಳ್ಳಾರಿ | ಸಂಡೂರು | ರಾಜಾಪುರ |
| 107 | ಬಳ್ಳಾರಿ | ಹಗರಿಬೊಮ್ಮನಹಳ್ಳಿ | ಯಡ್ರಾಮನಹಳ್ಳಿ |
| 108 | ಬಳ್ಳಾರಿ | ಶಿರಗುಪ್ಪ | ಕೋಡಿಹಾಳ್ |
| 109 | ಬಳ್ಳಾರಿ | ಶಿರಗುಪ್ಪ | ಬಿ.ಎಂ. ಸುಗೂರು |
| 110 | ಕಲಬುರಗಿ | ಅಫ್ಜಲ್‌ಪುರ | ಚೌಡಾಪುರ |
| 111 | ಕಲಬುರಗಿ | ಅಫ್ಜಲ್‌ಪುರ | ಹೊಸೂರ್ |
| 112 | ಕಲಬುರಗಿ | ಅಫ್ಜಲ್‌ಪುರ | ಹಸರಗುಂಡಗಿ |
| 113 | ಕಲಬುರಗಿ | ಆಳಂದ | ರುದ್ರವಾಡಿ |
| 114 | ಕಲಬುರಗಿ | ಆಳಂದ | ಕಮಲನಗರ |
| 115 | ಕಲಬುರಗಿ | ಆಳಂದ | ದರ್ಗಾ ಶಿರೂರು |
| 116 | ಕಲಬುರಗಿ | ಜೇವರ್ಗಿ | ಬಿಲವಾರ್ |
| 117 | ಕಲಬುರಗಿ | ಜೇವರ್ಗಿ | ಹರವಾಲ್ |
| 118 | ಕಲಬುರಗಿ | ಜೇವರ್ಗಿ | ಕುಲಗೇರ |
| 119 | ಕಲಬುರಗಿ | ಚಿಂಚೋಳಿ | ಶಾದಿಪುರ |
| 120 | ಕಲಬುರಗಿ | ಚಿಂಚೋಳಿ | ಬನಿಯಾರ |
| 121 | ಕಲಬುರಗಿ | ಚಿಂಚೋಳಿ | ಧರ್ಮಸಾಗರ |

HKRV

| 122 | ಕಲಬುರಗಿ | ಚಿಂಚೋಳಿ | ಮಳಿಕೊಳ |
|---|---|---|---|
| 123 | ಕಲಬುರಗಿ | ಚಿಂಚೋಳಿ | ಹನಗುಂಟಾ |
| 124 | ಕಲಬುರಗಿ | ಸೇಡಂ | ಉಡಗಿ |
| 125 | ಕಲಬುರಗಿ | ಸೇಡಂ | ಶಿಲಾರಕೋಟ |
| 126 | ಕಲಬುರಗಿ | ಸೇಡಂ | ಅಡಕಿ |
| 127 | ರಾಯಚೂರು | ದೇವದುರ್ಗ | ಸಾವೇಂತಗೇರೆ |
| 128 | ರಾಯಚೂರು | ಮಾನ್ವಿ | ಸದಾಪುರ |
| 129 | ರಾಯಚೂರು | ಮಾನ್ವಿ | ಕುರಕುಂದ |
| 130 | ರಾಯಚೂರು | ಸಿಂಧನೂರು | ಚನ್ನಹಳ್ಳಿ |
| 131 | ರಾಯಚೂರು | ದೇವದುರ್ಗ | ಹೊಂದಾಲಿ |
| 132 | ರಾಯಚೂರು | ಲಿಂಗಸುಗೂರು | ದೇವರಬುಮಠ |
| 133 | ರಾಯಚೂರು | ಲಿಂಗಸುಗೂರು | ಬೈಚಾಬಲ |
| 134 | ರಾಯಚೂರು | ಲಿಂಗಸುಗೂರು | ಕನ್ನಳ್ಳಿ |
| 135 | ಯಾದಗಿರಿ | ಯಾದಗಿರಿ | ಜಿನಕೆರೆ |
| 136 | ಯಾದಗಿರಿ | ಶಹಾಪುರ | ದೇವಟಕಲ್ |
| 137 | ಯಾದಗಿರಿ | ಶಹಾಪುರ | ಮುದ್ದಬೋಳ್ |
| 138 | ಯಾದಗಿರಿ | ಶಹಾಪುರ | ನಯಾಕಲ್ |
| 139 | ಯಾದಗಿರಿ | ಯಾದಗಿರಿ | ಚಂದರಕಿ |
| 140 | ಯಾದಗಿರಿ | ಯಾದಗಿರಿ | ಮುಟ್ಟಕ್ |
| 141 | ಕೊಪ್ಪಳ | ಕೊಪ್ಪಳ | ನೆಲಗೀಪುರ |
| 142 | ಕೊಪ್ಪಳ | ಕೊಪ್ಪಳ | ಹೋಚನಹಳ್ಳಿ |
| 143 | ಕೊಪ್ಪಳ | ಗಂಗಾವತಿ | ಗೌರಿಪುರ |
| 144 | ಕೊಪ್ಪಳ | ಗಂಗಾವತಿ | ಸಿಂಗನಾಳ |
| 145 | ಕೊಪ್ಪಳ | ಕುಷ್ಟಗಿ | ಗೊಟಗಿ |
| 146 | ಕೊಪ್ಪಳ | ಯಲಬುರ್ಗ | ಸಿರ್ಗುಂಪಿ |
| 147 | ಕೊಪ್ಪಳ | ಗಂಗಾವತಿ | ಈಳಿಗನೂರು ತಾಂಡ |
| 148 | ಕೊಪ್ಪಳ | ಕೊಪ್ಪಳ | ಮೆತ್ಗಲ್ |
| 149 | ಕೊಪ್ಪಳ | ಕುಷ್ಟಗಿ | ವಕಾಂದುರ್ಗ |
| 150 | ಕೊಪ್ಪಳ | ಯಲಬುರ್ಗ | ಹಗೇದಾಳ್ |

27/9/17

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರದಿಂದ 8-10 ಕಿ.ಮೀ ಗಿಂತಲೂ ದೂರವಿರುವ ಗ್ರಾಮಗಳಲ್ಲಿ 150 ಆರೋಗ್ಯ ವಿಸ್ತರಣಾ ಕೇಂದ್ರಗಳ ಜೊತೆಗೆ ಹೆಚ್ಚುವರಿಯಾಗಿ 5 ಆರೋಗ್ಯ ವಿಸ್ತರಣಾ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

*****

ಓದಲಾಗಿದೆ:
1. ದಿನಾಂಕ:01-01-2018ರ ಇದೇ ಸಮ ಸಂಖ್ಯೆಯ ಸರ್ಕಾರದ ಆದೇಶ.
2. ನಿರ್ದೇಶಕರು, ಆಕುಕ ಸೇವೆಗಳು, ಇವರ ದಿನಾಂಕ: 20.02.2018ರ ಪತ್ರ ಸಂಖ್ಯೆ: ಸನಿ(ಆಮಯೋ) 61/2017-18.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ:01-01-2018ರ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿ ಒಟ್ಟು 150 ಆರೋಗ್ಯ ವಿಸ್ತರಣಾ ಚಿಕಿತ್ಸಾಲಯ ಕೇಂದ್ರಗಳನ್ನು ಸ್ಥಾಪಿಸಲು ಹಾಗೂ ಸದರಿ ಕೇಂದ್ರಗಳಿಗೆ ಒಟ್ಟು 450 ಹುದ್ದೆಗಳನ್ನು ಸೃಜಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ ದಿನಾಂಕ:20-02-2018ರ ಪತ್ರದಲ್ಲಿ ನಿರ್ದೇಶಕರು ಆಕುಕ, ಸೇವೆಗಳು, ಇವರು ಈ ಕೆಳಕಂಡ ಸ್ಥಳಗಳು ಪ್ರಾಥಮಿಕ ಆರೋಗ್ಯ ಕೇಂದ್ರದಿಂದ 8-10 ಕಿ.ಮೀ. ದೂರವಿದ್ದು, ಈ ಕೆಳಕಂಡ ಸ್ಥಳಗಳಲ್ಲಿ ಆರೋಗ್ಯ ವಿಸ್ತರಣಾ ಕೇಂದ್ರಗಳನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಗ್ರಾಮ |
|---|---|---|---|
| 1 | ಕೋಲಾರ | ಕೋಲಾರ | ದೊಡ್ಡಹಸಾಳ |
| 2 | ಕಲಬುರ್ಗಿ | ಚಿತ್ತಾಪುರ | ಇಂಗಲಗಿ |
| 3 | ಕಲಬುರ್ಗಿ | ಚಿತ್ತಾಪುರ | ಕಲಗುರ್ತಿ |
| 4 | ಕಲಬುರ್ಗಿ | ಚಿತ್ತಾಪುರ | ಬಂಕೂರು |
| 5 | ಕಲಬುರ್ಗಿ | ಚಿತ್ತಾಪುರ | ಬಾಗೋಡಿ |

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆಕುಕ 78 ಸಿಜಿಇ 2017,**
**ಬೆಂಗಳೂರು, ದಿನಾಂಕ: 06-03-2018**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ರಾಜ್ಯದಲ್ಲಿ ಒಟ್ಟು 150 ಆರೋಗ್ಯ ವಿಸ್ತರಣಾ ಕೇಂದ್ರಗಳ ಜೊತೆಗೆ ಹೆಚ್ಚುವರಿಯಾಗಿ ಆರೋಗ್ಯ ವಿಸ್ತರಣಾ ಕೇಂದ್ರಗಳ ಸ್ಥಾಪನೆ ಕುರಿತಂತೆ ಕೆಳಕಂಡ ಅಂಶಗಳನ್ನು ಮತ್ತು ಷರತ್ತುಗಳನ್ನೊಳಗೊಂಡಂತೆ ಈ ಕೆಳಗೆ ಸೂಚಿಸಿರುವ ಸ್ಥಳಗಳಲ್ಲಿ ಆರೋಗ್ಯ ವಿಸ್ತರಣಾ ಕೇಂದ್ರಗಳನ್ನು ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡಿದೆ.



JD (H&P)

2820
9/3/18

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಗ್ರಾಮ |
|---|---|---|---|
| 1 | ಕೋಲಾರ | ಕೋಲಾರ | ದೊಡ್ಡಹಸಾಳ |
| 2 | ಕಲಬುರ್ಗಿ | ಚಿತ್ತಾಪುರ | ಇಂಗಲಗಿ |
| 3 | ಕಲಬುರ್ಗಿ | ಚಿತ್ತಾಪುರ | ಕಲಗುರ್ತಿ |
| 4 | ಕಲಬುರ್ಗಿ | ಚಿತ್ತಾಪುರ | ಬಂಕೂರು |
| 5 | ಕಲಬುರ್ಗಿ | ಚಿತ್ತಾಪುರ | ಬಾಗೋಡಿ |

- ಒಂದು ಆರೋಗ್ಯ ವಿಸ್ತರಣಾ ಕೇಂದ್ರಕ್ಕೆ ತಲಾ ಒಂದು ವೈದ್ಯ ಹುದ್ದೆ, ಒಂದು ಶುಶ್ರೂಷಕರ ಹುದ್ದೆ ಮತ್ತು ಒಂದು ಗ್ರೂಪ್-ಡಿ ಹುದ್ದೆಯಂತೆ 05 ಆರೋಗ್ಯ ವಿಸ್ತರಣಾ ಕೇಂದ್ರಗಳಿಗೆ ಒಟ್ಟು 15 ಹುದ್ದೆಗಳನ್ನು ಸೃಜಿಸಲು;
- ಸದರಿ ಹುದ್ದೆಗಳಗಾಗಿ ಸೇವೆಯನ್ನು ಈ ಕೆಳಕಂಡ ರೀತಿಯಲ್ಲಿ ಪಡೆಯಲು;

| ಹುದ್ದೆ | ಸೇವೆಯ ರೀತಿ | ಸಂಭಾವನೆಯ ಮಿತಿ (ಮಾಸಿಕ ರೂ.ಗಳಲ್ಲಿ) |
|---|---|---|
| ವೈದ್ಯರು – 1 | ಗುತ್ತಿಗೆ ಆಧಾರದ ಮೇಲೆ | 45,000/- |
| ಶುಶ್ರೂಷಕರು– 1 | ಹೊರ ಗುತ್ತಿಗೆಯ ಮೇಲೆ | 13,072/- |
| ಗ್ರೂಪ್ –ಡಿ – 1 | ಹೊರ ಗುತ್ತಿಗೆಯ ಮೇಲೆ | 12,243/- |

- ಆರೋಗ್ಯ ವಿಸ್ತರಣಾ ಕೇಂದ್ರಗಳ ಸಿಬ್ಬಂದಿಯ ಸಂಭಾವನೆಯ ವೆಚ್ಚವನ್ನು ಜಿಲ್ಲಾ ಪಂಚಾಯತ್ ವಲಯದ ಲೆಕ್ಕ ಶೀರ್ಷಿಕೆ "2210-80-196-1-01-300" ಅಡಿಯಲ್ಲಿ ಭರಿಸಲು;
- ಆರೋಗ್ಯ ವಿಸ್ತರಣಾ ಕೇಂದ್ರಗಳನ್ನು ಖಾಲಿ ಇರುವ ಗ್ರಾಮ ಪಂಚಾಯತ್ ಕಛೇರಿಯ ಕೊಠಡಿಗಳಲ್ಲಿ, ಶಾಲೆಗಳಲ್ಲಿ, ಸಮುದಾಯ ಭವನದಲ್ಲಿ ಮತ್ತು ಇತರೆ ಸರ್ಕಾರದ ಕಟ್ಟಡಗಳಲ್ಲಿ ಸ್ಥಾಪಿಸಲು;
- ಸರ್ಕಾರಿ ಕಟ್ಟಡಗಳು ಲಭ್ಯವಿಲ್ಲದಿದ್ದಲ್ಲಿ ಮಾತ್ರ ಇತರೆ ಕಟ್ಟಡಗಳನ್ನು ಮಾಸಿಕ ರೂ.2,000/- ಗಳಂತೆ ಬಾಡಿಗೆಗೆ ಪಡೆಯಲು;
- ಯಾವುದೇ ಹೊಸ ಕಟ್ಟಡಗಳ ನಿರ್ಮಾಣವನ್ನು ಕೈಗೆತ್ತಿಕೊಳ್ಳದಿರಲು;
- ಒಂದು ಘಟಕಕ್ಕೆ ಮಾಸಿಕ ವೆಚ್ಚ ರೂ.10,000/-ಗಳಂತೆ ಔಷಧಿಗಾಗಿ ಅನುದಾನವನ್ನು ನಿಗದಿಪಡಿಸಿದ್ದು, ಔಷಧಿಯನ್ನು ಕರ್ನಾಟಕ ಡ್ರಗ್ಸ್ ಲಾಜಿಸ್ಟಿಕ್ಸ್ & ವೇರ್ ಹೌಸಿಂಗ್ ಸೊಸೈಟಿಯಿಂದ ಪಡೆಯಲು;
- ಒಂದು ಘಟಕಕ್ಕೆ ಪೀಠೋಪಕರಣಗಳಗಾಗಿ ಒಂದು ಬಾರಿ ವೆಚ್ಚವಾಗಿ ರೂ. 50,000/-ಅನ್ನು ನಿಗದಿಗೊಳಿಸಲು;

ಸಿಬ್ಬಂದಿಯ ಸಂಭಾವನೆ ವೆಚ್ಚ ಹಾಗೂ ಔಷಧಿ ವೆಚ್ಚವೂ ಸೇರಿದಂತೆ ಒಂದು ಆರೋಗ್ಯ ವಿಸ್ತರಣಾ ಕೇಂದ್ರಕ್ಕೆ ಮಾಸಿಕ ಒಟ್ಟಾರೆ ಆವರ್ತಕ ವೆಚ್ಚ ರೂ.80,315/-ಗಳಾಗಲಿದ್ದು, 5 ಆರೋಗ್ಯ ವಿಸ್ತರಣಾ ಕೇಂದ್ರಗಳಿಗೆ ವಾರ್ಷಿಕ ಒಟ್ಟು ಆವರ್ತಕ ವೆಚ್ಚ ರೂ. 48,18,900/- ಗಳಾಗುತ್ತದೆ.

...3

ಪೀಠೋಪಕರಣಗಳಿಗಾಗಿ 05 ಆರೋಗ್ಯ ವಿಸ್ತರಣಾ ಕೇಂದ್ರಗಳಿಗೆ ವಾರ್ಷಿಕ ಅನಾವರ್ತಕ ವೆಚ್ಚ ಒಟ್ಟು ರೂ. 2,50,000/- ಗಳಾಗುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 181/ವೆಚ್ಚ-5/2018, ದಿನಾಂಕ: 01-03-2018 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

06/3/2018
(ಪದ್ಮ .ವಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1&2)

ಇವರಿಗೆ:

1. ಪ್ರಧಾನ ಮಹಾಲೇಖಪಾಲರು (ಜಿ & ಎಸ್‌ಎಸ್‌ಎ), ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ", ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (ಇ & ಆರ್‌ಎಸ್‌ಎ), ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ", ಬೆಂಗಳೂರು.
3. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಬೆಂಗಳೂರು.
4. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
5. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

ಪ್ರತಿ:

1. ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಕಾಸ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ-2 ರವರ ಆಪ್ತ ಸಹಾಯಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
4. ಉಪ ಕಾರ್ಯದರ್ಶಿ, ಆಂತರಿಕ ಆರ್ಥಿಕ ಸಲಹೆಗಾರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು.
5. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ,(ವೆಚ್ಚ-5), ವಿಧಾನಸೌಧ, ಬೆಂಗಳೂರು.
6. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 78 ಸಿಜಿಇ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:05-02-2018

## ತಿದ್ದುಪಡಿ ಆದೇಶ

ಇದೇ ಸಮ ಸಂಖ್ಯೆಯ ದಿನಾಂಕ:01-01-2018ರ ಸರ್ಕಾರದ ಆದೇಶದ, ಅನುಬಂಧದ 150 ಆರೋಗ್ಯ ವಿಸ್ತರಣಾ ಚಿಕಿತ್ಸಾಲಯಗಳ ಪಟ್ಟಿಯಲ್ಲಿನ ಕ್ರಮಸಂಖ್ಯೆ: 51, 54, 123, 133 ಮತ್ತು 134ರಲ್ಲಿರುವುದನ್ನು ಈ ಕೆಳಕಂಡಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು:

| ಹಾಲಿ ಇರುವ ಆದೇಶ | | | | ತಿದ್ದುಪಡಿ ಮಾಡಿರುವುದು | | | |
|---|---|---|---|---|---|---|---|
| ಕ್ರ.ಸಂ | ಜಿಲ್ಲೆ | ತಾಲ್ಲೂಕು | ಗ್ರಾಮ | ಕ್ರ. ಸ | ಜಿಲ್ಲೆ | ತಾಲ್ಲೂಕು | ಗ್ರಾಮ |
| 51 | ಶಿವಮೊಗ್ಗ | ಭದ್ರಾವತಿ | ಭದ್ರ ಕಾಲೋನಿ | 51 | ಶಿವಮೊಗ್ಗ | ಭದ್ರಾವತಿ | ಬದನೆ |
| 54 | ಮೈಸೂರು | ಪಿರಿಯಾಪಟ್ಟಣ | ಎಸ್.ಶೆಟ್ಟಿಹಳ್ಳಿ | 54 | ಮೈಸೂರು | ಪಿರಿಯಾಪಟ್ಟಣ | ಎಸ್.ಶೆ |
| 123 | ಕಲಬುರಗಿ | ಚಿಂಚೋಳಿ | ಹನಗುಂಟಾ | 123 | ಕಲಬುರಗಿ | ಚಿತ್ತಾಪೂರ | ಹನಗು |
| 133 | ರಾಯಚೂರು | ಲಿಂಗಸಗೂರು | ಬೈಚಾಬಲ | 133 | ಯಾದಗಿರಿ | ಸುರಪುರ | ಬೈಚಾ |
| 134 | ರಾಯಚೂರು | ಲಿಂಗಸಗೂರು | ಕನ್ನಳ್ಳಿ | 134 | ಯಾದಗಿರಿ | ಸುರಪುರ | ಕನ್ನಳ್ಳಿ |

JD (HFP)

O/o the Director of Health & F W S, Bangalore - 09
2634
8/2/18

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಪದ್ಮ ವಿ) 05/2/2018
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಆರೋಗ್ಯ 1 & 2)

ಇವರಿಗೆ:

1. ಪ್ರಧಾನ ಮಹಾಲೇಖಪಾಲರು (ಜಿ&ಎಸ್‌ಎಸ್‌ಎ), ಕರ್ನಾಟಕ,ಹೊಸ ಕಟ್ಟಡ, "ಆಡಿಟ್ ಭವನ", ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (ಇ&ಆರ್‌ಎಸ್‌ಎ), ಕರ್ನಾಟಕ,ಹೊಸ ಕಟ್ಟಡ, "ಆಡಿಟ್ ಭವನ", ಬೆಂಗಳೂರು.
3. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಬೆಂಗಳೂರು.
4. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
5. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು-09.
6. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

**ಕರ್ನಾಟಕ ಸರ್ಕಾರ**

ಸಂಖ್ಯೆ: ಇಡಿ ಹೆಚ್‌ಪಿಟಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 18.03.2020

10
Stard
19/03/2020

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಉನ್ನತ ಶಿಕ್ಷಣ ಇಲಾಖೆ,

**ಇವರಿಗೆ**

ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ
ಬೆಂಗಳೂರು

ಮಾನ್ಯರೆ

**ವಿಷಯ**: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ___[illegible]___ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1501 ಕ್ಕೆ ಉತ್ತರ ಒದಗಿಸುತ್ತಿರುವ ಬಗ್ಗೆ.

**ಉಲ್ಲೇಖ**: ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ_____/2020, ದಿನಾಂಕ: ____________

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ___[illegible]___ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1501 ಕ್ಕೆ ಉತ್ತರದ 300 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

**ತಮ್ಮ ನಂಬುಗೆಯ**

**(ಎನ್.ಆರ್ ಏರೆಕುಪ್ಪಿ)**
ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ಆಂತರಿಕ ಆರ್ಥಿಕ ಸಲಹೆಗಾರರು,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

**ಕರ್ನಾಟಕ ವಿಧಾನಸಭೆ**

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 1501 |
| ಸದಸ್ಯರ ಹೆಸರು | : ಶ್ರೀ ತಮ್ಮಣ್ಣ ಡಿ.ಸಿ (ಮದ್ದೂರು) |
| ಉತ್ತರಿಸುವ ದಿನಾಂಕ | : 19.03.2020 |
| ಉತ್ತರಿಸುವ ಸಚಿವರು | : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸರ್ಕಾರಿ ಡಿಪ್ಲೋಮಾ ಕಾಲೇಜುಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಪ್ರಸ್ತುತ 83 ಹಗಲು ಹಾಗೂ 02 ಸಂಜೆ. ಒಟ್ಟು 85 ಸರ್ಕಾರಿ ಪಾಲಿಟೆಕ್ನಿಕ್‌ಗಳಿದ್ದು, ಜಿಲ್ಲಾವಾರು ಸರ್ಕಾರಿ ಪಾಲಿಟೆಕ್ನಿಕ್ ಪಟ್ಟಿಯನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| ಆ) | ಸದರಿ ಕಾಲೇಜುಗಳಿಲ್ಲದ ಜಿಲ್ಲೆಗಳಲ್ಲಿ ಈ ಕಾಲೇಜುಗಳ ಅವಶ್ಯಕತೆ ಇದೆಯೇ; | ಪ್ರಸ್ತುತ ತಾಂತ್ರಿಕ ಇಲಾಖೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾಲೇಜುಗಳ ಗುಣಮಟ್ಟ ಸುಧಾರಿಸುವತ್ತ ಹೆಚ್ಚಿನ ಆದ್ಯತೆ ನೀಡಲಾಗುತ್ತಿದ್ದು, ಹೊಸ ಕಾಲೇಜುಗಳ ಸ್ಥಾಪನೆ ಕುರಿತಂತೆ ಮಂಜೂರಾತಿ ನೀಡಲಾಗುತ್ತಿಲ್ಲ. |
| ಇ) | ಹಾಗಿದ್ದಲ್ಲಿ, ಸದರಿ ಕಾಲೇಜುಗಳನ್ನು ಪ್ರಾರಂಭಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಉದ್ಭವಿಸುವುದಿಲ್ಲ. |
| ಈ) | ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿಗೆ ಡಿಪ್ಲೋಮಾ ಕಾಲೇಜು ಮಂಜೂರು ಮಾಡಬೇಕೆಂದು ಸರ್ಕಾರಕ್ಕೆ ಬೇಡಿಕೆ ಸಲ್ಲಿಸಿರುವುದು ನಿಜವೇ; | ಹೌದು |
| ಉ) | ಹಾಗಿದ್ದಲ್ಲಿ, ಪ್ರಸಕ್ತ ಸಾಲಿನಲ್ಲಾದರೂ ಮದ್ದೂರಿಗೆ ಡಿಪ್ಲೋಮಾ ಕಾಲೇಜ್‌ನ್ನು ಮಂಜೂರು ಮಾಡಲಾಗುವುದೇ? (ವಿವರ ನೀಡುವುದು) | ಮಂಡ್ಯ ಜಿಲ್ಲೆಯಲ್ಲಿ ಪ್ರಸ್ತುತ 4 ಸರ್ಕಾರಿ ಪಾಲಿಟೆಕ್ನಿಕ್ ಮಂಜೂರಾಗಿದ್ದು, ಅದರಲ್ಲಿ 3 ಪಾಲಿಟೆಕ್ನಿಕ್‌ಗಳು ಕಾರ್ಯನಿರ್ವಹಿಸುತ್ತಿವೆ ಹಾಗೂ ಇದರೊಂದಿಗೆ 3 ಖಾಸಗಿ ಪಾಲಿಟೆಕ್ನಿಕ್‌ಗಳು ಈ ಕೆಳಕಂಡಂತಿವೆ; |

| ಕ್ರ ಸಂ | ಪಾಲಿಟೆಕ್ನಿಕ್ |
|---|---|
| | **ಸರ್ಕಾರಿ** |
| 1 | ಸರ್ಕಾರಿ ಪಾಲಿಟೆಕ್ನಿಕ್, ಕೆ.ಆರ್.ಪೇಟೆ |
| 2 | ಸರ್ಕಾರಿ ಪಾಲಿಟೆಕ್ನಿಕ್, ಅರಕೆರೆ, ಶ್ರೀರಂಗಪಟ್ಟಣ |
| 3 | ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ |
| 4 | ಸರ್ಕಾರಿ ಪಾಲಿಟೆಕ್ನಿಕ್, ಮಳವಳ್ಳಿ (ಹೊಸ ಸಂಸ್ಥೆ) |
| | **ಖಾಸಗಿ** |
| 5 | ಬಿ.ಇ.ಟಿ. ಪಾಲಿಟೆಕ್ನಿಕ್, ಭಾರತಿ ನಗರ, ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ |
| 6 | ಎಸ್.ಇ.ಟಿ. ಪಾಲಿಟೆಕ್ನಿಕ್, ಮೇಲು ಕೋಟೆ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ. |
| 7 | ಎಸ್.ಜೆ.ಬಿ.ಜಿ.ಎಸ್. ಪಾಲಿಟೆಕ್ನಿಕ್, ಎನ್‌ಹೆಚ್-48, ಬೆಳ್ಳೂರು ಕ್ರಾಸ್, ಬಿ.ಜಿ ನಗರ್, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ. |

2019-20 ರಲ್ಲಿ ಪ್ರವೇಶಾತಿ ವಿವರ ಇಂತಿದೆ.

| ಕ್ರ ಸಂ | ಪಾಲಿಟೆಕ್ನಿಕ್ ವಿವರ | ಸದರಿ ಪಾಲಿಟೆಕ್ನಿಕ್ ಗಳಿಂದ ಮದ್ದೂರಿಗೆ ಇರುವ ಅಂತರ | ಪ್ರವೇ ಶಾತಿ | ಪ್ರವೇಶ ಪಡೆದವರು (ಎಸ್‌ಎನ್ ಕ್ಯೂ ಕೋಟಾ ಸೇರಿ) | ಶೇಕಡಾವಾರು ಪ್ರವೇಶ |
|---|---|---|---|---|---|
| | | ಸರ್ಕಾರಿ ಪಾಲಿಟೆಕ್ನಿಕ್ | | | |
| 1 | ಸರ್ಕಾರಿ ಪಾಲಿಟೆಕ್ನಿಕ್, ಕೆ.ಆರ್.ಪೇಟೆ | 79.0 ಕಿ.ಮೀ | 300 | 300 | 100% |
| 2 | ಸರ್ಕಾರಿ ಪಾಲಿಟೆಕ್ನಿಕ್, ಅರಕೆರೆ, ಶ್ರೀರಂಗಪಟ್ಟಣ | 38.1 ಕಿ.ಮೀ | 240 | 240 | 100% |
| 3 | ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ | 49.2 ಕಿ.ಮೀ | 240 | 165 | 69% |
| 4 | ಸರ್ಕಾರಿ ಪಾಲಿಟೆಕ್ನಿಕ್, ಮಳವಳ್ಳಿ (ಮಂಜೂರಾಗಿದ್ದು, ಇನ್ನೂ ಸ್ಥಾಪನೆಯಾಗಿಲ್ಲ | 25.0 ಕಿ.ಮೀ | | | |
| | | ಖಾಸಗಿ ಪಾಲಿಟೆಕ್ನಿಕ್ | | | |
| 5 | ಬಿ.ಇ.ಟಿ. ಪಾಲಿಟೆಕ್ನಿಕ್, ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ | 13.0 ಕಿ.ಮೀ | 460 | 145 | 32% |
| 6 | ಎಸ್.ಇ.ಟಿ. ಪಾಲಿಟೆಕ್ನಿಕ್, ಮೇಲುಕೋಟೆ, ಪಾಂಡವಪುರ ತಾ, ಮಂಡ್ಯ | 55.8 ಕಿ.ಮೀ | 432 | 121 | 28% |
| 7 | ಎಸ್.ಜೆ.ಬಿ.ಜಿ. ಎಸ್. ಪಾಲಿಟೆಕ್ನಿಕ್, ನಾಗಮಂಗಲ ತಾ, ಮಂಡ್ಯ ಜಿಲ್ಲೆ. | 83.2 ಕಿ.ಮೀ | 300 | 137 | 46% |

ಮಂಡ್ಯ ಪ್ರದೇಶದ 49.2 ಕಿ.ಮೀ ಅಂತರದಲ್ಲಿರುವ ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ 2019-20 ನೇ ಸಾಲಿನಲ್ಲಿ ಶೇ. 69 ರಷ್ಟು ವಿದ್ಯಾರ್ಥಿಗಳು ಪ್ರವೇಶ ಪಡೆದಿದ್ದು, ಶೇ. 31 ರಷ್ಟು ಸೀಟುಗಳು ಖಾಲಿ ಉಳಿದಿದೆ. ಇದಲ್ಲದೇ ಖಾಸಗಿ ಪಾಲಿಟೆಕ್ನಿಕ್‌ನಲ್ಲಿ ಶೇ. 72 ರಷ್ಟು ಸೀಟುಗಳು ಖಾಲಿ ಉಳಿದಿವೆ.

ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಪಾಲಿಟೆಕ್ನಿಕ್ ಕಾಲೇಜುಗಳ ಗುಣಮಟ್ಟ ಸುಧಾರಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲಾಗುತ್ತಿದೆ. ಆದ್ದರಿಂದ ಹೊಸ ಕಾಲೇಜುಗಳನ್ನು ಪ್ರಾರಂಭಿಸುವ ಕುರಿತಂತೆ ಮಂಜೂರಾತಿ ನೀಡಲಾಗುತ್ತಿಲ್ಲ.

ಸಂಖ್ಯೆ: ಇಡಿ 50 ಹೆಚ್‌ಪಿಟಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿ ಹಾಗೂ
ಉನ್ನತ ಶಿಕ್ಷಣ ಸಚಿವರು

## ತಾಂತ್ರಿಕ ಶಿಕ್ಷಣ ಇಲಾಖೆ

### ಇಲಾಖೆಯ ಅಧೀನದಲ್ಲಿರುವ ಸರ್ಕಾರಿ ಪಾಲಿಟೆಕ್ನಿಕ್‌ಗಳ ವಿವರ

ಅನುಬಂಧ – 1

| ಕ್ರ. ಸಂ. | ಪಾಲಿಟೆಕ್ನಿಕ್‌ಗಳ ವಿವರ | ತಾಲ್ಲೂಕು | ಜಿಲ್ಲೆ |
|---|---|---|---|
| 1 | ಸರ್ಕಾರಿ ಎಸ್.ಜೆ.ಪಾಲಿಟೆಕ್ನಿಕ್, ಬೆಂಗಳೂರು | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 2 | ಸರ್ಕಾರಿ ಎಸ್.ಜೆ.ಪಾಲಿಟೆಕ್ನಿಕ್.(ಸಂಜೆ) ಬೆಂಗಳೂರು | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 3 | ಸರ್ಕಾರಿ ಇನ್ಸಿಟಿಟ್ಯೂಟ್ ಆಫ್ ಪ್ರಿಂಟಿಂಗ್ ಟೆಕ್ನಾಲಜಿ, ಬೆಂಗಳೂರು | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 4 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೆಂಗಳೂರು | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 5 | ಸರ್ಕಾರಿ ಜಿ.ಆರ್.ಇನ್‌ಸ್ಟಿಟ್ಯೂಟ್ ಆಫ್ ಕಮರ್ಷಿಯಲ್ ಪ್ರಾಕ್ಟೀಸ್, ಬೆಂಗಳೂರು | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 6 | ಸರ್ಕಾರಿ ಇನ್‌ಸ್ಟಿಟ್ಯೂಟ್ ಆಫ್ ಟೆಕ್ಸ್‌ಟೈಲ್ ಟೆಕ್ನಾಲಜಿ, ಬೆಂಗಳೂರು | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 7 | ಸರ್ಕಾರಿ ಆರ್.ಸಿ.ಇನ್ ಸ್ಟಿಟ್ಯೂಟ್ ಆಫ್ ಬಿಸಿನೆಸ್ ಮ್ಯಾನೇಜ್ ಮೆಂಟ್, ಬೆಂಗಳೂರು | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 8 | ಸರ್ಕಾರಿ ಪಾಲಿಟೆಕ್ನಿಕ್, ಚನ್ನಸಂದ್ರ | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 9 | ಸರ್ಕಾರಿ ಪಾಲಿಟೆಕ್ನಿಕ್, ಇಮ್ಮಡಿಹಳ್ಳಿ | ಬೆಂಗಳೂರು | ಬೆಂಗಳೂರು ನಗರ ಜಿಲ್ಲೆ |
| 10 | ಸರ್ಕಾರಿ ಫಿಲಂ ಅಂಡ್ ಟಿ.ವಿ. ಸಂಸ್ಥೆ, ಬೆಂಗಳೂರು | ದೊಡ್ಡಬಳ್ಳಾಪುರ | ಬೆಂಗಳೂರು ಗ್ರಾಮಂತರ ಜಿಲ್ಲೆ |
| 11 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ರಾಮನಗರ | ರಾಮನಗರ | ರಾಮನಗರ ಜಿಲ್ಲೆ |
| 12 | ಸರ್ಕಾರಿ ಪಾಲಿಟೆಕ್ನಿಕ್, ರಾಮನಗರ | ರಾಮನಗರ | ರಾಮನಗರ ಜಿಲ್ಲೆ |
| 13 | ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ | ಚನ್ನಪಟ್ಟಣ | ರಾಮನಗರ ಜಿಲ್ಲೆ |
| 14 | ಸರ್ಕಾರಿ ಪಾಲಿಟೆಕ್ನಿಕ್, ಕೊಪ್ಪಳ | ಕೊಪ್ಪಳ | ಕೊಪ್ಪಳ ಜಿಲ್ಲೆ |
| 15 | ಸರ್ಕಾರಿ ಪಾಲಿಟೆಕ್ನಿಕ್, ಕುಷ್ಟಗಿ | ಕುಷ್ಟಗಿ | ಕೊಪ್ಪಳ ಜಿಲ್ಲೆ |
| 16 | ಸರ್ಕಾರಿ ಪಾಲಿಟೆಕ್ನಿಕ್, ಕಾರಟಗಿ | ಗಂಗಾವತಿ | ಕೊಪ್ಪಳ ಜಿಲ್ಲೆ |
| 17 | ಸರ್ಕಾರಿ ಪಾಲಿಟೆಕ್ನಿಕ್, ಬೆಳಗಾವಿ | ಬೆಳಗಾವಿ | ಬೆಳಗಾವಿ ಜಿಲ್ಲೆ |
| 18 | ಸರ್ಕಾರಿ ಪಾಲಿಟೆಕ್ನಿಕ್, ಅಥಣಿ | ಅಥಣಿ | ಬೆಳಗಾವಿ ಜಿಲ್ಲೆ |
| 19 | ಸರ್ಕಾರಿ ಪಾಲಿಟೆಕ್ನಿಕ್, ಬಳ್ಳಾರಿ. | ಬಳ್ಳಾರಿ | ಬಳ್ಳಾರಿ ಜಿಲ್ಲೆ |
| 20 | ಸರ್ಕಾರಿ ಪಾಲಿಟೆಕ್ನಿಕ್, ಕೂಡ್ಲಗಿ | ಕೂಡ್ಲಗಿ | ಬಳ್ಳಾರಿ ಜಿಲ್ಲೆ |
| 21 | ಸರ್ಕಾರಿ ಪಾಲಿಟೆಕ್ನಿಕ್, ಕಂಪ್ಲಿ | ಕಂಪ್ಲಿ | ಬಳ್ಳಾರಿ ಜಿಲ್ಲೆ |
| 22 | ಸರ್ಕಾರಿ ಪಾಲಿಟೆಕ್ನಿಕ್, ಬೀದರ್ | ಬೀದರ್ | ಬೀದರ್ ಜಿಲ್ಲೆ |
| 23 | ಸರ್ಕಾರಿ ಪಾಲಿಟೆಕ್ನಿಕ್, ಔರಾದ್ | ಔರಾದ್ | ಬೀದರ್ ಜಿಲ್ಲೆ |
| 24 | ಸರ್ಕಾರಿ ಪಾಲಿಟೆಕ್ನಿಕ್, ಬಿಜಾಪುರ | ಬಿಜಾಪುರ | ಬಿಜಾಪುರ ಜಿಲ್ಲೆ |
| 25 | ಸರ್ಕಾರಿ ಪಾಲಿಟೆಕ್ನಿಕ್, ಝಳಕಿ | ಇಂಡಿ | ಬಿಜಾಪುರ ಜಿಲ್ಲೆ |
| 26 | ಡಿ.ಎ.ಸಿ.ಜಿ. ಸರ್ಕಾರಿ ಪಾಲಿಟೆಕ್ನಿಕ್, ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ಜಿಲ್ಲೆ |

| ಕ್ರ. ಸಂ. | ಪಾಲಿಟೆಕ್ನಿಕ್‌ಗಳ ವಿವರ | ತಾಲ್ಲೂಕು | ಜಿಲ್ಲೆ |
|---|---|---|---|
| 27 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಮಂಗಳೂರು | ಮಂಗಳೂರು | ದಕ್ಷಿಣ ಕನ್ನಡ (ಮಂಗಳೂರು) ಜಿಲ್ಲೆ |
| 28 | ಕರ್ನಾಟಕ (ಸರ್ಕಾರಿ) ಪಾಲಿಟೆಕ್ನಿಕ್, ಮಂಗಳೂರು | ಮಂಗಳೂರು | ದಕ್ಷಿಣ ಕನ್ನಡ (ಮಂಗಳೂರು) ಜಿಲ್ಲೆ |
| 29 | ಕರ್ನಾಟಕ (ಸರ್ಕಾರಿ) (ಸಂಜೆ) ಪಾಲಿಟೆಕ್ನಿಕ್, ಮಂಗಳೂರು | ಮಂಗಳೂರು | ದಕ್ಷಿಣ ಕನ್ನಡ (ಮಂಗಳೂರು) ಜಿಲ್ಲೆ |
| 30 | ಸರ್ಕಾರಿ ಪಾಲಿಟೆಕ್ನಿಕ್, ಬಂಟವಾಳ | ಬಂಟವಾಳ | ದಕ್ಷಿಣ ಕನ್ನಡ (ಮಂಗಳೂರು) ಜಿಲ್ಲೆ |
| 31 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಹುಬ್ಬಳ್ಳಿ | ಹುಬ್ಬಳ್ಳಿ | ಧಾರವಾಡ ಜಿಲ್ಲೆ |
| 32 | ಸರ್ಕಾರಿ ಪಾಲಿಟೆಕ್ನಿಕ್, ಹುಬ್ಬಳ್ಳಿ | ಹುಬ್ಬಳ್ಳಿ | ಧಾರವಾಡ ಜಿಲ್ಲೆ |
| 33 | ಸರ್ಕಾರಿ ಪಾಲಿಟೆಕ್ನಿಕ್,ಗುಲ್ಬರ್ಗಾ | ಕಲಬುರಗಿ | ಕಲಬುರಗಿ ಜಿಲ್ಲೆ |
| 34 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಗುಲ್ಬರ್ಗಾ | ಕಲಬುರಗಿ | ಕಲಬುರಗಿ ಜಿಲ್ಲೆ |
| 35 | ಸರ್ಕಾರಿ ಪಾಲಿಟೆಕ್ನಿಕ್, ಅಫ್ಜಲ್‌ಪುರ | ಅಫ್ಜಲ್‌ಪುರ | ಕಲಬುರಗಿ ಜಿಲ್ಲೆ |
| 36 | ಸರ್ಕಾರಿ ಪಾಲಿಟೆಕ್ನಿಕ್, ಕಾಳಗಿ | ಚಿತ್ತಾಪುರ | ಕಲಬುರಗಿ ಜಿಲ್ಲೆ |
| 37 | ಸರ್ಕಾರಿ ಪಾಲಿಟೆಕ್ನಿಕ್, ಸುರಪುರ | ಸುರಪುರ | ಯಾದಗಿರ್ ಜಿಲ್ಲೆ |
| 38 | ಶ್ರೀಮತಿ ಎಲ್.ವಿ.ಸರ್ಕಾರಿ ಪಾಲಿಟೆಕ್ನಿಕ್, ಹಾಸನ | ಹಾಸನ | ಹಾಸನ ಜಿಲ್ಲೆ |
| 39 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್,ಹಾಸನ | ಹಾಸನ | ಹಾಸನ ಜಿಲ್ಲೆ |
| 40 | ಸರ್ಕಾರಿ ಪಾಲಿಟೆಕ್ನಿಕ್, ಬೇಲೂರು | ಬೇಲೂರು | ಹಾಸನ ಜಿಲ್ಲೆ |
| 41 | ಸರ್ಕಾರಿ ಪಾಲಿಟೆಕ್ನಿಕ್, ಹೊಳೆನರಸಿಪುರ | ಹೊಳೆನರಸಿಪುರ | ಹಾಸನ ಜಿಲ್ಲೆ |
| 42 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಹೊಳೆನರಸಿಪುರ | ಹೊಳೆನರಸಿಪುರ | ಹಾಸನ ಜಿಲ್ಲೆ |
| 43 | ಸರ್ಕಾರಿ ಪಾಲಿಟೆಕ್ನಿಕ್, ಮೊಸಳೆಹೊಸಳ್ಳಿ | ಹಾಸನ | ಹಾಸನ ಜಿಲ್ಲೆ |
| 44 | ಸರ್ಕಾರಿ ಪಾಲಿಟೆಕ್ನಿಕ್, ಕುಶಾಲನಗರ. | ಸೋಮವಾರ ಪೇಟೆ | ಕೊಡಗು ಜಿಲ್ಲೆ |
| 45 | ಸರ್ಕಾರಿ ಪಾಲಿಟೆಕ್ನಿಕ್, ಚಿಂತಾಮಣಿ | ಚಿಂತಾಮಣಿ | ಚಿಕ್ಕಬಳ್ಳಾಪುರ ಜಿಲ್ಲೆ |
| 46 | ಸರ್ಕಾರಿ ಪಾಲಿಟೆಕ್ನಿಕ್, ಬಾಗೇಪಲ್ಲಿ | ಬಾಗೇಪಲ್ಲಿ | ಚಿಕ್ಕಬಳ್ಳಾಪುರ ಜಿಲ್ಲೆ |
| 47 | ಸರ್ಕಾರಿ ಸ್ಕೂಲ್ ಆಫ್ ಮೈನ್ಸ್, ಕೆ.ಜಿ.ಎಫ್. | ಕೆ.ಜಿ.ಎಫ್ | ಕೋಲಾರ ಜಿಲ್ಲೆ |
| 48 | ಸರ್ಕಾರಿ ಪಾಲಿಟೆಕ್ನಿಕ್, ಮುಳಬಾಗಿಲು | ಮುಳಬಾಗಿಲು | ಕೋಲಾರ ಜಿಲ್ಲೆ |
| 49 | ಸರ್ಕಾರಿ ಪಾಲಿಟೆಕ್ನಿಕ್, ಕೆ.ಜಿ.ಎಫ್ | ಕೆ.ಜಿ.ಎಫ್ | ಕೋಲಾರ ಜಿಲ್ಲೆ |
| 50 | ಸರ್ಕಾರಿ ಪಾಲಿಟೆಕ್ನಿಕ್, ಕೆ.ಆರ್.ಪೇಟೆ | ಕೆ.ಆರ್.ಪೇಟೆ | ಮಂಡ್ಯ ಜಿಲ್ಲೆ |
| 51 | ಸರ್ಕಾರಿ ಪಾಲಿಟೆಕ್ನಿಕ್, ಶ್ರೀರಂಗಪಟ್ಟಣ | ಶ್ರೀರಂಗಪಟ್ಟಣ | ಮಂಡ್ಯ ಜಿಲ್ಲೆ |
| 52 | ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ | ನಾಗಮಂಗಲ | ಮಂಡ್ಯ ಜಿಲ್ಲೆ |
| 53 | ಸಿ.ಪಿ.ಸಿ. (ಸರ್ಕಾರಿ)ಪಾಲಿಟೆಕ್ನಿಕ್, ಮೈಸೂರು | ಮೈಸೂರು | ಮೈಸೂರು ಜಿಲ್ಲೆ |
| 54 | ಸರ್ಕಾರಿ ಪಾಲಿಟೆಕ್ನಿಕ್, ಮಿರ್ಲೆ | ಕೆ.ಆರ್.ನಗರ | ಮೈಸೂರು ಜಿಲ್ಲೆ |
| 55 | ಸರ್ಕಾರಿ ಪಾಲಿಟೆಕ್ನಿಕ್, ರಾಯಚೂರು | ರಾಯಚೂರು | ರಾಯಚೂರು ಜಿಲ್ಲೆ |
| 56 | ಸರ್ಕಾರಿ ಪಾಲಿಟೆಕ್ನಿಕ್, ಲಿಂಗಸಗೂರು | ಲಿಂಗಸಗೂರು | ರಾಯಚೂರು ಜಿಲ್ಲೆ |

| ಕ್ರ. ಸಂ. | ಪಾಲಿಟೆಕ್ನಿಕ್‌ಗಳ ವಿವರ | ತಾಲ್ಲೂಕು | ಜಿಲ್ಲೆ |
|---|---|---|---|
| 57 | ಸರ್ಕಾರಿ ಪಾಲಿಟೆಕ್ನಿಕ್, ದೇವದುರ್ಗ | ದೇವದುರ್ಗ | ರಾಯಚೂರು ಜಿಲ್ಲೆ |
| 58 | ಸರ್ಕಾರಿ ಪಾಲಿಟೆಕ್ನಿಕ್, ತುಮಕೂರು | ತುಮಕೂರು | ತುಮಕೂರು ಜಿಲ್ಲೆ |
| 59 | ಸರ್ಕಾರಿ ಪಾಲಿಟೆಕ್ನಿಕ್, ತುರುವೇಕೆರೆ | ತುರುವೇಕೆರೆ | ತುಮಕೂರು ಜಿಲ್ಲೆ |
| 60 | ಸರ್ಕಾರಿ ಪಾಲಿಟೆಕ್ನಿಕ್, ಶಿರಾ | ಶಿರಾ | ತುಮಕೂರು ಜಿಲ್ಲೆ |
| 61 | ಸರ್ಕಾರಿ ಪಾಲಿಟೆಕ್ನಿಕ್, ಕಾರವಾರ | ಕಾರವಾರ | ಉತ್ತರ ಕನ್ನಡ ಜಿಲ್ಲೆ |
| 62 | ಸರ್ಕಾರಿ ಪಾಲಿಟೆಕ್ನಿಕ್, ಜೋಯಿಡ | ಜೊಯಿಡ | ಉತ್ತರ ಕನ್ನಡ ಜಿಲ್ಲೆ |
| 63 | ಸರ್ಕಾರಿ ಪಾಲಿಟೆಕ್ನಿಕ್, ಸಿದ್ಧಪುರ | ಸಿದ್ಧಪುರ | ಉತ್ತರ ಕನ್ನಡ ಜಿಲ್ಲೆ |
| 64 | ಸರ್ಕಾರಿ ಪಾಲಿಟೆಕ್ನಿಕ್, ಮುಂಡಗೋಡ್ | ಮುಂಡಗೋಡ್ | ಉತ್ತರ ಕನ್ನಡ ಜಿಲ್ಲೆ |
| 65 | ಸರ್ಕಾರಿ ಪಾಲಿಟೆಕ್ನಿಕ್, ಸೊರಬ | ಸೊರಬ | ಶಿವಮೊಗ್ಗ ಜಿಲ್ಲೆ |
| 66 | ಸರ್ಕಾರಿ ವಿಐಎಸ್‌ಎಸ್‌ಜೆ ಪಾಲಿಟೆಕ್ನಿಕ್, ಭದ್ರಾವತಿ | ಭದ್ರಾವತಿ | ಶಿವಮೊಗ್ಗ ಜಿಲ್ಲೆ |
| 67 | ಸರ್ಕಾರಿ ಮಹಿಳಾ ವಸತಿ ಪಾಲಿಟೆಕ್ನಿಕ್, ಶಿವಮೊಗ್ಗ | ಶಿವಮೊಗ್ಗ | ಶಿವಮೊಗ್ಗ ಜಿಲ್ಲೆ |
| 68 | ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಶಿರಾಳಕೊಪ್ಪ | ಶಿರಾಳಕೊಪ್ಪ | ಶಿವಮೊಗ್ಗ ಜಿಲ್ಲೆ |
| 69 | ಡಿ.ಆರ್.ಆರ್. ಸರ್ಕಾರಿ ಪಾಲಿಟೆಕ್ನಿಕ್, ದಾವಣಗೆರೆ. | ದಾವಣಗೆರೆ | ದಾವಣಗೆರೆ ಜಿಲ್ಲೆ |
| 70 | ಸರ್ಕಾರಿ ಪಾಲಿಟೆಕ್ನಿಕ್, ಹರಪನಹಳ್ಳಿ | ಹರಪನಹಳ್ಳಿ | ದಾವಣಗೆರೆ ಜಿಲ್ಲೆ |
| 71 | ಸರ್ಕಾರಿ ಪಾಲಿಟೆಕ್ನಿಕ್, ಹರಿಹರ | ಹರಿಹರ | ದಾವಣಗೆರೆ ಜಿಲ್ಲೆ |
| 72 | ಸರ್ಕಾರಿ ಪಾಲಿಟೆಕ್ನಿಕ್, ಚಾಮರಾಜನಗರ | ಚಾಮರಾಜನಗರ | ಚಾಮರಾಜನಗರ ಜಿಲ್ಲೆ |
| 73 | ಸರ್ಕಾರಿ ಪಾಲಿಟೆಕ್ನಿಕ್, ಉಡುಪಿ | ಉಡುಪಿ | ಉಡುಪಿ ಜಿಲ್ಲೆ |
| 74 | ಸರ್ಕಾರಿ ಪಾಲಿಟೆಕ್ನಿಕ್, ಕಾರ್ಕಳ | ಕಾರ್ಕಳ | ಉಡುಪಿ ಜಿಲ್ಲೆ |
| 75 | ಸರ್ಕಾರಿ ಪಾಲಿಟೆಕ್ನಿಕ್, ಗದಗ್ | ಗದಗ್ | ಗದಗ್ ಜಿಲ್ಲೆ |
| 76 | ಸರ್ಕಾರಿ ಪಾಲಿಟೆಕ್ನಿಕ್, ಗಜೇಂದ್ರಘಡ | ರೋಣ | ಗದಗ್ ಜಿಲ್ಲೆ |
| 77 | ಸರ್ಕಾರಿ ಪಾಲಿಟೆಕ್ನಿಕ್, ಚಿತ್ರದುರ್ಗ | ಚಿತ್ರದುರ್ಗ | ಚಿತ್ರದುರ್ಗ ಜಿಲ್ಲೆ |
| 78 | ಸರ್ಕಾರಿ ಪಾಲಿಟೆಕ್ನಿಕ್, ಹಿರಿಯೂರು | ಹಿರಿಯೂರು | ಚಿತ್ರದುರ್ಗ ಜಿಲ್ಲೆ |
| 79 | ಸರ್ಕಾರಿ ಪಾಲಿಟೆಕ್ನಿಕ್, ಹೊಸದುರ್ಗ | ಹೊಸದುರ್ಗ | ಚಿತ್ರದುರ್ಗ ಜಿಲ್ಲೆ |
| 80 | ಸರ್ಕಾರಿ ಪಾಲಿಟೆಕ್ನಿಕ್, ಹಾನಗಲ್ | ಹಾನಗಲ್ | ಹಾವೇರಿ ಜಿಲ್ಲೆ |
| 81 | ಸರ್ಕಾರಿ ಪಾಲಿಟೆಕ್ನಿಕ್, ಬಂಕಾಪುರ | ಸಿಗ್ಗಾವ | ಹಾವೇರಿ ಜಿಲ್ಲೆ |
| 82 | ಸರ್ಕಾರಿ ಪಾಲಿಟೆಕ್ನಿಕ್, ಬಾಗಲಕೋಟೆ | ಬಾಗಲಕೋಟೆ | ಬಾಗಲಕೋಟೆ ಜಿಲ್ಲೆ |
| 83 | ಸರ್ಕಾರಿ ಪಾಲಿಟೆಕ್ನಿಕ್, ಬೀಳಗಿ | ಬೀಳಗಿ | ಬಾಗಲಕೋಟೆ ಜಿಲ್ಲೆ |
| 84 | ಸರ್ಕಾರಿ ಪಾಲಿಟೆಕ್ನಿಕ್, ಮುಧೋಳ | ಮುಧೋಳ | ಬಾಗಲಕೋಟೆ ಜಿಲ್ಲೆ |
| 85 | ಸರ್ಕಾರಿ ಪಾಲಿಟೆಕ್ನಿಕ್, ರಬಕವಿ ಬನಹಟ್ಟಿ | ರಬಕವಿ ಬನಹಟ್ಟಿ | ಬಾಗಲಕೋಟೆ ಜಿಲ್ಲೆ |

ನಿರ್ದೇಶಕರು
ತಾಂತ್ರಿಕ ಶಿಕ್ಷಣ ಇಲಾಖೆ
ಬೆಂಗಳೂರು.

**ವಿಧಾನ ಸಭೆಯ ಸದಸ್ಯರಾದ ಶ್ರೀ. ತಮ್ಮಣ್ಣ ಡಿ.ಸಿ (ಮದ್ದೂರು) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1501ಕ್ಕೆ ಪೂರಕ ಟಿಪ್ಪಣಿ**

ರಾಜ್ಯದಲ್ಲಿ ಪ್ರಸ್ತುತ 85 ಸರ್ಕಾರಿ ಪಾಟೆಕ್ನಿಕ್‌ಗಳು, 44 ಅನುದಾನಿತ ಪಾಲಿಟೆಕ್ನಿಕ್‌ಗಳು ಹಾಗೂ 159 ಖಾಸಗಿ ಪಾಲಿಟೆಕ್ನಿಕ್‌ಗಳಿದ್ದು, ವಿವರ ಇಂತಿದೆ.

| ತಾಂತ್ರಿಕ ಸಂಸ್ಥೆಗಳು | ಸರ್ಕಾರಿ | ಅನುದಾನಿತ | ಖಾಸಗಿ | ಒಟ್ಟು |
|---|---|---|---|---|
| ಪಾಲಿಟೆಕ್ನಿಕ್‌ಗಳು (ಕೋ-ಎಜುಕೇಷನ್) | 72 | 42 | 132 | 246 |
| ಮಹಿಳಾ ಪಾಲಿಟೆಕ್ನಿಕ್‌ಗಳು | 09 | 1 | 3 | 13 |
| ಸಂಜೆ ಪಾಲಿಟೆಕ್ನಿಕ್‌ಗಳು | 02 | 1 | 2 | 5 |
| ನಾನ್-ಇಂಜಿನಿಯರಿಂಗ್ ಪಠ್ಯಕ್ರಮ | 02 | -- | -- | 2 |
| 2ನೇ ಪಾಳೀಯ ಪಾಲಿಟೆಕ್ನಿಕ್ | -- | -- | 22 | 22 |
| *ಸಮಗ್ರ ಒಟ್ಟು* | *85* | *44* | *159* | **288** |

ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನಲ್ಲಿ ಡಿಪ್ಲೋಮಾ ಕಾಲೇಜು ಪ್ರಾರಂಭಿಸಲು ಮನವಿ ಸ್ವೀಕೃತವಾಗಿದ್ದು, ಮದ್ದೂರು ತಾಲ್ಲೂಕಿನಲ್ಲಿ ಸರ್ಕಾರಿ ಡಿಪ್ಲೋಮಾ ಕಾಲೇಜು ಪ್ರಾರಂಭಿಸುವ ಸಂಬಂಧ ಈ ಕಛೇರಿ ಪತ್ರ ಸಂಖ್ಯೆ: ಡಿಟಿಇ 16 ಡಿವಿಪಿ (1) 2018, ದಿನಾಂಕ 30-11-2018 ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.

ರಾಜ್ಯದಲ್ಲಿ ಪಾಲಿಟೆಕ್ನಿಕ್/ಇಂಜಿನಿಯರಿಂಗ್‌ಕಾಲೇಜು ಪ್ರಾರಂಭಿಸಲು ಎಐಸಿಟಿಇ, ನವದೆಹಲಿಯವರ ನಿಯಮಗಳನ್ನು ಪಾಲಿಸಬೇಕಿದ್ದು, ಎಐಸಿಟಿಇಯವರ 2020-21 ನೇ ಸಾಲಿನ ಮಾರ್ಗ ಸೂಚಿಯನ್ವಯ ಪಾಲಿಟೆಕ್ನಿಕ್ ಪ್ರಾರಂಭಿಸಲುಗ್ರಾಮಾಂತರ ಪ್ರದೇಶದಲ್ಲಿ 4.00 ಎಕರೆ, ನಗರ ಪ್ರದೇಶದಲ್ಲಿ 1.5 ಎಕರೆ ಜಮೀನು ಅಗತ್ಯವಿರುತ್ತದೆ. ಇದರೊಂದಿಗೆ ಪಾಲಿಟೆಕ್ನಿಕ್ ಪ್ರಾರಂಭಿಸಲುಅಗತ್ಯವಿರುವಎಲ್ಲಾ ಮೂಲಭೂತ ಸೌಕರ್ಯಗಳನ್ನು ಒದಗಿಸಿದ ನಂತರವೇ ಎಐಸಿಟಿಇ, ನವದೆಹಲಿಯವರಅನುಮೋದನೆಗೆ ಅರ್ಜಿ ಸಲ್ಲಿಸಬಹುದಾಗಿದೆ.

ಒಂದು ಸರ್ಕಾರಿ ಪಾಲಿಟೆಕ್ನಿಕ್ ಪ್ರಾರಂಭಿಸಲು ಈ ಕೆಳಕಂಡ ಮೂಲಭೂತ ಸೌಕರ್ಯ ಅಗತ್ಯವಿರುತ್ತದೆ.

| ಕ್ರ ಸಂ | ಅನಾವರ್ತಖರ್ಚಿನ ವಿವರ | ಒಟ್ಟು (ರೂ.ಲಕ್ಷಗಳಲ್ಲಿ) |
|---|---|---|
| 1 | ಮುಖ್ಯಕಟ್ಟಡ | 1500.00 |
| 2 | ಯಂತ್ರೋಪಕರಣಗಳ ಖರೀದಿ ವೆಚ್ಚ | 300.00 |
| 3 | ಪೀಠೋಪಕರಣಗಳ ಖರೀದಿ ವೆಚ್ಚ | 85.00 |
| 4 | ಪುಸ್ತಕಗಳ ಖರೀದಿ ವೆಚ್ಚ | 15.00 |
| | ಒಟ್ಟು | 1900.00 |

| ಅಂದಾಜುಆವರ್ತಿತಖರ್ಚು: (ಪ್ರತಿ ವರ್ಷ) | ಒಟ್ಟು(ರೂ.ಲಕ್ಷಗಳಲ್ಲಿ) |
|---|---|
| ಸಿಬ್ಬಂದಿ ವೇತನ | 400.00 |
| ನಿತ್ಯೋಪಯೋಗಿ ಸಾಮಗ್ರಿ | 5.00 |
| ಪುಸ್ತಕ ಖರೀದಿ | 1.00 |
| | |
| ಒಟ್ಟು | 406.00 |

ಎಐಸಿಟಿಇ, ನವದೆಹಲಿಯರವ 2020-21 ನೇ ಸಾಲಿನ ಮಾರ್ಗಸೂಚಿಯನ್ವಯ ಬೋಧಕರು ಮತ್ತು ವಿದ್ಯಾರ್ಥಿಗಳ ಅನುಪಾತ 1:25 ಆಗಿರುತ್ತದೆ.

| ಕ್ರ ಸಂ | ಹುದ್ದೆ | ಹುದ್ದೆಯಗಳ ಸಂಖ್ಯೆ |
|---|---|---|
| 1 | ಬೋಧಕರು | 36 |
| 2 | ಬೋಧಕೇತರ ಸಿಬ್ಬಂದಿ | 36 |
| 3 | ಆಡಳಿತ ಸಿಬ್ಬಂದಿ | 28 |
| | ಒಟ್ಟು | 100 |

ಮಂಡ್ಯ ಜಿಲ್ಲೆಯಲ್ಲಿ ಪ್ರಸ್ತುತ ಈ ಕೆಳಕಂಡಂತೆ 4 ಸರ್ಕಾರಿ ಹಾಗೂ 3 ಖಾಸಗಿ ಪಾಲಿಟೆಕ್ನಿಕ್‌ಗಳಿವೆ.

| ಕ್ರಮ ಸಂಖ್ಯೆ | ಸರ್ಕಾರಿ | ಖಾಸಗಿ |
|---|---|---|
| 1 | ಸರ್ಕಾರಿ ಪಾಲಿಟೆಕ್ನಿಕ್, ಕೆ.ಆರ್.ಪೇಟೆ | ಬಿ.ಇ.ಟಿ. ಪಾಲಿಟೆಕ್ನಿಕ್, ಭಾರತಿ ನಗರ, ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ |
| 2 | ಸರ್ಕಾರಿ ಪಾಲಿಟೆಕ್ನಿಕ್, ಅರಕೆರೆ, ಶ್ರೀರಂಗಪಟ್ಟಣ | ಎಸ್.ಇ.ಟಿ. ಪಾಲಿಟೆಕ್ನಿಕ್, ಮೇಲು ಕೋಟೆ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ. |
| 3 | ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ | ಎಸ್.ಜೆ.ಬಿ.ಜಿ.ಎಸ್. ಪಾಲಿಟೆಕ್ನಿಕ್, ಎನ್‌ಹೆಚ್-48, ಬೆಳ್ಳೂರು ಕ್ರಾಸ್, ಬಿ.ಜಿ ನಗರ್, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ. |
| 4 | ಸರ್ಕಾರಿ ಪಾಲಿಟೆಕ್ನಿಕ್, ಮಳವಳ್ಳಿ (ಹೊಸ ಸಂಸ್ಥೆ) | |

ಮಂಡ್ಯ ಜಿಲ್ಲೆಯಲ್ಲಿ ಪ್ರಸ್ತುತ 4 ಸರ್ಕಾರಿ ಪಾಲಿಟೆಕ್ನಿಕ್ ಮಂಜೂರಾಗಿದ್ದು, ಅದರಲ್ಲಿ 3 ಪಾಲಿಟೆಕ್ನಿಕ್‌ಗಳು ಕಾರ್ಯನಿರ್ವಹಿಸುತ್ತಿವೆ ಹಾಗೂ ಇದರೊಂದಿಗೆ 3 ಖಾಸಗಿ ಪಾಲಿಟೆಕ್ನಿಕ್‌ಗಳು ಇವೆ. ಮಂಡ್ಯ ಜಿಲ್ಲೆಯಲ್ಲಿರುವ ಸರ್ಕಾರಿ ಹಾಗೂ ಖಾಸಗಿ ಪಾಲಿಟೆಕ್ನಿಕ್‌ನಲ್ಲಿ 2019-20 ನೇ ಸಾಲಿನಲ್ಲಿವಿದ್ಯಾರ್ಥಿಗಳ ಪ್ರವೇಶಾತಿ ವಿವರ ಇಂತಿದೆ.

| ಕ್ರಮ ಸಂಖ್ಯೆ | ಪಾಲಿಟೆಕ್ನಿಕ್ ವಿವರ | ಸದರಿ ಪಾಲಿಟೆಕ್ನಿಕ್‌ಗಳಿಂದ ಮದ್ದೂರಿಗೆ ಇರುವ ಅಂತರ | ಪ್ರವೇಶಾತಿ | ಪ್ರವೇಶ ಪಡೆದವರು (ಎಸ್‌ಎನ್‌ಕ್ಯೂ ಕೋಟಾ ಸೇರಿ) | ಶೇಕಡಾವಾರು ಪ್ರವೇಶ |
|---|---|---|---|---|---|
| | **ಸರ್ಕಾರಿ ಪಾಲಿಟೆಕ್ನಿಕ್** | | | | |
| 1 | ಸರ್ಕಾರಿ ಪಾಲಿಟೆಕ್ನಿಕ್, ಕೆ.ಆರ್.ಪೇಟೆ | 79.0 ಕಿ.ಮೀ | 300 | 300 | 100% |
| 2 | ಸರ್ಕಾರಿ ಪಾಲಿಟೆಕ್ನಿಕ್, ಅರಕೆರೆ, ಶ್ರೀರಂಗಪಟ್ಟಣ | 38.1 ಕಿ.ಮೀ | 240 | 240 | 100% |
| 3 | ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ | 49.2 ಕಿ.ಮೀ | 240 | 165 | 69% |
| 4 | ಸರ್ಕಾರಿ ಪಾಲಿಟೆಕ್ನಿಕ್, ಮಳವಳ್ಳಿ (ಮಂಜೂರಾಗಿದ್ದು, ಇನ್ನೂ ಸ್ಥಾಪನೆಯಾಗಿರುವುದಿಲ್ಲ.) | 25.0 ಕಿ.ಮೀ | | | |
| | **ಒಟ್ಟು** | | | | |
| | **ಖಾಸಗಿ ಪಾಲಿಟೆಕ್ನಿಕ್** | | | | |
| 5 | ಬಿ.ಇ.ಟಿ. ಪಾಲಿಟೆಕ್ನಿಕ್ ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ | 13.0 ಕಿ.ಮೀ | 460 | 145 | 32% |
| 6 | ಎಸ್.ಇ.ಟಿ. ಪಾಲಿಟೆಕ್ನಿಕ್, ಮೇಲು ಕೋಟೆ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ. | 55.8 ಕಿ.ಮೀ | 432 | 121 | 28% |

| 7 | ಎಸ್.ಜೆ.ಬಿ.ಜಿ.ಎಸ್. ಪಾಲಿಟೆಕ್ನಿಕ್, ಬೆಳ್ಳೂರು ಕ್ರಾಸ್, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ. | 83.2 ಕಿ.ಮೀ | 300 | 137 | 46% |
|---|---|---|---|---|---|
| | **ಒಟ್ಟು** | | **1192** | **403** | **34%** |

ಮಂಡ್ಯದ ಪ್ರದೇಶದ 49.2 ಕಿ.ಮೀ ಅಂತರದಲ್ಲಿರುವ ಸರ್ಕಾರಿ ಪಾಲಿಟೆಕ್ನಿಕ್, ನಾಗಮಂಗಲ 2019-20 ನೇ ಸಾಲಿನಲ್ಲಿ ಶೇ. 69 ರಷ್ಟು ವಿದ್ಯಾರ್ಥಿಗಳು ಪ್ರವೇಶ ಪಡೆದಿದ್ದು, ಶೇ. 31 ರಷ್ಟು ಸೀಟುಗಳು ಖಾಲಿ ಉಳಿದಿದೆ. ಇದಲ್ಲದೇ ಖಾಸಗಿ ಪಾಲಿಟೆಕ್ನಿಕ್‌ನಲ್ಲಿ ಶೇ. 72 ರಷ್ಟು ಸೀಟುಗಳು ಖಾಲಿ ಉಳಿದಿವೆ.

ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಪಾಲಿಟೆಕ್ನಿಕ್ ಕಾಲೇಜುಗಳ ಗುಣಮಟ್ಟ ಸುಧಾರಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲಾಗುತ್ತಿದೆ. ಆದ್ದರಿಂದ ಹೊಸ ಕಾಲೇಜುಗಳನ್ನು ಪ್ರಾರಂಭಿಸುವ ಕುರಿತಂತೆ ಮಂಜೂರಾತಿ ನೀಡಲಾಗುತ್ತಿಲ್ಲ.

ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 53 ಎಸ್.ಎಂ.ಎಂ. 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 19-3-2020.

11

Stard.
19/3/2020
10.55 AM

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ:- ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಮಪ್ಪ ಎಸ್. (ಹರಿಹರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 696 ಕ್ಕೆ ಉತ್ತರ ಒದಗಿಸುವ ಬಗ್ಗೆ.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಮಪ್ಪ ಎಸ್. (ಹರಿಹರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 696 ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಪದ್ಮ ವಿ.) 19/3/2020
ಸರ್ಕಾರ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಆರೋಗ್ಯ 1 & 2)

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 696 |
| ಮಾನ್ಯ ಸದಸ್ಯರ ಹೆಸರು | ಶ್ರೀ.ರಾಮಪ್ಪ.ಎಸ್.(ಹರಿಹರ) |
| ಉತ್ತರಿಸಬೇಕಾದ ದಿನಾಂಕ | 19-03-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಕೊರೋನಾ ವೈರಸ್ ಕಂಡು ಬಂದ ರೋಗಿಗಳ ಸಂಖ್ಯೆ ಎಷ್ಟು, (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ 13 ಕೊರೋನಾವೈರಸ್ ಪ್ರಕರಣಗಳು ವರದಿಯಾಗಿವೆ.<br>ಬಿ.ಬಿ.ಎಂ.ಪಿ -04<br>ಬೆಂಗಳೂರು ನಗರ -06<br>ಕಲಬುರಗಿ -03 |
| ಆ | ಕೊರೋನಾ ವೈರಸ್ ಹರಡದಂತೆ ಸರ್ಕಾರವು ಕೈಗೊಂಡ ಮುಂಜಾಗ್ರತಾ ಕ್ರಮವೇನು? (ಸಂಪೂರ್ಣ ಮಾಹಿತಿ ನೀಡುವುದು) | ಕೋರೊನಾವೈರಸ್ ಹರಡದಂತೆ ಸರ್ಕಾರವು ಕೈಗೊಂಡ ಮುಂಜಾಗ್ರತಾ ಕ್ರಮಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |

**ಆಕುಕ 53 ಎಸ್ಎಂಎಂ 2020**

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಹಾಗೂ
ಹಿಂದುಳಿದ ವರ್ಗಗಳ ಸಚಿವರು

ಅನುಬಂಧ-1

**ಕರೋನಾವೈರಸ್(ಕೋವಿಡ್-19 )ಸೋಂಕನ್ನು ನಿವಾರಿಸಲು ಸರ್ಕಾರ ಕೈಗೊಂಡ ನಿಯಂತ್ರಣ ಕ್ರಮಗಳು:-**

- ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣಗಳಲ್ಲಿ ಹಾಗೂ ಬಂದರುಗಳಲ್ಲಿ ಬರುವ ಎಲ್ಲಾ ಪ್ರಯಾಣಿಕರನ್ನು ತಪಾಸಣೆ ಮಾಡಲಾಗುತ್ತಿದೆ. ಸಂಶಯಾಸ್ಪದ ಪ್ರಕರಣಗಳನ್ನು ಪರೀಕ್ಷೆಗೆ ಒಳಪಡಿಸಿ ನಿಯಮಾನುಸಾರ 28 ದಿನಗಳವರೆಗೂ ಅನುಸರಣೆ ಮಾಡಲಾಗುತ್ತಿದೆ.
- ಬೆಂಗಳೂರು ಸೇರಿದಂತೆ, ಎಲ್ಲಾ ಜಿಲ್ಲೆಗಳಲ್ಲಿ ಸರ್ಕಾರಿ-384 ಖಾಸಗಿ-400 ಒಟ್ಟು-784 ಹಾಸಿಗೆಗಳನ್ನು ಕಾಯ್ದಿರಿಸಲಾಗಿದೆ. ಅಲ್ಲದೆ ಸರ್ಕಾರಿ-66 ಮತ್ತು ಖಾಸಗಿ-223 ಒಟ್ಟು-289 ವೆಂಟಿಲೇಟರ್‌ಗಳ ಸೌಲಭ್ಯದೊಂದಿಗೆ ಸುಸಜ್ಜಿತವಾದ Isolation ಪತ್ಯೇಕ ವಾರ್ಡಗಳನ್ನು ಕಾಯ್ದಿರಿಸಲಾಗಿದೆ.
- ಅಂತರ ರಾಷ್ಟ್ರಿಯ ವಿಮಾನ ನಿಲ್ದಾಣ ಹಾಗೂ ಬಂದರುಗಳಲ್ಲಿ ಸಂಶಯಾಸ್ಪದ ಪ್ರಯಾಣಿಕರನ್ನು 108 ಅಂಬುಲೆನ್ಸ್ ವಾಹನಗಳ ಮೂಲಕ ಮೀಸಲಿಡಲ್ಪಟ್ಟ Isolation ward ಗೆ ದಾಖಲಿಸಿ ಪರಿಕ್ಷಿಸಲಾಗುತ್ತಿದೆ.
- ರಾಜೀವ್ ಗಾಂಧಿ ಎದೆ ರೋಗಗಳ ಆಸ್ಪತ್ರೆ, ಜಯನಗರ ಸಾರ್ವಜನಿಕ ಆಸ್ಪತ್ರೆ, ಸಾಂಕ್ರಾಮಿಕ ರೋಗಗಳ ಆಸ್ಪತ್ರೆ ಹಳೇ ಮದ್ರಾಸ್ ರಸ್ತೆ, ಬೆಂಗಳೂರು ಹಾಗೂ ಖಾಸಗಿ ಆಸ್ಪತ್ರೆಗಳಲ್ಲಿ ಸುಸಜ್ಜಿತವಾದ Isolation ವಾರ್ಡ್‌ಗಳನ್ನು ತೆರೆಯಲು ಕ್ರಮವಹಿಸಲಾಗಿದೆ.
- ಗೃಹಮಟ್ಟದಲ್ಲಿ ಹಾಗೂ ಸಮುದಾಯದಲ್ಲಿ ಸಾರ್ವಜನಿಕರು ಅನುಸರಿಸಬೇಕಾದ ಎಲ್ಲಾ ಅಗತ್ಯ ಮುಂಜಾಗ್ರತಾ ಕ್ರಮಗಳನ್ನು ಆರೋಗ್ಯ ಶಿಕ್ಷಣದ ಮೂಲಕ ಹಾಗೂ ಪತ್ರಿಕಾ ಮಾಧ್ಯಮಗಳ ಮೂಲಕ ಸಾರ್ವಜನಿಕರಿಗೆ ತಿಳಿಸಲಾಗಿದೆ.
- ಈಗಾಗಲೇ ಎಲ್ಲಾ ಜಿಲ್ಲೆಗಳಲ್ಲಿ ಔಷಧಿ, N-95 Mask, PPE equipments, triple Layer Mask ಮುಂತಾದ ಪರಿಕರಗಳು ಲಭ್ಯವಿರುವಂತೆ, ಅಗತ್ಯತೆಗೆ ತಕ್ಕಂತೆ ಪೂರೈಸಲು ಕರ್ನಾಟಕ ರಾಜ್ಯ ಡ್ರಗ್ಸ್ ವೇರ್ ಹೌಸ್ ಅಂಡ್ ಲಾಜಿಸ್ಟಿಕ್ ಸೊಸೈಟಿಯಿಂದ ಕ್ರಮ ವಹಿಸಲಾಗಿದೆ.
- ಸಾರ್ವಜನಿಕರಿಗೆ ನೋವೆಲ್ ಕರೋನ ಬಗ್ಗೆ ಮಾಹಿತಿ ನೀಡಲು ಉಚಿತ 104 ಆರೋಗ್ಯ ಸಹಾಯವಾಣಿ ತೆರೆಯಲಾಗಿದ್ದು, ದಿನಾಂಕ:15-3-2020 ವರೆಗೆ **23110** ಕರೆಗಳನ್ನು ಸ್ವೀಕರಿಸಿ ಅಗತ್ಯ ಮಾರ್ಗದರ್ಶನಗಳನ್ನು ನೀಡಲಾಗಿದೆ.
- ಪೋಲೀಸ್ ಇಲಾಖೆ, ಶಿಕ್ಷಣ ಇಲಾಖೆ, ಪಶು ವೈದ್ಯ ಇಲಾಖೆ ಹಾಗೂ ಹೋಟೆಲ್ ಉದ್ದಿಮೆದಾರರು ಹಾಗು IT-BT ಕಂಪನಿಗಳಿಗೆ ಮಾರ್ಗಸೂಚಿಗಳನ್ನು (Advisory) ನೀಡಲಾಗಿದ್ದು, ಅಗತ್ಯ ಎಲ್ಲಾ ಕ್ರಮಗಳನ್ನು ಅನುಸರಿಸುವಂತೆ ಸೂಚಿಸಲಾಗಿದೆ.
- ಸಂಶಯಾಸ್ಪದ ರೋಗಿಗಳನ್ನು/ಪ್ರಯಾಣಿಕರನ್ನು ಪರೀಕ್ಷೆಗೆ ಒಳಪಡಿಸಲು ಉನ್ನತ ಮಟ್ಟದ 5 ಪ್ರಯೋಗಾಲಯಗಳನ್ನು ರಾಜ್ಯದಲ್ಲಿ ತೆರೆಯಲಾಗಿದೆ. (1) NIV Field station Bangalore (2) VRDL, BMC & RI Bengaluru (3) VRDL, HIMS Hassan (4) VRDL, SIMS Shimoga 5) VRDL, MMC & RI Mysuru . **ದಿನಾಂಕ: 15-3-2020 ಕ್ಕೆ ಒಟ್ಟು-862 ಸ್ಯಾಂಪಲ್ಸ್ ಗಳನ್ನು ಸಂಗ್ರಹಿಸಿದ್ದು, ಅದರಲ್ಲಿ 7 ಪಾಸಿಟೀವ್ಸ್ ಬಂದಿದ್ದು, 609 ನೆಗಟಿವ್ ಪಲಿತಾಂಶವಿದೆ.**
- ಪ್ರಸ್ತುತ ವಿದ್ಯಮಾನಗಳ ಕುರಿತು ಕರೋನ ವೈರಸ್ ***'ಪ್ರೆಸ್ ಬುಲೆಟಿನ್'*** ನ್ನು ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಪ್ರತಿ ದಿನ ನೀಡುತ್ತಿದ್ದಾರೆ.

**ಕರ್ನಾಟಕ ಸರ್ಕಾರ**

ಸಂಖ್ಯೆ: ಎಂಇಡಿ/ 60/MPS /2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19 .03.2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸತ್ಯನಾರಾಯಣ. ಬಿ. ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2581 ಕ್ಕೆ ಉತ್ತರ.

>><<

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಸತ್ಯನಾರಾಯಣ. ಬಿ. ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2581 ಕ್ಕೆ ಉತ್ತರವನ್ನು ಸಿದ್ಧಪಡಿಸಿ ಇದರೊಂದಿಗೆ 50/350 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,

(ಎಂ. ಜ್ಯೋತಿಪ್ರಕಾಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.

**ಕರ್ನಾಟಕ ವಿಧಾನ ಸಭೆ**

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2581 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸತ್ಯನಾರಾಯಣ.ಬಿ (ಶಿರಾ) |
| ಉತ್ತರಿಸಬೇಕಾದ ದಿನಾಂಕ | 19-03-2020 |
| ಉತ್ತರಿಸಬೇಕಾದ ಸಚಿವರು | ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರಮ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ವೈದ್ಯಕೀಯ ವಿದ್ಯಾ ಸಂಸ್ಥೆಯಗಳಲ್ಲಿ ಎಂ.ಸಿ.ಐ ವಿಧಿಸಿರುವ ಮಾನದಂಡಗಳ ಪ್ರಕಾರ ಕಟ್ಟಡಗಳು ಹಾಗೂ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲಾಗಿದೆಯೇ; | ವೈದ್ಯಕೀಯ ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸಂಸ್ಥೆಗಳಿಗೆ ಎಂ.ಸಿ.ಐ ಮಾನದಂಡಗಳ ಪ್ರಕಾರ ಅವಶ್ಯವಿರುವ ಕಟ್ಟಡಗಳು ಹಾಗೂ ಮೂಲಭೂತ ಸೌಕರ್ಯಗಳನ್ನು ಪೂರೈಸಲು ಹಂತ ಹಂತವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಸದರಿ ವೈದ್ಯಕೀಯ ವಿದ್ಯಾ ಸಂಸ್ಥೆಗಳಲ್ಲಿ 2021-22 ನೇ ಸಾಲಿನ ಒಳಗೆ ಮೂಲಭೂತ ಸೌಕರ್ಯಗಳನ್ನು ಒದಗಿಸದಿದ್ದಲ್ಲಿ ಕಾಲೇಜಿನ ಮಾನ್ಯತೆಯನ್ನು ರದ್ದು ಪಡಿಸಲಾಗುವುದೆಂದು ತಿಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಭಾರತೀಯ ವೈದ್ಯಕೀಯ ಪರಿಷತ್, ನವದೆಹಲಿ ಇವರಿಂದ 2021-22 ನೇ ಸಾಲಿಗೆ ಸಂಬಂಧಿಸಿದಂತೆ, ಮಾನ್ಯತೆಯನ್ನು ರದ್ದು ಪಡಿಸುವ ಕುರಿತು ಯಾವುದೇ ಪತ್ರ ಸ್ವೀಕೃತವಾಗಿರುವುದಿಲ್ಲ. |
| ಇ) | ಬಂದಿದ್ದಲ್ಲಿ, ರಾಜ್ಯದಲ್ಲಿ 2005-06 ರಲ್ಲಿ ವೈದ್ಯಕೀಯ ವಿದ್ಯಾ ಸಂಸ್ಥೆಗಳು ಪ್ರಾರಂಭವಾಗಿ 15 ವರ್ಷಗಳಾಗಿದ್ದರೂ ಸಹ ಭಾರತೀಯ ವೈದ್ಯಕೀಯ ಪರಿಷತ್ತು ಹಲವಾರು ಬಾರಿ ಪರಿವೀಕ್ಷಣೆ ನಡೆಸುವ ಸಂದರ್ಭದಲ್ಲಿ ಸದರಿ ವೈದ್ಯಕೀಯ ವಿದ್ಯಾ ಸಂಸ್ಥೆಗಳಿಗೆ ಎಂ.ಸಿ.ಐ ನ ನಿಯಮಗಳ ಪ್ರಕಾರ ಬೋಧಕರ ಹುದ್ದೆ ಹಾಗೂ ಬೋಧಕೇತರ ಹುದ್ದೆಗಳ ಸೃಜನೆಗೆ ಪ್ರಸ್ತಾವನೆಯನ್ನು ಪ್ರಾಂಶುಪಾಲರು ಸರ್ಕಾರದ ಗಮನಕ್ಕೆ ತಂದಿರುವುದು ನಿಜವೇ;(ಸಂಪೂರ್ಣ ಮಾಹಿತಿ ನೀಡುವುದು) | 2005-06 ನೇ ಸಾಲಿನಲ್ಲಿ ಒಟ್ಟು 6 ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳನ್ನು ಪ್ರಾರಂಭಿಸಲಾಗಿದ್ದು, ಆಯಾ ಸಂಸ್ಥೆಗಳಲ್ಲಿ ಎಂ.ಬಿ.ಬಿ.ಎಸ್/ಸ್ನಾತಕೋತ್ತರ ಕೋರ್ಸ್‌ಗಳಿಗೆ ವಿದ್ಯಾರ್ಥಿಗಳ ಪ್ರವೇಶ ಮಿತಿಗೆ ಅನುಗುಣವಾಗಿ ಎಂ.ಸಿ.ಐ ನಿಯಮಾವಳಿಗಳ ಪ್ರಕಾರ ಅವಶ್ಯವಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ಕಾಲಕಾಲಕ್ಕೆ ಮಂಜೂರು ಮಾಡಲಾಗುತ್ತಿದ್ದು, ಸದರಿ ಹುದ್ದೆಗಳನ್ನು ಸರ್ಕಾರದ ಅನುಮತಿಯೊಂದಿಗೆ ಸಂಸ್ಥೆಯ ಹಂತದಲ್ಲಿ ನೇರ ಸಂದರ್ಶನದ ಮುಖಾಂತರ ಭರ್ತಿ ಮಾಡಲಾಗುತ್ತಿದೆ. ಉಳಿದಂತೆ ಮಂಜೂರಾದ ಹುದ್ದೆಗಳ ಎದುರು ವರ್ಗಾವಣೆ, ಗುತ್ತಿಗೆ ಮತ್ತು ಹೊರ ಗುತ್ತಿಗೆ ಆಧಾರದ ಮೇಲೆ ಸಿಬ್ಬಂದಿಗಳ ಸೇವೆಯನ್ನು ಪಡೆದು ಕಾರ್ಯ ನಿರ್ವಹಿಸಲಾಗುತ್ತಿದೆ. |
| ಈ) | ಸಂಸ್ಥೆಗಳು ಪ್ರಾರಂಭವಾಗಿದ್ದರೂ ಸಹ ಭಾರತೀಯ ವೈದ್ಯಕೀಯ ವಿದ್ಯಾ ಪರಿಷತ್ ಪರಿವೀಕ್ಷಣೆಯ ಸಮಯದಲ್ಲಿ ವೈದ್ಯಕೀಯ ವಿದ್ಯಾ ಸಂಸ್ಥೆಗಳಲ್ಲಿ ಬೋಧಕ/ಬೋಧಕೇತರ ಹುದ್ದೆಗಳ ಅಗತ್ಯತೆ ಬಗ್ಗೆ ಸದರಿ<br>ವೈದ್ಯಕೀಯ ವಿದ್ಯಾ ಸಂಸ್ಥೆಗಳ ಪ್ರಾಂಶುಪಾಲರು ಸರ್ಕಾರದ ಗಮನಕ್ಕೆ ತಂದಿದ್ದರೂ ಸಹ ಪ್ರತಿಭಾವಂತ ಎಂ.ಬಿ.ಬಿ.ಎಸ್. ಹಾಗೂ ಸ್ನಾತಕೋತ್ತರ ವಿದ್ಯಾರ್ಥಿಗಳ ದೃಷ್ಟಿಯಿಂದ ಸರ್ಕಾರ ಬೋಧಕ/ಬೋಧಕೇತರ ಸಿಬ್ಬಂದಿಗಳ ಹುದ್ದೆಗಳನ್ನು ಭರ್ತಿ ಮಾಡಲು ಈವರೆವಿಗೂ ಯಾವುದೇ ಕ್ರಮ ಕೈಗೊಳ್ಳದಿರಲು ಕಾರಣಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಭಾರತೀಯ ವೈದ್ಯಕೀಯ ಪರಿಷತ್ ನಿಯಮಾವಳಿಗಳ ಪ್ರಕಾರ ವೈದ್ಯಕೀಯ ವಿದ್ಯಾರ್ಥಿಗಳ ಪ್ರವೇಶಾತಿಗೆ ಅನುಗುಣವಾಗಿ ಅವಶ್ಯವಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳ ಸೃಜನೆ/ಮಂಜೂರಾತಿಗಾಗಿ ಸಂಸ್ಥೆಗಳಿಂದ ಕಾಲಕಾಲಕ್ಕೆ ಪ್ರಸ್ತಾವನೆಗಳು ಸ್ವೀಕೃತವಾಗುತ್ತಿದ್ದು, ಸದರಿ ಪ್ರಸ್ತಾವನೆಗಳನ್ನು ಪರಿಶೀಲಿಸಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಹುದ್ದೆಗಳನ್ನು ಮಂಜೂರು ಮಾಡಲು ಸರ್ಕಾರದ ಹಂತದಲ್ಲಿ ಕ್ರಮವಹಿಸಲಾಗುತ್ತಿದೆ. |

ಎಂಇಡಿ 50 ಎಂಪಿಎಸ್ 2020

(ಡಾ. ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಎಂಇಡಿ/179/mmc/2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19.03.2020

07 Staff 19/3/20 @ 10:35AM

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ರಘುಮೂರ್ತಿ ಟಿ. ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2240 ಕ್ಕೆ ಉತ್ತರ.

>><<

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ರಘುಮೂರ್ತಿ ಟಿ. ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2240 ಕ್ಕೆ ಉತ್ತರವನ್ನು ಸಿದ್ಧಪಡಿಸಿ ಇದರೊಂದಿಗೆ 50/350 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,

(ಎಂ. ಜ್ಯೋತಿಪ್ರಕಾಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2240
2. ಸದಸ್ಯರ ಹೆಸರು : ಶ್ರೀ ರಘುಮೂರ್ತಿ ಟಿ.
3. ಉತ್ತರಿಸಬೇಕಾದ ದಿನಾಂಕ : 19.03.2020
4. ಉತ್ತರಿಸಬೇಕಾದ ಸಚಿವರು : ವೈದ್ಯಕೀಯ ಶಿಕ್ಷಣ ಸಚಿವರು

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಚಿತ್ರದುರ್ಗದಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜು ಪ್ರಾರಂಭಿಸಲು ಸರ್ಕಾರವು ಆದೇಶ ನೀಡಿ 4 ವರ್ಷವಾದರೂ ಈವರೆವಿಗೆ ಕಾಲೇಜು ಪ್ರಾರಂಭವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | 2013-14 ನೇ ಸಾಲಿನ ಆಯವ್ಯಯ ಘೋಷಣೆಯಲ್ಲಿ ಚಿತ್ರದುರ್ಗದಲ್ಲಿ ಹೊಸ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ಪ್ರಸ್ತಾಪಿಸಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ:ಆಕುಕ 172 ಎಂಪಿಎಸ್ 2014, ದಿನಾಂಕ 12.06.2014 ರಲ್ಲಿ ಸದರಿ ವೈದ್ಯಕೀಯ ಕಾಲೇಜಿನ ಸ್ಥಾಪನೆಗೆ ಮಂಜೂರಾತಿ ನೀಡಲಾಗಿದೆ. |
| ಆ) | ಬಂದಿದ್ದಲ್ಲಿ, ಅತೀ ಹಿಂದುಳಿದಿರುವ ಜಿಲ್ಲೆಯ ಬಡ / ಕಾರ್ಮಿಕರ, ಸಾರ್ವಜನಿಕರ, ಮಕ್ಕಳ, ಹಿರಿಯರ ಆರೋಗ್ಯ ಸುಧಾರಣೆ ಮಾಡಲು ಸರ್ಕಾರಿ (Medical College) ವೈದ್ಯಕೀಯ ಕಾಲೇಜು ಪ್ರಾರಂಭ ಮಾಡಲು ಸರ್ಕಾರವು ಯಾವಾಗ ಆಡಳಿತಾತ್ಮಕ ಅನುಮೋದನೆ ನೀಡಿ ಹಣ ಬಿಡುಗಡೆ ಮಾಡುವುದು (ಸಂಪೂರ್ಣ ವಿವರ ನೀಡುವುದು) ? | ಆದರೆ, ಆರ್ಥಿಕ ಮಿತವ್ಯಯದ ಕಾರಣದಿಂದಾಗಿ ಆಯವ್ಯಯ ಘೋಷಣೆಯಂತೆ ಸದರಿ ಆರ್ಥಿಕ ವರ್ಷದಲ್ಲಿ ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲಾಗಿರುವುದಿಲ್ಲ.<br><br>2019-20 ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯನ್ವಯ ಸರ್ಕಾರಿ / ಖಾಸಗಿ ವೈದ್ಯಕೀಯ ಕಾಲೇಜುಗಳಿರದ ಜಿಲ್ಲೆಗಳಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲು ಅವಕಾಶವಿದ್ದು, ಈ ಯೋಜನೆ ಅಡಿ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಪಾಲು ಶೇ.60:40 ರ ಅನುಪಾತದಲ್ಲಿ ಒಟ್ಟು ರೂ.325.00 ಕೋಟಿಗಳ ಅನುದಾನ ಲಭ್ಯವಾಗಲಿದೆ.<br><br>ಈ ಯೋಜನೆ ಅಡಿ 2019-20 ನೇ ಸಾಲಿನಲ್ಲಿ ಹಾವೇರಿ, ಯಾದಗಿರಿ, ಚಿಕ್ಕಮಗಳೂರು ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲು ಕ್ರಮವಹಿಸಲಾಗಿದೆ. |

| | | |
|---|---|---|
| | | ತುಮಕೂರು, ದಾವಣಗೆರೆ, ಚಿತ್ರದುರ್ಗ, ಬಾಗಲಕೋಟೆ, ಕೋಲಾರ, ದಕ್ಷಿಣ ಕನ್ನಡ, ಉಡುಪಿ, ಬೆಂಗಳೂರು ಗ್ರಾಮಾಂತರ ಮತ್ತು ವಿಜಯಪುರ ಇಲ್ಲಿ ಈಗಾಗಲೇ ಖಾಸಗಿ ವೈದ್ಯಕೀಯ ಕಾಲೇಜುಗಳು ಕಾರ್ಯ ನಿರ್ವಹಿಸುತ್ತಿರುವುದರಿಂದ, ಈ ಜಿಲ್ಲೆಗಳಲ್ಲಿ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸುವುದು ಕೇಂದ್ರ ಸರ್ಕಾರದ ಯೋಜನೆಯ ವ್ಯಾಪ್ತಿಗೆ ಒಳಪಡುವುದಿಲ್ಲ.<br>ರಾಜ್ಯ ಸರ್ಕಾರದ ವತಿಯಿಂದ ಹೊಸ ಸರ್ಕಾರಿ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲು ಅಂದಾಜು ರೂ.525.00 ಕೋಟಿಗಳ ಅನಾವರ್ತಕ ವೆಚ್ಚ ಹಾಗೂ ರೂ.42.75 ಕೋಟಿಗಳ ಆವರ್ತಕ ವೆಚ್ಚದ ಅವಶ್ಯಕತೆ ಇರುತ್ತದೆ.<br>ಪ್ರಸ್ತುತ ಅನುದಾನದ ಕೊರತೆಯ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರದ ವತಿಯಿಂದಲೇ ಹೊಸ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸುವ ಯಾವುದೇ ಪ್ರಸ್ತಾವನೆಗಳು ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |

ಸಂಖ್ಯೆ: ಎಂಇಡಿ 179 ಎಂಎಂಸಿ 2020

(ಡಾ:ಕೆ.ಸುಧಾಕರ್)

ವೈದ್ಯಕೀಯ ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 01 ಇಜಿಒವಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು,ದಿನಾಂಕ:18.03.2020

01
Starred
19/03/2020

ಇಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಉನ್ನತ ಶಿಕ್ಷಣ ಇಲಾಖೆ
ಬಹುಮಹಡಿಗಳ ಕಟ್ಟಡ, ಬೆಂಗಳೂರು

**ರವರಿಗೆ,**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ/ಪರಿಷತ್,
ವಿಧಾನಸೌಧ, ಬೆಂಗಳೂರು

**ಮಾನ್ಯರೇ,**

ವಿಷಯ: **ಕರ್ನಾಟಕ ವಿಧಾನ ಸಭೆ ಸದಸ್ಯರಾದ ಮಾನ್ಯ ಶ್ರೀ.ಆಚಾರ್ ಹಾಲಪ್ಪ ಬಸಪ್ಪ ರವರ ಕೇಳಿದ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 2566ಕ್ಕೆ ಉತ್ತರ ಸಲ್ಲಿಸುವ ಬಗ್ಗೆ**

*****

ಮಾನ್ಯ ವಿಧಾನ ~~ಪರಿಷತ್~~ ಸಭೆ ಸದಸ್ಯರಾದ ಮಾನ್ಯ **ಶ್ರೀ.ಆಚಾರ್ ಹಾಲಪ್ಪ ಬಸಪ್ಪ** ರವರ **ಕೇಳಿದ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 2566ಕ್ಕೆ ಉತ್ತರ** 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿ ಕೊಡಲಾಗಿದೆ.

ತಮ್ಮ ವಿಶ್ವಾಸಿ,

(ಎನ್.ಆರ್.ಎರೆಕುಪ್ಪಿ)
ಆಂತರಿಕ ಆರ್ಥಿಕ ಸಲಹೆಗಾರರು ಹಾಗೂರ
ಸರ್ಕಾರದ ಉಪ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2566

ಸದಸ್ಯರ ಹೆಸರು : ಶ್ರೀ. ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)

ಉತ್ತರಿಸಬೇಕಾದ ದಿನಾಂಕ : 19-03-2020

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯ ಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಪದವಿ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ ಯೋಜನೆಯನ್ನು ಯಾವಾಗಿನಿಂದ ಜಾರಿಗೆ ತರಲಾಯಿತು(ವಿವರ ನೀಡುವುದು) | 2019-20ನೇ ಸಾಲಿನಲ್ಲಿ ಜಾರಿಗೊಳಿಸಲಾಗಿದೆ. |
| (ಆ) | ಸದರಿ ಯೋಜನೆಯಲ್ಲಿ ಯಾವ ವಿಭಾಗದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ ಮಾಡಲಾಗುತ್ತದೆ. | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ 2019-20ರಲ್ಲಿ ಪ್ರವೇಶಾತಿ ಪಡೆದು ಪ್ರಥಮ ವರ್ಷದಲ್ಲಿ ವ್ಯಾಸಂಗ ಮಾಡುತ್ತಿರುವ ಹಾಗು ಕೌಟುಂಬಿಕ ವಾರ್ಷಿಕ ಆದಾಯ ರೂ. 2.5 ಲಕ್ಷಗಳಿಗಿಂತ ಕಡಿಮೆ ಇರುವ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್‌ಗಳನ್ನು ವಿತರಣೆ ಮಾಡಲು ಕ್ರಮವಹಿಸಲಾಗಿದೆ. |
| (ಇ) | ಈ ಯೋಜನೆಯಲ್ಲಿ ತಾರತಮ್ಯವಾಗುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | 2019-20ನೇ ಸಾಲಿನಲ್ಲಿ ಪ್ರವೇಶಾತಿ ಪಡೆದು ಪ್ರಥಮ ವರ್ಷದಲ್ಲಿ ವ್ಯಾಸಂಗ ಮಾಡುತ್ತಿರುವ ಹಾಗು ಕೌಟುಂಬಿಕ ವಾರ್ಷಿಕ ಆದಾಯ ರೂ. 2.5 ಲಕ್ಷಗಳಿಗಿಂತ ಕಡಿಮೆ ಇರುವ ಎಲ್ಲಾ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್‌ಗಳನ್ನು ವಿತರಣೆ ಮಾಡಲು ಕ್ರಮವಹಿಸಲಾಗಿದೆ.ಈ ಯೋಜನೆಯಲ್ಲಿ ಯಾವುದೇ ತಾರತಮ್ಯವಾಗುತ್ತಿಲ್ಲ; |
| (ಈ)<br>(ಉ) | ಬಂದಿದ್ದಲ್ಲಿ, ಪದವಿಯ ಎಲ್ಲಾ ವಿಭಾಗದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ ಮಾಡಲು ಸರ್ಕಾರಕ್ಕೆ ಇರುವ ತೊಂದರೆಯೇನು:<br>ಈ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು:(ವಿವರ ನೀಡುವುದು) | ಉದ್ಭವಿಸುವುದಿಲ್ಲ. |

Ed01egov2020

(ಡಾ.ಸಿ.ಎನ್.ಅಶ್ವಥ್ ನಾರಾಯಣ)

ಮಾನ್ಯ ಉಪ ಮುಖ್ಯ ಮಂತ್ರಿಗಳು

ಉನ್ನತ ಶಿಕ್ಷಣ,ಮಾಹಿತಿ ತಂತ್ರಜ್ಞಾನ,ಜೈವಿಕ ತಂತ್ರಜ್ಞಾನ,ವಿಜ್ಞಾನ ಮತ್ತು ತಂತ್ರಜ್ಞಾನ,ಕೌಶಲ್ಯಾಭಿವೃದ್ಧಿ,ಉದ್ಯಮ ಶೀಲತೆ ಹಾಗೂ ಜೀವನೋಪಾಯ ಇಲಾಖೆ

2

<u>ಕರ್ನಾಟಕ ಸರ್ಕಾರ</u>

ಸಂಖ್ಯೆ: ಅಪಜೀ 65 ಎಫ್‌ಡಬ್ಲ್ಯೂಎಲ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 18-03-2020.

Stored
19/3/2020

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ (ಬಂಗಾರಪೇಟೆ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1569ಕ್ಕೆ ಉತ್ತರಿಸುವ ಬಗ್ಗೆ.

*****

ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ (ಬಂಗಾರಪೇಟೆ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1569ಕ್ಕೆ ಸಂಬಂಧಿಸಿದಂತೆ ಉತ್ತರದ 350 ಕನ್ನಡ ಭಾಷೆಯ ಮತ್ತು ಆಂಗ್ಲ ಭಾಷೆಯ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

**(ಗಾಯತ್ರಿ. ಎಲ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 2530 |
| ಸದಸ್ಯರ ಹೆಸರು: | ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) |
| ಉತ್ತರಿಸುವ ದಿನಾಂಕ: | 19.03.2020 |
| ಉತ್ತರಿಸುವ ಸಚಿವರು: | ಮಾನ್ಯ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ಸರ್ಕಾರವು ರಾಜ್ಯದ ಯಾವ ಯಾವ ಜಿಲ್ಲೆಗಳಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್ ಗಳನ್ನು ಸ್ಥಾಪಿಸಿದೆ; (ಮಾಹಿತಿ ಒದಗಿಸುವುದು) | ಸರ್ಕಾರದ ವತಿಯಿಂದ ರಾಜ್ಯದ ಧಾರವಾಡ ಜಿಲ್ಲೆಯ ಹುಬ್ಬಳ್ಳಿಯಲ್ಲಿ ಹಾಗೂ ಸರ್ಕಾರದ ಅಧೀನದಲ್ಲಿರುವ ಸಾರ್ವಜನಿಕ ನಿಗಮವಾದ ಕಿಯೋನಿಕ್ಸ್ ಸಂಸ್ಥೆಯ ಮುಖಾಂತರ ಕಲಬುರ್ಗಿ ಹಾಗೂ ಶಿವಮೊಗ್ಗದಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳನ್ನು ಸ್ಥಾಪಿಸಲಾಗಿರುತ್ತದೆ. |
| ಆ) ಸರ್ಕಾರದಿಂದ ಸ್ಥಾಪಿಸಲಾದ ಮಾಹಿತಿ ತಂತ್ರಜ್ಞಾನ ಪಾರ್ಕ್ ಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳಿಗೆ ನೀಡಲಾಗುತ್ತಿರುವ ಸೌಲಭ್ಯಗಳೇನು; | ಸರ್ಕಾರದ ಹಾಗೂ ಕಿಯೋನಿಕ್ಸ್ ಮುಖಾಂತರ ಸ್ಥಾಪಿಸಲಾದ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳಲ್ಲಿ ರಿಯಾಯಿತಿ ದರದಲ್ಲಿ ಸ್ಥಳಾವಕಾಶ ಹಾಗೂ ಮೂಲಸೌಕರ್ಯಗಳಂತಹ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿದೆ. |
| ಇ) ರಾಜ್ಯದ ಹಿಂದುಳಿದ ಪ್ರದೇಶಗಳಲ್ಲಿ ಸ್ಥಾಪಿಸಲಾಗಿರುವ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳು ಎಷ್ಟು ಹಾಗೂ ಸದರಿ ಕೇಂದ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳಿಗೆ ಸರ್ಕಾರ ವಿಶೇಷ ಸೌಲಭ್ಯಗಳನ್ನೇನಾದರೂ ಒದಗಿಸುತ್ತಿದೆಯೇ; | ರಾಜ್ಯದ ಹಿಂದುಳಿದ ಪ್ರದೇಶಗಳಲ್ಲಿ ಒಂದಾದ ಕಲಬುರಗಿಯಲ್ಲಿ ಕಿಯೋನಿಕ್ಸ್ ವತಿಯಿಂದ ಒಂದು ಮಾಹಿತಿ ತಂತ್ರಜ್ಞಾನ ಪಾರ್ಕ್ ಅನ್ನು ಸ್ಥಾಪಿಸಲಾಗಿರುತ್ತದೆ. ಸದರಿ ಪಾರ್ಕ್‌ನಲ್ಲಿ ರಿಯಾಯಿತಿ ದರದಲ್ಲಿ ಸ್ಥಳಾವಕಾಶ ಹಾಗೂ ಇತರೆ ಮೂಲಸೌಕರ್ಯಗಳನ್ನು ಒದಗಿಸಲಾಗಿರುತ್ತದೆ. |
| ಈ) ರಾಜ್ಯದಲ್ಲಿ ಎಷ್ಟು ಖಾಸಗಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳು ಅಸ್ತಿತ್ವದಲ್ಲಿವೆ ಹಾಗೂ ಅದನ್ನು ಸ್ಥಾಪಿಸಲು ಸರ್ಕಾರ ಯಾವ ರೀತಿಯ ರಿಯಾಯಿತಿಯನ್ನು ಒದಗಿಸುತ್ತಿದೆ? | ರಾಜ್ಯದಲ್ಲಿ ವಿಶ್ವೇಶ್ವರಯ್ಯ ಟ್ರೇಡ್ ಪ್ರೋಮೋಷನ್ ಸೆಂಟರ್‌ನ ಮಾಹಿತಿಯನ್ವಯ 26 ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳು ಅಸ್ತಿತ್ವದಲ್ಲಿವೆ. ಸದರಿ ಐಟಿ ಪಾರ್ಕ್‌ಗಳ ಸ್ಥಾಪನೆಗಾಗಿ ವಿದ್ಯುನ್ಮಾನ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಇಲಾಖೆಯಿಂದ ಯಾವುದೇ ರೀತಿಯ ರಿಯಾಯಿತಿಯನ್ನು ಒದಗಿಸಿರುವುದಿಲ್ಲ.. |

ಸಂಖ್ಯೆ: ಐಟಿಬಿಟಿ 23 ಎಲ್‌ಸಿಎಂ 2020

(ಡಾ|| ಅಶ್ವಥ್ ನಾರಾಯಣ ಸಿ.ಎನ್)

ಉಪಮುಖ್ಯಮಂತ್ರಿಗಳು ಹಾಗೂ ವಿದ್ಯುನ್ಮಾನ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ

ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು

**ಕರ್ನಾಟಕ ಸರ್ಕಾರ**

112

ಸಂಖ್ಯೆ: ಆಕುಕ 45 ಎಸ್‌ಬಿವಿ 2020.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:19.03.2020.

19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ,

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:-** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ನಾಗೇಂದ್ರ ಎಲ್ (ಚಾಮರಾಜ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ:1686 ಕ್ಕೆ ಉತ್ತರ ಕಳುಹಿಸುವ ಬಗ್ಗೆ.

*****

ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ನಾಗೇಂದ್ರ ಎಲ್ (ಚಾಮರಾಜ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ:1686 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

19/3/2020
**(ಪದ್ಮ ವಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1 ಮತ್ತು 2)

ಕರ್ನಾಟಕ ವಿಧಾನಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1686 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ನಾಗೇಂದ್ರ ಎಲ್ (ಚಾಮರಾಜ) |
| ಉತ್ತರಿಸಬೇಕಾದ ದಿನಾಂಕ | 19.03.2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಚಾಮರಾಜ ವಿಧಾನಸಭಾ ಕ್ಷೇತ್ರದಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳೆಷ್ಟು; (ವಿವರ ನೀಡುವುದು) | ಮೈಸೂರು ನಗರದ ಚಾಮರಾಜ ವಿಧಾನಸಭಾ ವ್ಯಾಪ್ತಿಯಲ್ಲಿ ಐದು ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ.<br>1) ಪ್ರಾಥಮಿಕ ಆರೋಗ್ಯ ಕೇಂದ್ರ, ಕುಂಬಾರ ಕೊಪ್ಪಲು.<br>2) ಎನ್ ಪಿ ಸಿ ಆಸ್ಪತ್ರೆ, ಮೈಸೂರು.<br>3) ಪ್ರಾಥಮಿಕ ಆರೋಗ್ಯ ಕೇಂದ್ರ, ವಿ.ವಿ.ಪುರಂ.<br>4) ಪ್ರಾಥಮಿಕ ಆರೋಗ್ಯ ಕೇಂದ್ರ, ತೊಣಚಿ ಕೊಪ್ಪಲು ಹಾಗೂ<br>5) ಪ್ರಾಥಮಿಕ ಆರೋಗ್ಯ ಕೇಂದ್ರ, ಸರಸ್ವತಿ ಪುರಂ. |
| ಆ | ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳೆಷ್ಟು; ಹುದ್ದೆವಾರು ವಿವರ ಒದಗಿಸುವುದು; ಇದರಲ್ಲಿ ಖಾಲಿ ಇರುವ ಹುದ್ದೆಗಳೆಷ್ಟು; (ವಿವರ ನೀಡುವುದು) | ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಹುದ್ದೆವಾರು ವಿವರ ಹಾಗೂ ಇದರಲ್ಲಿ ಖಾಲಿ ಇರುವ ಹುದ್ದೆಗಳ ವಿವರಗಳು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಇ | ಖಾಲಿ ಹುದ್ದೆಗಳನ್ನು ತುಂಬಲು ಕೈಗೊಂಡಿರುವ ಕ್ರಮಗಳಾವುವು (ವಿವರ ಒದಗಿಸುವುದು) | ಖಾಲಿ ಹುದ್ದೆಗಳನ್ನು ತುಂಬಲು ಕೈಗೊಂಡಿರುವ ಕ್ರಮಗಳ ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| ಈ | ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ರೋಗಿಗಳಿಗೆ ಯಾವ ಯಾವ ಸವಲತ್ತುಗಳು ದೊರೆಯುತ್ತವೆ? (ವಿವರ ಒದಗಿಸುವುದು) | ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಸಾಮಾನ್ಯ ರೋಗಗಳ ಚಿಕಿತ್ಸೆ, ಹೆರಿಗೆ ಸೌಲಭ್ಯ, ಎ.ಬಿ-ಎ.ಆರ್.ಕೆ ವತಿಯಿಂದ ಮಾರಕ ರೋಗಗಳಿಂದ ಬಳಲುತ್ತಿರುವ ರೋಗಿಗಳನ್ನು ಗುರುತಿಸಿ ಹೆಚ್ಚಿನ ಚಿಕಿತ್ಸೆಗಾಗಿ ಉನ್ನತ ಮಟ್ಟದ ಆಸ್ಪತ್ರೆಗಳಿಗೆ ರೆಫರ್ ಮಾಡುವುದು ಇತ್ಯಾದಿ ಸೌಲಭ್ಯಗಳು. |

**ಆಕುಕ 45 ಎಸ್‌ಬಿವಿ 2020**

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಸಂ: 1686ಕ್ಕೆ ಅನುಬಂಧ-1

| ಕ್ರ ಸ ಂ. | ಪ್ರಾ.ಆ.ಕೇಂದ್ರದ ಹೆಸರು | ಹುದ್ದೆ ವಿವರ | ಹುದ್ದೆ | | |
|---|---|---|---|---|---|
| | | | ಮಂ | ಕಾ.ಲಿ | ಖಾಲಿ |
| 1 | ಪ್ರಾ.ಆ.ಕೇಂದ್ರ,ಕುಂಭಾರ ಕೊಪ್ಪಲು | ವೈದ್ಯಾಧಿಕಾರಿ | 1 | 1 | 0 |
| | | ಫಾರ್ಮಾಸಿಸ್ಟ್ | 1 | 1 | 0 |
| | | ಕಿ.ಮ.ಆ.ಸಹಾಯಕಿ | 1 | 1 | 0 |
| | | ಗ್ರೂಪ್ ಡಿ | 3 | 3 | 0 |
| | | | | | |
| 2 | ಪ್ರಾ.ಆ.ಕೇಂದ್ರ, ಸರಸ್ವತಿಪುರ | ವೈದ್ಯಾಧಿಕಾರಿ | 1 | 1 | 0 |
| | | ಫಾರ್ಮಾಸಿಸ್ಟ್ | 1 | 1 | 0 |
| | | ಕಿ.ಮ.ಆ.ಸಹಾಯಕಿ | 1 | 1 | 0 |
| | | ಗ್ರೂಪ್ ಡಿ | 1 | 1 | 0 |
| | | | | | |
| 3 | ಪ್ರಾ.ಆ.ಕೇಂದ್ರ, ವಿ.ವಿ.ಪುರಂ | ವೈದ್ಯಾಧಿಕಾರಿ | 2 | 2 | 0 |
| | | ಫಾರ್ಮಾಸಿಸ್ಟ್ | 1 | 1 | 0 |
| | | ಕಿ.ಪ್ರ.ಶಾಲಾ ತಂತ್ರಜ್ಞ | 1 | 1 | 0 |
| | | ಸ್ಟಾಫ್ ನರ್ಸ್ | 5 | 5 | 0 |
| | | ಗ್ರೂಪ್ ಡಿ | 6 | 0 | 6 |
| | | | | | |
| 4 | ಪ್ರಾ.ಆ.ಕೇಂದ್ರ, ತೊಣಚಿ ಕೊಪ್ಪಲು | ವೈದ್ಯಾಧಿಕಾರಿ | 1 | 1 | 0 |
| | | ಕಿ.ಮ.ಆ.ಸಹಾಯಕಿ | 2 | 2 | 0 |
| | | | | | |
| 5 | ಎನ್.ಪಿ.ಸಿ.ಆಸ್ಪತ್ರೆ ಮೈಸೂರು. | ವೈದ್ಯಾಧಿಕಾರಿ | 2 | 2 | 0 |
| | | ಫಾರ್ಮಾಸಿಸ್ಟ್ | 1 | 1 | 0 |
| | | ಕಿ.ಪ್ರ.ಶಾಲಾ ತಂತ್ರಜ್ಞ | 1 | 1 | 0 |
| | | ಸ್ಟಾಫ್ ನರ್ಸ್ | 5 | 5 | 0 |
| | | ಕಿ.ಮ.ಆ.ಸಹಾಯಕಿ | 2 | 2 | 0 |
| | | ಗ್ರೂಪ್ ಡಿ | 6 | 1 | 5 |

## ಚುಕ್ಕೆ ಗುರುತಿಲ್ಲದ ಪ್ರಸಂ:1686ಕ್ಕೆ ಅನುಬಂಧ-2

ತಜ್ಞ ವೈದ್ಯರನ್ನು "On Call Basis" ಮೇಲೆ ತೆಗೆದುಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ:ಆಕುಕ 178 ಹೆಚ್‌ಎಸ್‌ಹೆಚ್ 2011 ದಿನಾಂಕ: 20-05-2016 ರಲ್ಲಿ ಆಯಾ ಜಿಲ್ಲಾ ಆರೋಗ್ಯ & ಕುಟುಂಬ ಕಲ್ಯಾಣಾಧಿಕಾರಿಗಳು ಜಿಲ್ಲಾಧಿಕಾರಿಗಳ ಸಹಮತಿ ಪಡೆದು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಆಕುಕ 297 ಹೆಚ್‌ಎಸ್‌ಹೆಚ್ 2015, ದಿನಾಂಕ:22-04-2016 ಹಾಗೂ ಆಕುಕ 359 ಹೆಚ್‌ಎಸ್‌ಹೆಚ್ 2016, ದಿನಾಂಕ:01-08-2016ರಲ್ಲಿ ಅನುಮತಿ ನೀಡಲಾಗಿದೆ. ಎಂ.ಬಿ.ಬಿ.ಎಸ್ ಪದವಿ ಹೊಂದಿದ ವೈದ್ಯ ಅಭ್ಯರ್ಥಿಗಳು ಲಭ್ಯವಿಲ್ಲದೆ ಇದ್ದ ಪಕ್ಷದಲ್ಲಿ ಸದರಿ ಹುದ್ದೆಯ ಎದುರು ಗುತ್ತಿಗೆ ಆಯುಷ್ ವೈದ್ಯರನ್ನು ಆಯಾ ಜಿಲ್ಲಾ ಆರೋಗ್ಯ & ಕುಟುಂಬ ಕಲ್ಯಾಣಾಧಿಕಾರಿಗಳು ಜಿಲ್ಲಾಧಿಕಾರಿಗಳ ಸಹಮತಿ ಪಡೆದು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರವು ದಿನಾಂಕ:06.02.2020ರ ಕರ್ನಾಟಕ ರಾಜ್ಯ ಪತ್ರದಲ್ಲಿ ಕರಡು ನಿಯಮಗಳನ್ನು ಹೊರಡಿಸಿದೆ.

ವಿಶೇಷ ನೇಮಕಾತಿ ಸಮಿತಿಯಿಂದ ದಿನಾಂಕ:09.09.2019 ರಲ್ಲಿ 977 ಶುಶ್ರೂಷಕರ ಹುದ್ದೆಗಳಿಗೆ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿದ್ದು, ಕೌನ್ಸಿಲಿಂಗ್ ಮೂಲಕ ಸ್ಥಳ ನೇಮಕಾತಿ ಮಾಡಿ ಈಗಾಗಲೇ ನೇಮಕಾತಿ ಆದೇಶಗಳನ್ನು ಜಾರಿ ಮಾಡಲಾಗಿರುತ್ತದೆ.

ವಿಶೇಷ ನೇಮಕಾತಿ ಸಮಿತಿಯ ಅಧಿಸೂಚನೆ ಸಂಖ್ಯೆ ಎಸ್‌ಆರ್‌ಸಿ/21/2017-18 ದಿನಾಂಕ 20.06.2017 ರನ್ವಯ ಶುಶ್ರೂಷಕರು (ಡಿಪ್ಲಮೋ)-889 ಹುದ್ದೆಗಳಿಗೆ ದಿನಾಂಕ:27.02.2020 ರಂದು ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗಿದ್ದು, ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಆಕ್ಷೇಪಣೆಗಳನ್ನು ಪರಿಶೀಲಿಸಿದ ನಂತರ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿ ಸದರಿ ಹುದ್ದೆಗಳನ್ನು ನಿಯಮಾನುಸಾರ ಭರ್ತಿಮಾಡಲಾಗುವುದು.

ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ 293 ವಿವಿಧ ವೃಂದದ ಅರೆ-ವೈದ್ಯಕೀಯ ಹುದ್ದೆಗಳನ್ನು ಭರ್ತಿಮಾಡಲು ಕ್ರಮ ಕೈಗೊಳ್ಳಲಾಗುತ್ತಿದ್ದು, ವಿಶೇಷ ನೇಮಕಾತಿ ನಿಯಮಗಳನ್ನು ಜಾರಿ ಮಾಡಿದ ನಂತರ ಅಧಿಸೂಚನೆ ಹೊರಡಿಸಿ ನೇಮಕಾತಿ ಪ್ರಕ್ರಿಯೆಯನ್ನು ಚಾಲನೆಗೊಳಿಸಲಾಗುವುದು.

ಉಳಿಕೆ ಮೂಲ ವೃಂದದಲ್ಲಿ ಖಾಲಿ ಇರುವ ಫಾರ್ಮಸಿಸ್ಟ್-400, ಕ್ಷ-ಕಿರಣ ತಂತ್ರಜ್ಞರು-08 ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರ-150 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಇನ್ನುಳಿದಂತೆ ಹೊರಗುತ್ತಿಗೆ ಆಧಾರದ ಮೇಲೆ ಫಾರ್ಮಸಿಸ್ಟ್-400 ಮತ್ತು ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರು-150 ಹುದ್ದೆಗಳನ್ನು ಭರ್ತಿಮಾಡಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಿಯಮಾನುಸಾರ ಟೆಂಡರ್ ಕರೆದು ಹೊರಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡುವಂತೆ ಕ್ರಮ ಕೈಗೊಳ್ಳಲು ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಗೆ ಸೂಚಿಸಲಾಗಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಉಳಿಕೆ ಮೂಲ ವೃಂದದಲ್ಲಿ ಖಾಲಿ ಇರುವ ವಿವಿಧ ವೃಂದದ 4981 ಅರೆ-ವೈದ್ಯಕೀಯ ಹುದ್ದೆಗಳನ್ನು ಹಾಗೂ ಫಾರ್ಮಸಿಸ್ಟ್, ಕ್ಷ-ಕಿರಣ ತಂತ್ರಜ್ಞ ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳನ್ನು ಭರ್ತಿಮಾಡಲು ಕ್ರಮ ಕೈಗೊಳ್ಳಲಾಗುತ್ತಿದ್ದು, ಇನ್ನುಳಿದ ಅರೆ-ವೈದ್ಯಕೀಯ ಹುದ್ದೆಗಳಿಗೆ ವಿಶೇಷ ನೇಮಕಾತಿ ನಿಯಮಗಳನ್ನು ಜಾರಿ ಮಾಡಿದ ನಂತರ ನೇಮಕಾತಿ ಪ್ರಕ್ರಿಯೆಗೆ ಚಾಲನೆ ನೀಡಲಾಗುವುದು ಹಾಗೂ ಪದೋನ್ನತಿ ಹುದ್ದೆಗಳನ್ನು ಪದೋನ್ನತಿ ಮೂಲಕ ತುಂಬಲು ಕ್ರಮ ತೆಗೆದುಕೊಳ್ಳಲಾಗಿದೆ.

ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 56 ಎಸ್.ಎಂ.ಎಂ. 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 19-3-2020.

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ:- ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಸಾಲ ಜಯರಾಮ್ (ತುರುವೇಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2403ಕ್ಕೆ ಉತ್ತರ ಒದಗಿಸುವ ಬಗ್ಗೆ.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಸಾಲ ಜಯರಾಮ್ (ತುರುವೇಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2403ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಪದ್ಮ ವಿ.)
ಸರ್ಕಾರ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಆರೋಗ್ಯ 1 & 2)

ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2403 |
| ಮಾನ್ಯ ಸದಸ್ಯರ ಹೆಸರು | ಶ್ರೀ.ಮಸಾಲ ಜಯರಾಮ್ (ತುರುವೇಕೆರೆ) |
| ಉತ್ತರಿಸಬೇಕಾದ ದಿನಾಂಕ | 19-03-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ತುಮಕೂರು ಜಿಲ್ಲೆಯ ತುರುವೇಕೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಿವಿಧ ಬಗೆಯ ಸರ್ಕಾರಿ ಆಸ್ಪತ್ರೆಗಳು ಯಾವುವು; ಇವುಗಳು ಯಾವ ಯಾವ ಸೌಲಭ್ಯಗಳನ್ನು ಹೊಂದಿವೆ ಹಾಗೂ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; ಸಿಬ್ಬಂದಿ ಕೊರತೆ ನೀಗಿಸಲು ಸರ್ಕಾರ- ಕೈಗೊಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ತುಮಕೂರು ಜಿಲ್ಲೆಯ ತುರುವೇಕೆರೆ ವಿಧಾನಸಭಾ ಕ್ಷೇತ್ರದಲ್ಲಿ, 1 ತಾಲ್ಲೂಕು ಆಸ್ಪತ್ರೆ ಹಾಗೂ 12 ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ. ಈ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ: 139<br><br>ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ಇತರೆ ಪೂರಕ ಸಿಬ್ಬಂದಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ತಾಲ್ಲೂಕು ಆಸ್ಪತ್ರೆಯಲ್ಲಿ ಕೀಲು ಮತ್ತು ಮೂಳೆ ತಜ್ಞರು ಮಕ್ಕಳ ತಜ್ಞರು, ಫಿಜಿಷಿಯನ್, ಶಸ್ತ್ರಚಿಕಿತ್ಸಕರು, ಪ್ರಸೂತಿ ತಜ್ಞರು, ಚರ್ಮ ರೋಗ ತಜ್ಞರು, ದಂತ ವೈದ್ಯರು, ಕಿವಿ ಮೂಗು ಮತ್ತು ಗಂಟಲು ತಜ್ಞರುಗಳಿದ್ದು ತಜ್ಞತೆಗೆ ಅನುಗುಣವಾಗಿ ಚಿಕಿತ್ಸಾ ಸೌಲಭ್ಯ ಒದಗಿಸಲಾಗುತ್ತಿದೆ, ಉಳಿದಂತೆ, ಡಯಾಲಿಸಿಸ್ ಕೇಂದ್ರ, ಹೊರ ರೋಗಿಗಳ ಚಿಕಿತ್ಸಾ ವಿಭಾಗ, ಒಳರೋಗಿಳ ಚಿಕಿತ್ಸಾ ವಿಭಾಗ, ಪ್ರಸೂತಿ ಆರೈಕೆ, ಪ್ರಯೋಗ ಶಾಲೆ, ಔಷಧಿ ವಿತರಣಾ ಘಟಕಗಳ ಸೌಲಭ್ಯಗಳನ್ನು ಹೊಂದಿದೆ.<br><br>ಸಿಬ್ಬಂದಿ ಕೊರತೆ ನೀಗಿಸಲು ತೆಗೆದುಕೊಂಡ ಕ್ರಮದ ಬಗ್ಗೆ **ಅನುಬಂಧದಲ್ಲಿ** ವಿವರ ನೀಡಲಾಗಿದೆ. |
| ಆ | ತುರುವೇಕೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 24/7 ಯೋಜನೆಯಲ್ಲಿರುವ ಆಸ್ಪತ್ರೆಗಳು ಯಾವುವು,ಈ ಆಸ್ಪತ್ರೆಗಳಲ್ಲಿ ಇರಬೇಕಾದ ಮೂಲಭೂತ ಸೌಕರ್ಯ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ಬಂದಿದ್ದಲ್ಲಿ ಸರ್ಕಾರದ ತೆಗೆದುಕೊಂಡ ಕ್ರಮಗಳೇನು; | ತುರುವೇಕೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮಾಯಸಂದ್ರ ಮತ್ತು ದಂಡಿನಶಿವರ ಪ್ರಾಥಮಿಕ ಆರೋಗ್ಯ ಕೇಂದ್ರಗಳು 24/7 ಕಾರ್ಯ ನಿರ್ವಹಿಸುತ್ತಿವೆ.<br><br>ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆ |
| ಇ | ತುರುವೇಕೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಶಿಥಿಲಾವಸ್ಥೆಯಲ್ಲಿರುವ ಆಸ್ಪತ್ರೆಗಳು ಯಾವುವು; ಅವುಗಳ ನಿರ್ಮಾಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಮಾಚೇನಹಳ್ಳಿ ಪ್ರಾಥಮಿಕ ಆರೋಗ್ಯ ಕೇಂದ್ರ ಆಸ್ಪತ್ರೆಯು ಶಿಥಿಲಾವಸ್ಥೆಯಲ್ಲಿದ್ದು, ಅನುದಾನ ಲಭ್ಯತೆಯ ಅನುಸಾರವಾಗಿ ಮುಂಬರುವ ಸಾಲಿನಲ್ಲಿ ನೂತನ ಆರೋಗ್ಯ ಕೇಂದ್ರ ನಿರ್ಮಿಸಲು ಕ್ರಮ ವಹಿಸಲಾಗುವುದು. |

ಆಕುಕ 56 ಎಸ್‌ಎಂಎಂ2020

(ಬಿ.ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

## ಪ್ರಶ್ನೆ ಸಂಖ್ಯೆ 2403 ರ ಅನುಬಂಧ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ತಜ್ಞ ವೈದ್ಯರು ಮತ್ತು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ ವಿವಿಧ ಅರೆ-ವೈದ್ಯಕೀಯ ಹುದ್ದೆಗಳನ್ನು ಭರ್ತಿಮಾಡಲು ಕೈಗೊಂಡಿರುವ ಕ್ರಮಗಳ ಬಗ್ಗೆ ವಿವರ.**

ತಜ್ಞ ವೈದ್ಯರನ್ನು "On Call Basis" ಮೇಲೆ ತೆಗೆದುಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ ಆಕುಕ 178 ಹೆಚ್‌ಎಸ್‌ಹೆಚ್ 2011 ದಿನಾಂಕ: 20-05-2016 ರಲ್ಲಿ ಆಯಾ ಜಿಲ್ಲಾ ಆರೋಗ್ಯ & ಕುಟುಂಬ ಕಲ್ಯಾಣಾಧಿಕಾರಿಗಳು ಜಿಲ್ಲಾಧಿಕಾರಿಗಳ ಸಹಮತಿ ಪಡೆದು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಆಕುಕ 297 ಹೆಚ್‌ಎಸ್‌ಹೆಚ್ 2015, ದಿನಾಂಕ:22-04-2016 ಹಾಗೂ ಆಕುಕ 359 ಹೆಚ್‌ಎಸ್‌ಹೆಚ್ 2016, ದಿನಾಂಕ:01-08-2016ರಲ್ಲಿ ಅನುಮತಿ ನೀಡಲಾಗಿದೆ. ಎಂಬಿಬಿಎಸ್ ಪದವಿ ಹೊಂದಿದ ವೈದ್ಯ ಅಭ್ಯರ್ಥಿಗಳು ಲಭ್ಯವಿಲ್ಲದೆ ಇದ್ದ ಪಕ್ಷದಲ್ಲಿ ಸದರಿ ಹುದ್ದೆಯ ಎದುರು ಗುತ್ತಿಗೆ ಆಯುಷ್ ವೈದ್ಯರನ್ನು ಆಯಾ ಜಿಲ್ಲಾ ಆರೋಗ್ಯ & ಕುಟುಂಬ ಕಲ್ಯಾಣಾಧಿಕಾರಿಗಳು ಜಿಲ್ಲಾಧಿಕಾರಿಗಳ ಸಹಮತಿ ಪಡೆದು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರವು ದಿನಾಂಕ:06.02.2020ರ ಕರ್ನಾಟಕ ರಾಜ್ಯ ಪತ್ರದಲ್ಲಿ ಕರಡು ನಿಯಮಗಳನ್ನು ಹೊರಡಿಸಿದೆ.

ವಿಶೇಷ ನೇಮಕಾತಿ ಸಮಿತಿಯಿಂದ ದಿನಾಂಕ 09.09.2019 ರಲ್ಲಿ 977 ಶುಶ್ರೂಷಕರ ಹುದ್ದೆಗಳಿಗೆ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿದ್ದು, ಕೌನ್ಸಿಲಿಂಗ್ ಮೂಲಕ ಸ್ಥಳ ನೇಮಕಾತಿ ಮಾಡಿ ಈಗಾಗಲೇ ನೇಮಕಾತಿ ಆದೇಶಗಳನ್ನು ಜಾರಿ ಮಾಡಲಾಗಿರುತ್ತದೆ.

ವಿಶೇಷ ನೇಮಕಾತಿ ಸಮಿತಿಯ ಅಧಿಸೂಚನೆ ಸಂಖ್ಯೆ ಎಸ್‌ಆರ್‌ಸಿ/21/2017-18 ದಿನಾಂಕ 20.06.2017 ರನ್ವಯ ಶುಶ್ರೂಷಕರು (ಡಿಪ್ಲಮೋ)-889 ಹುದ್ದೆಗಳಿಗೆ ದಿನಾಂಕ 27.02.2020 ರಂದು ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗಿದ್ದು, ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಆಕ್ಷೇಪಣೆಗಳನ್ನು ಪರಿಶೀಲಿಸಿದ ನಂತರ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿ ಸದರಿ ಹುದ್ದೆಗಳನ್ನು ನಿಯಮಾನುಸಾರ ಭರ್ತಿಮಾಡಲಾಗುವುದು.

ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ 293 ವಿವಿಧ ವೃಂದದ ಅರೆ-ವೈದ್ಯಕೀಯ ಹುದ್ದೆಗಳನ್ನು ಭರ್ತಿಮಾಡಲು ಸರ್ಕಾರದಿಂದ ಅನುಮತಿ ದೊರೆತಿದ್ದು, ಸದರಿ ಹುದ್ದೆಗಳಿಗೆ ಸಂಬಂಧಿಸಿದಂತೆ ಕರಡು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಲಾಗಿದ್ದು, ವಿಶೇಷ ನೇಮಕಾತಿ ನಿಯಮಗಳನ್ನು ಜಾರಿ ಮಾಡಿದ ನಂತರ ಅಧಿಸೂಚನೆ ಹೊರಡಿಸಿ ನೇಮಕಾತಿ ಪ್ರಕ್ರಿಯೆಯನ್ನು ಚಾಲನೆಗೊಳಿಸಲಾಗುವುದು.

ಉಳಿಕೆ ಮೂಲ ವೃಂದದಲ್ಲಿ ಖಾಲಿ ಇರುವ ಫಾರ್ಮಸಿಸ್ಟ್-400, ಕ್ಷ-ಕಿರಣ ತಂತ್ರಜ್ಞರು-08 ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರ-150 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿಮಾಡಲು ಸರ್ಕಾರದಿಂದ ಅನುಮತಿ ನೀಡಿದ್ದು, ದಿನಾಂಕ 13.08.2019 ರಲ್ಲಿ ಕರಡು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಲಾಗಿದ್ದು, ಸರ್ಕಾರದಿಂದ ವಿಶೇಷ ನೇಮಕಾತಿ ನಿಯಮಗಳು ಜಾರಿ ಮಾಡಿದ ನಂತರ ಅಧಿಸೂಚನೆಯನ್ನು ಹೊರಡಿಸಿ ಮೇಲ್ಕಂಡ ಹುದ್ದೆಗಳ ಭರ್ತಿಗೆ ಕ್ರಮವಹಿಸಲಾಗುವುದು. ಇನ್ನುಳಿದಂತೆ ಹೊರಗುತ್ತಿಗೆ ಆಧಾರದ ಮೇಲೆ ಫಾರ್ಮಸಿಸ್ಟ್-400 ಮತ್ತು ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರು-150 ಹುದ್ದೆಗಳನ್ನು ಭರ್ತಿಮಾಡಲು ಸಹ ಅನುಮತಿ ನೀಡಿದ್ದು, ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಿಯಮಾನುಸಾರ ಟೆಂಡರ್ ಕರೆದು ಹೊರಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡುವಂತೆ ಕ್ರಮ ಕೈಗೊಳ್ಳಲು ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಗೆ ಸೂಚಿಸಲಾಗಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಉಳಿಕೆ ಮೂಲ ವೃಂದದಲ್ಲಿ ಖಾಲಿ ಇರುವ ವಿವಿಧ ವೃಂದದ 4981 ಅರೆ-ವೈದ್ಯಕೀಯ ಹುದ್ದೆಗಳ ಪೈಕಿ ಪದೋನ್ನತಿ ಹುದ್ದೆಗಳನ್ನು ಪದೋನ್ನತಿ ಮೂಲಕ ತುಂಬಲು ಕ್ರಮ ತೆಗೆದುಕೊಳ್ಳಲಾಗಿದೆ. ಉಳಿದ ಹುದ್ದೆಗಳನ್ನು ಸರ್ಕಾರದಿಂದ ವಿಶೇಷ ನೇಮಕಾತಿ ನಿಯಮಗಳನ್ನು ಜಾರಿ ಮಾಡಿದ ನಂತರ ನೇಮಕಾತಿ ಪ್ರಕ್ರಿಯೆಗೆ ಚಾಲನೆ ನೀಡಲಾಗುವುದು.

ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 30 ಎಫ್‌ಎಲ್‌ಎಲ್ 2020

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು ದಿನಾಂಕ: 18.03.2020

57 u/s 19/3/2020

ಇವರಿಂದ

**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,**
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು–560001.

ಇವರಿಗೆ,

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1799ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1799/2020 ದಿನಾಂಕ: 05.03.2020

*****

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1799ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

(ಎಸ್. ಶ್ರೀನಿವಾಸ) 18/03/20
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಅರಣ್ಯ–ಸಿ)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1799 |
| ಸದಸ್ಯರ ಹೆಸರು | : | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) |
| ಉತ್ತರಿಸುವ ದಿನಾಂಕ | : | 19/03/2020 |
| ಉತ್ತರಿಸುವ ಸಚಿವರು | : | ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಮೀಸಲು ಮತ್ತು ವನ್ಯಜೀವಿ ಅರಣ್ಯ ಪ್ರದೇಶಗಳ ವ್ಯಾಪ್ತಿಯಲ್ಲಿರುವ ಜನ ವಸತಿ ಪ್ರದೇಶಗಳಿಗೆ ಹೋಗುವ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಅರಣ್ಯ ಇಲಾಖೆಯವರು ಅಡ್ಡಿಪಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ<br>ರಾಜ್ಯದ ಕಾಯ್ದಿಟ್ಟ ಅರಣ್ಯ ಪ್ರದೇಶದ ಪಕ್ಕದಲ್ಲಿ ಮತ್ತು ಅರಣ್ಯ ಎನ್‌ಕ್ಲೋಸರ್ (Forest enclosure) ರೂಪದಲ್ಲಿ ಇರುವ ಹಾಗೂ ವನ್ಯಜೀವಿ ಅರಣ್ಯ ಪ್ರದೇಶಗಳ ವ್ಯಾಪ್ತಿಯಲ್ಲಿರುವ ಜನ ವಸತಿ ಪ್ರದೇಶಗಳಿಗೆ ಹಾದು ಹೋಗುವ ದಾರಿಗಳನ್ನು ಆಯಾ ಅರಣ್ಯ ಪ್ರದೇಶದ ಅಧಿಸೂಚನೆಗಳಲ್ಲಿಯೇ ಸಾಮಾನ್ಯವಾಗಿ ನಿರ್ದಿಷ್ಟ ಅಗಲದ ಕಾಲುದಾರಿ (Right of way) ಅಥವಾ ಬಂಡಿ ದಾರಿಗಳನ್ನು (Cart track) ಅವಕಾಶ ಕಲ್ಪಿಸಲಾಗಿರುತ್ತದೆ. ಅಂತಹ ದಾರಿಗಳನ್ನು ಸಂಬಂಧಿಸಿದವರು ಸಾಮಾನ್ಯ ಬಳಕೆಗಾಗಿ ಉಪಯೋಗಿಸಬಹುದಾಗಿರುತ್ತದೆ.<br>ಮೇಲಿನ ಅವಕಾಶವನ್ನು ಹೊರತುಪಡಿಸಿ ಅರಣ್ಯ ಪ್ರದೇಶದಲ್ಲಿ ಕಾಲುದಾರಿ / ಬಂಡಿದಾರಿ ಅಗಲವನ್ನು ವಿಸ್ತರಿಸಲು ಅಥವಾ ಬೇರೆ ಯಾವುದೇ ಬದಲಿ ಅರಣ್ಯೇತರ ಪ್ರದೇಶಗಳಲ್ಲಿ ದಾರಿಯು ಲಭ್ಯವಿಲ್ಲದಿದ್ದಲ್ಲಿ ಅರಣ್ಯ ಪ್ರದೇಶದಲ್ಲಿ ಹೊಸ ರಸ್ತೆಗಳನ್ನು ನಿರ್ಮಿಸಲು 1980ರ ಅರಣ್ಯ (ಸಂರಕ್ಷಣೆ) ಕಾಯ್ದೆಯಡಿಯಲ್ಲಿ ಕೇಂದ್ರ ಸರ್ಕಾರದ ಪೂರ್ವಾನುಮತಿ ಪಡೆಯುವುದು ಅಗತ್ಯವಿರುತ್ತದೆ.<br>ಮೇಲಿನಂತೆ ಸಕ್ಷಮ ಪ್ರಾಧಿಕಾರವಾದ ಕೇಂದ್ರ ಸರ್ಕಾರದ ಅನುಮೋದನೆ ಪಡೆದ ಪ್ರಕರಣಗಳಲ್ಲಿ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಅರಣ್ಯ ಇಲಾಖೆಯು ಅಡ್ಡಿಪಡಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಆ) | ಬಂದಲ್ಲಿ, ಈ ಬಗ್ಗೆ ಸರ್ಕಾರದ ನಿಲುವೇನು; | |
| ಇ) | ಅನಾದಿಕಾಲದಿಂದ ವಾಸ್ತವ್ಯವಿರುವವರ ಉಪಯೋಗಕ್ಕಾಗಿ ಇದ್ದ ಅಭಿವೃದ್ಧಿಪಡಿಸಲು ಬಿಡದೆ ಜನರನ್ನು ಮೂಲಭೂತ ಸೌಕರ್ಯಗಳಿಂದ ವಂಚಿಸುವುದು ಸರಿಯೇ? | |

ಸಂಖ್ಯೆ: ಅಪಜೀ 30 ಎಫ್‌ಎಲ್‌ಎಲ್ 2020

18/03/20

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಕಾಇ 108 ಎಲ್‌ಇಟಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 19.03.2020.

181
9/4
19/3/20

ಇವರಿಂದ:
ಸರ್ಕಾರದ ಕಾರ್ಯದರ್ಶಿಗಳು,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಮಿಕ ಇಲಾಖೆ),
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ವಿಧಾನ ಸಭೆಯ ಸದಸ್ಯರಾದ ಶ್ರೀ ಸಿದ್ದು ಸವದಿ (ತೇರದಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2504ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸಿದ್ದು ಸವದಿ (ತೇರದಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2504ಕ್ಕೆ ಉತ್ತರಿಸುವ ಕುರಿತು ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಡಿ. ಧನಂಜಯ) 18.3.2020
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2504 |
| 2. | ಸದಸ್ಯರ ಹೆಸರು | ಶ್ರೀ ಸಿದ್ದು ಸವದಿ (ತೇರದಾಳ) |
| 3. | ಉತ್ತರಿಸಬೇಕಾದ ದಿನಾಂಕ | 19/03/2020 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಯಾವ ಯಾವ ಕಾರ್ಮಿಕರನ್ನು ಅಧಿಕೃತ ಕಾರ್ಮಿಕರೆಂದು ಇಲಾಖೆಯಿಂದ ಗುರುತಿಸಲಾಗಿದೆ. | ಕಾರ್ಮಿಕ ಇಲಾಖೆಯು ವಿವಿಧ ಕಾರ್ಮಿಕ ಕಾಯ್ದೆಗಳನ್ನು ಅನುಷ್ಠಾನಗೊಳಿಸುತ್ತಿದ್ದು, ಕಾರ್ಮಿಕ ಕಾಯ್ದೆಗಳಡಿ ವಿವಿಧ ಕಲಂಗಳಲ್ಲಿ "ಕಾರ್ಮಿಕ" ಎಂಬ ಪದವನ್ನು ವ್ಯಾಖ್ಯಾನಿಸಲಾಗಿರುತ್ತದೆ. ಸಂಸ್ಥೆಗಳು, ಕೈಗಾರಿಕೆಗಳಿಗೆ ಅನ್ವಯವಾಗುವ ಕಾರ್ಮಿಕ ಕಾಯ್ದೆಗಳಡಿ "ಕಾರ್ಮಿಕ" ಎಂಬ ಪದದ ವ್ಯಾಖ್ಯಾನದಡಿ ಬರುವವರನ್ನು ಕಾರ್ಮಿಕರೆಂದು ಪರಿಗಣಿಸಲಾಗುತ್ತದೆ.<br>ಮುಂದುವರೆದು, ಕಾರ್ಮಿಕ ಇಲಾಖೆಯಡಿ ಕೆಳಕಂಡ ಮಂಡಳಿಗಳು ಹಾಗೂ ಸೊಸೈಟಿಗಳು ಕಾರ್ಯನಿರ್ವಹಿಸುತ್ತಿದ್ದು, ಸದರಿ ಮಂಡಳಿ / ಸೊಸೈಟಿಗಳಡಿ ಕಾರ್ಮಿಕರನ್ನು ಗುರುತಿಸುವ ಕುರಿತಂತೆ ಮಾಹಿತಿಯನ್ನು ಈ ಕೆಳಕಂಡಂತೆ ಒದಗಿಸಿದೆ.<br><br>1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:<br><br>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಅಸಂಘಟಿತ ವಲಯಕ್ಕೆ ಸೇರಿದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುವ ಕಾರ್ಮಿಕರನ್ನು ಗುರುತಿಸಿ ಮಂಡಳಿಯ ಫಲಾನುಭವಿಗಳಾಗಿ ನೋಂದಣಿ ಮಾಡಲಾಗುತ್ತಿದೆ. ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳ ವಿವರವನ್ನು ಅನುಬಂಧ-01 ರಲ್ಲಿ ಲಗತ್ತಿಸಿದ್ದು, ಈ ಕಾಮಗಾರಿಗಳಲ್ಲಿ ವರ್ಷದಲ್ಲಿ ಕನಿಷ್ಠ 90 ದಿನಗಳು ಕೆಲಸ ನಿರ್ವಹಿಸಿರುವ ಕಾರ್ಮಿಕರನ್ನು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರೆಂದು ಗುರುತಿಸಲಾಗುತ್ತದೆ.<br><br>2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:<br>ಅಸಂಘಟಿತ ವಲಯದ ಕಾರ್ಮಿಕರಿಗೆ ಸಂಬಂಧಿಸಿದಂತೆ, ಕರ್ನಾಟಕ ರಾಜ್ಯ ಸರ್ಕಾರವು 43 ವರ್ಗಗಳ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಗುರುತಿಸಿದೆ (ವಿವರಗಳನ್ನು ಅನುಬಂಧ-2ರಲ್ಲಿ ಒದಗಿಸಿದೆ). |

| | | |
|---|---|---|
| | | ಮುಂದುವರೆದು, ಕಾರ್ಖಾನೆಗಳ ಕಾಯ್ದೆಯಡಿ ನೋಂದಾಯಿತ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರನ್ನೂ ಸಹ ಅಧಿಕೃತ ಕಾರ್ಮಿಕರೆಂದು ಇಲಾಖೆಯು ಗುರುತಿಸುತ್ತದೆ. |
| ಈ) | ರಾಜ್ಯದಲ್ಲಿರುವ ಒಟ್ಟು ಕಾರ್ಮಿಕರ ಸಂಖ್ಯೆ ಎಷ್ಟು (ಕ್ಷೇತ್ರವಾರು ಮಾಹಿತಿ ನೀಡುವುದು). | ರಾಜ್ಯದಲ್ಲಿ ಕಾರ್ಮಿಕರ ಸಂಖ್ಯೆ ಸಂಬಂಧಿಸಿದಂತೆ ನಿರ್ದಿಷ್ಟವಾಗಿ ಯಾವುದೇ ಸಮೀಕ್ಷೆಯನ್ನು ಇಲಾಖೆಯಿಂದ ನಡೆಸಿರುವುದಿಲ್ಲ. ಆದರೆ, ಇಲಾಖೆಯ ಅಧೀನದಲ್ಲಿ ಬರುವ ವಿವಿಧ ಮಂಡಳಿಗಳು ಜಾರಿಗೊಳಿಸುತ್ತಿರುವ ಯೋಜನೆಗಳಲ್ಲಿ ನೋಂದಾಯಿಸಿರುವ ಕಾರ್ಮಿಕರ ವಿವರ ಈ ಕೆಳಕಂಡಂತಿರುತ್ತದೆ.<br><br>1. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:<br>ಈ ಮಂಡಳಿಯಲ್ಲಿ 2007 ರಿಂದ ಇಲ್ಲಿಯವರೆಗೆ ರಾಜ್ಯದಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ 22,04,213 ಕಾರ್ಮಿಕರನ್ನು ಮಂಡಳಿಯ ಫಲಾನುಭವಿಗಳಾಗಿ ನೋಂದಾಯಿಸಲಾಗಿರುತ್ತದೆ. ವಿವರವನ್ನು ಅನುಬಂಧ-03 ರಲ್ಲಿ ಒದಗಿಸಿದೆ.<br><br>2. ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:<br>ಈ ಮಂಡಳಿಯಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಸಂಖ್ಯೆಗೆ ಸಂಬಂಧಿಸಿದಂತೆ, ಈವರೆಗೆ ಯಾವುದೇ ನಿರ್ದಿಷ್ಟವಾಗಿ ಸಮೀಕ್ಷೆ/ ಗಣತಿಗಳನ್ನು ರಾಜ್ಯದ ಕಾರ್ಮಿಕ ಇಲಾಖೆ ನಡೆಸಿರುವುದಿಲ್ಲ. ಆದರೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ನಡೆಸಲಾದ 2011ರ ಸಾಮಾಜಿಕ ಮತ್ತು ಆರ್ಥಿಕ ಜಾತಿ ಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ 1.32 ಕೋಟಿ ಅಸಂಘಟಿತ ಕಾರ್ಮಿಕರಿರುವುದಾಗಿ ಅಂದಾಜಿಸಲಾಗಿದೆ.<br><br>3. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:<br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ವ್ಯಾಪ್ತಿಗೆ 39.01 ಲಕ್ಷ ಸಂಘಟಿತ ಕಾರ್ಮಿಕರು ಒಳಪಡುತ್ತಾರೆ. ಜಿಲ್ಲಾವಾರು ವಿವರಗಳನ್ನು ಅನುಬಂಧ-4 ರಲ್ಲಿ ಒದಗಿಸಿದೆ.<br><br>4. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ.<br>ಕಾರ್ಖಾನೆಗಳ ಕಾಯ್ದೆಯಡಿ ಒಟ್ಟು 16,57,713 ಕಾರ್ಮಿಕರು ಇರುತ್ತಾರೆ. ಕ್ಷೇತ್ರವಾರು ಮಾಹಿತಿ ಲಭ್ಯವಿರುವುದಿಲ್ಲ. ಜಿಲ್ಲಾವಾರು ಕಾರ್ಮಿಕರ ಸಂಖ್ಯೆಯನ್ನು ಅನುಬಂಧ-1ಎ ರಲ್ಲಿ ಒದಗಿಸಲಾಗಿದೆ. |

| | | |
|---|---|---|
| ಇ) | ಕೂಲಿ ಕೆಲಸ ಮಾಡುವ ನೇಕಾರರನ್ನು ಕಾರ್ಮಿಕರೆಂದು ಪರಿಗಣಿಸಲಾಗುವುದೇ ಇಲ್ಲವಾದಲ್ಲಿ ಕಾರಣಗಳೇನು. | ಕರ್ನಾಟಕ ಸರ್ಕಾರವು ನೇಕಾರ ಕಾರ್ಮಿಕರಿಗೆ ಸಂಬಂಧಿಸಿದಂತೆ, "ಹ್ಯಾಂಡ್‌ಲೂಮ್ ಮತ್ತು ಪವರ್‌ಲೂಮ್ (ಹತ್ತಿ) ಉದ್ದಿಮೆ" ಯನ್ನು ಕನಿಷ್ಠ ವೇತನ ಕಾಯ್ದೆಯಡಿ ಅನುಸೂಚಿತ ಉದ್ದಿಮೆಯೆಂದು ಗುರುತಿಸಲಾಗಿದೆ. ಸದರಿ ಉದ್ದಿಮೆಗೆ ಕನಿಷ್ಠ ವೇತನವನ್ನು ನಿಗದಿ ಪಡಿಸಿ ಅಧಿಸೂಚನೆ ಹೊರಡಿಸಲಾಗಿರುತ್ತದೆ (ಅಧಿಸೂಚನೆ ಸಂಖ್ಯೆ: KAE 22 LWA 2019 ದಿನಾಂಕ: 20/02/2019 ರನ್ವಯ) ಕನಿಷ್ಠ ವೇತನ ದರಗಳನ್ನು ಕಾಲಕಾಲಕ್ಕೆ ಪರಿಷ್ಕರಣೆ ಮಾಡಲಾಗುತ್ತದೆ.<br><br>ಸರ್ಕಾರದ ಆದೇಶ ಸಂಖ್ಯೆ: ಕಾಇ 7 ಎಲ್‌ಇಟಿ 2012, ದಿನಾಂಕ: 12-06-2012 ರಲ್ಲಿ ಕರ್ನಾಟಕ ರಾಜ್ಯ ಸರ್ಕಾರವು ಮನೆಗಳಲ್ಲಿ ನೇಯ್ಗೆ ಕೆಲಸ ಮಾಡುವ ನೇಕಾರರನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ಗುರುತಿಸಿರುವ ಅಸಂಘಟಿತ ಕಾರ್ಮಿಕ ಪಟ್ಟಿಯಲ್ಲಿ ಸೇರ್ಪಡೆಗೊಳಿಸಲಾಗಿದೆ.<br>ಕಾರ್ಖಾನೆಗಳ ಕಾಯ್ದೆಯಡಿ ನೋಂದಾಯಿತ ಕಾರ್ಖಾನೆಗಳಲ್ಲಿ ಕೂಲಿ ಕೆಲಸ ಮಾಡುವ ನೇಕಾರರನ್ನು ಕಾರ್ಮಿಕರೆಂದು ಪರಿಗಣಿಸಲಾಗುತ್ತದೆ. |
| ಈ) | ಕಾರ್ಮಿಕರಿಗೆ ನೀಡುವ ಕನಿಷ್ಠ ವೇತನವೆಷ್ಟು? ನೇಯ್ಗೆ ಮಾಡುವ ಕೂಲಿ ಕಾರ್ಮಿಕರ ಸಂಖ್ಯೆ ಎಷ್ಟು. | ಕರ್ನಾಟಕ ಸರ್ಕಾರವು ನೇಕಾರ ಕಾರ್ಮಿಕರಿಗೆ ಸಂಬಂಧಿಸಿದಂತೆ, "ಹ್ಯಾಂಡ್‌ಲೂಮ್ ಮತ್ತು ಪವರ್‌ಲೂಮ್ (ಹತ್ತಿ) ಉದ್ದಿಮೆ" ಯನ್ನು ಅನುಸೂಚಿತ ಉದ್ದಿಮೆಯೆಂದು ಗುರುತಿಸಿ, ಸದರಿ ಉದ್ದಿಮೆಗೆ ಕನಿಷ್ಠ ವೇತನ ದರಗಳನ್ನು ಪರಿಷ್ಕರಿಸಿ ಅಧಿಸೂಚನೆ ಹೊರಡಿಸಲಾಗಿರುತ್ತದೆ. ಅಧಿಸೂಚನೆ ಸಂಖ್ಯೆ: KAE 22 LWA 2019 ದಿನಾಂಕ: 20/02/2019 ರ ಪ್ರತಿಯನ್ನು ಅನುಬಂಧ-೫ರಲ್ಲಿ ಲಗತ್ತಿಸಿದೆ. |
| ಉ) | ಕಾರ್ಮಿಕರಿಗೆ ದೊರಕುವ ಸೌಲಭ್ಯಗಳಾವುವು? (ವಿವರ ನೀಡುವುದು). | ಕಾರ್ಮಿಕ ಇಲಾಖೆಯಲ್ಲಿ ನೇಕಾರರಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಯಾವುದೇ ಯೋಜನೆಗಳನ್ನು ಪ್ರಸ್ತುತ ಜಾರಿಯಲ್ಲಿರುವುದಿಲ್ಲ. ಆದರೆ, ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳು ಜಾರಿಗೊಳಿಸುತ್ತಿರುವ ಯೋಜನೆಗಳ ವಿವರ ಈ ಕೆಳಗಿನಂತಿರುತ್ತದೆ.<br><br>I. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:<br>ಈ ಮಂಡಳಿಯ ವತಿಯಿಂದ ಅಸಂಘಟಿತ ವಲಯಕ್ಕೆ ಸೇರಿದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗೆ 19 ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡಲಾಗುತ್ತಿದ್ದು, ವಿವರವನ್ನು ಅನುಬಂಧ-೬ ರಲ್ಲಿ ಲಗತ್ತಿಸಿದೆ. |

ರಾಜ್ಯಾದ್ಯಂತ 660 ಚಾಲಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.

- ಪ್ರಥಮ ಪ್ರಶಸ್ತಿಯು ರೂ. 15,000/-ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ. 10,000/- ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ. 8,000/-ಗಳ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ ಹಾಗೂ ಪ್ರಶಂಸಾಪತ್ರವನ್ನು ಹೊಂದಿರುತ್ತದೆ.

(ಉ) ಅಪಘಾತ ಜೀವ ರಕ್ಷಕ:- ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸಜ್ಜುಗೊಳಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆ ಪ್ರಥಮ ಚಿಕಿತ್ಸೆ ತರಬೇತಿಯನ್ನು ನೀಡಲಾಗುತ್ತಿದೆ.

(2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-

(ಅ) "ಸ್ಮಾರ್ಟ್ ಕಾರ್ಡ್":- ಯೋಜನೆಯಡಿ 11 ಅಸಂಘಟಿತ ವಲಯಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.

(ಆ) ಶ್ರಮ ಸಮ್ಮಾನ ಪ್ರಶಸ್ತಿ

- ಪ್ರಸಕ್ತ ಸಾಲಿನಲ್ಲಿ, ಸರ್ಕಾರದ ಆದೇಶದಂತೆ, 2020ರ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, 11 ಅಸಂಘಟಿತ ವಲಯಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ" ವಲಯಗಳಲ್ಲಿ ವಿಶೇಷ ಸಾಧನೆ ಮಾಡಿದ ಕಾರ್ಮಿಕರನ್ನು ಗುರುತಿಸಿ, ಪ್ರತಿಯೊಂದು ಜಿಲ್ಲೆಗೆ ಪ್ರತಿಯೊಂದು ವಲಯಕ್ಕೆ ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು 3630 ಕಾರ್ಮಿಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.
- ಪ್ರಥಮ ಪ್ರಶಸ್ತಿಯು ರೂ. 15,000ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ. 10,000ದ ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ. 8,000ದ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ ಹಾಗೂ ಪ್ರಶಂಸಾ ಪತ್ರವನ್ನು ಹೊಂದಿರುತ್ತದೆ.

(ಇ) ಕಾರ್ಮಿಕ ಸೇವಾ ಕೇಂದ್ರ :-

- ಕಾರ್ಮಿಕ ಸೇವಾ ಕೇಂದ್ರ:- ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿ ಹಾಗೂ ಸೊಸೈಟಿಗಳು ಜಾರಿಗೊಳಿಸುತ್ತಿರುವ ಯೋಜನೆಯಡಿ ಸೌಲಭ್ಯಗಳನ್ನು ಫಲಾನುಭವಿಗಳಿಗೆ ತಲುಪಿಸಲು ಸಹಾಯವಾಗುವಂತೆ ರಾಜ್ಯದ ಎಲ್ಲಾ 175 ತಾಲ್ಲೂಕುಗಳಲ್ಲಿ ಪ್ರತಿ ತಾಲ್ಲೂಕಿಗೆ ಒಂದರಂತೆ ಕಾರ್ಮಿಕ ಸೇವಾ ಕೇಂದ್ರಗಳನ್ನು ಹಾಗೂ ಬೆಂಗಳೂರು ವ್ಯಾಪ್ತಿಯಲ್ಲಿ 6 ಕಾರ್ಮಿಕ ಸೇವಾ ಕೇಂದ್ರಗಳು ಸೇರಿ ಒಟ್ಟು 181 "ಕಾರ್ಮಿಕ ಸೇವಾ ಕೇಂದ್ರ"ಗಳನ್ನು ತೆರೆಯಲು ನಿರ್ಣಯಿಸಲಾಗಿದೆ. ಈಗಾಗಲೇ 159 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.

- ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿಗಳು ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಕುರಿತು ಮಾಹಿತಿ, ಸಹಾಯ ಹಾಗೂ ಸೌಲಭ್ಯಗಳನ್ನು ಸದರಿ ಸೇವಾ ಕೇಂದ್ರಗಳಲ್ಲಿ ಕಾರ್ಮಿಕ ಬಂಧುಗಳ ಮೂಲಕ ಪಡೆಯಲು ವ್ಯವಸ್ಥೆ ಮಾಡಲಾಗುತ್ತಿದೆ.

(3) (ಅ) ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ-ಎಸ್‌ವೈಎಂ):- ಕೇಂದ್ರ ಸರ್ಕಾರದ ಈ ಯೋಜನೆಯಡಿ 18 – 40 ವರ್ಷ ವಯೋಮಾನದ ಅಸಂಘಟಿತ ಕಾರ್ಮಿಕರು ನೋಂದಾಯಿಸಿಕೊಂಡು 60 ವರ್ಷ ಪೂರ್ಣಗೊಂಡ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ಕೇಂದ್ರ ಸರ್ಕಾರವು ಸಮನಾಂತರ ವಂತಿಕೆಯನ್ನು ಪಾವತಿಸುತ್ತದೆ.

(ಆ) ಎನ್.ಪಿ.ಎಸ್. ಟ್ರೇಡರ್ಸ್ ಯೋಜನೆ:- ಕೇಂದ್ರ ಸರ್ಕಾರದ ಈ ಯೋಜನೆಯಡಿ 18–40 ವರ್ಷ ವಯೋಮಾನದ ವ್ಯಾಪಾರಿಗಳು ಹಾಗೂ ಸ್ವಯಂ ವಂತಿಕೆದಾರರಾದ ಉದ್ಯೋಗಿಗಳು ನೋಂದಾಯಿಸಿಕೊಂಡು 60 ವರ್ಷ ಪೂರ್ಣಗೊಂಡ ನಂತರ ಮಾಸಿಕ ನಿಶ್ಚಿತ ರೂ.3,000/- ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/- ರಿಂದ ರೂ. 200/- ರವರೆಗೆ ಕೇಂದ್ರ ಸರ್ಕಾರವು ಸಮನಾಂತರ ವಂತಿಕೆಯನ್ನು ಪಾವತಿಸುತ್ತದೆ.

| | | |
|---|---|---|
| | | ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ: ಈ ಮಂಡಳಿಗೆ ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯ್ದೆಯಡಿ ನಿಯಮಾನುಸಾರ ವಂತಿಗೆ ಪಾವತಿ ಮಾಡುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಈ ಕೆಳಕಂಡ ಯೋಜನೆಗಳು ಜಾರಿಯಲ್ಲಿರುತ್ತವೆ.<br>1. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ<br>2. ವೈದ್ಯಕೀಯ ನೆರವು.<br>3. ಅಪಘಾತ ಧನ ಸಹಾಯ.<br>4. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.<br>5. ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರಕ್ಕೆ ಧನ ಸಹಾಯ.<br>6. ವಾರ್ಷಿಕ ಕ್ರೀಡಾಕೂಟ ಹಮ್ಮಿಕೊಳ್ಳುವ ಕಾರ್ಮಿಕ ಸಂಘಟನೆಗೆ ಧನ ಸಹಾಯ<br>4. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ.<br>ಕಾರ್ಖಾನೆಗಳ ಕಾಯ್ದೆಯಡಿ ಕಾರ್ಮಿಕರಿಗೆ ದೊರೆಯುವ ಸೌಲಭ್ಯಗಳ ವಿವರವನ್ನು ಅನುಬಂಧ-7ರಲ್ಲಿ ನೀಡಲಾಗಿದೆ. |

[illegible] 108 [illegible] 2020.

(ಅರಬೈಲ್ ಶಿವರಾಂ ಹೆಬ್ಬಾರ್)
ಸಕ್ಕರೆ ಮತ್ತು ಕಾರ್ಮಿಕ ಸಚಿವರು.

<u>ಅನುಬಂಧ-01</u>

## ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸಗಳಿಗೆ ಸಂಬಂಧಿಸಿದ ವಿವರಗಳ ಪಟ್ಟಿ

1. ನಿರ್ಮಾಣ 2. ಮಾರ್ಪಾಡು 3. ರಿಪೇರಿ 4. ನಿರ್ವಹಣೆ ಅಥವಾ ಕಟ್ಟಡ ಕೆಡವುವಿಕೆಗೆ ಸಂಬಂಧಿಸಿದ ಕಾಮಗಾರಿ 5. ಕಟ್ಟಡಗಳು 6. ಬೀದಿಗಳು 7. ರಸ್ತೆಗಳು 8. ರೈಲ್ವೆಗಳು 9. ಟ್ರಾಮ್‌ವೇಗಳು 10. ಏರ್‌ಫೀಲ್ಡ್ಸ್ 11. ನೀರಾವರಿ ಚರಂಡಿ 12. ಏರಿ / ಕಟ್ಟೆಕಟ್ಟುವುದು ಮತ್ತು ನೌಕಾ ಕಾಮಗಾರಿಗಳು 13. ಪ್ರವಾಹ ನಿಯಂತ್ರಣ ಕಾಮಗಾರಿಗಳು (ಮಳೆ ನೀರು, ಚರಂಡಿ ಕಾಮಗಾರಿಗಳು ಸೇರಿ) 14. ವಿದ್ಯುತ್ ಉತ್ಪಾದನೆ 15. ಪ್ರಸರಣ ಮತ್ತು ವಿತರಣೆ 16. ಜಲ ಕಾಮಗಾರಿಗಳು (ನೀರು ವಿತರಣಾ ನಾಲೆಗಳು ಸೇರಿ) 17. ತೈಲ ಮತ್ತು ಅನಿಲ ಸ್ಥಾವರಗಳು 18. ವಿದ್ಯುತ್ ಮಾರ್ಗಗಳು 19. ವೈರ್‌ಲೆಸ್ 20. ರೇಡಿಯೋ 21. ದೂರದರ್ಶನ 22. ದೂರವಾಣಿ 23. ದೂರಸಂಪರ್ಕ ಮತ್ತು ಸಮುದ್ರ ಸಂವಹನಗಳಿಗೆ ಸಂಬಂಧಿಸಿದ ನಿರ್ಮಾಣ / ನವೀಕರಣ ಮತ್ತು ದುರಸ್ತಿ 24. ಅಣೆಕಟ್ಟುಗಳು 25. ನಾಲೆಗಳು 26. ಜಲಾಶಯಗಳು 27. ಜಲ ಮೂಲಗಳು 28. ಸುರಂಗಗಳು 29. ಸೇತುವೆಗಳು 30. ವಯಾಡಕ್ಟ್ಸ್ 31. ಆಕ್ವಿಡಕ್ಟ್ಸ್ 32. ಕೊಳವೆ ಮಾರ್ಗಗಳ ನಿರ್ಮಾಣ 33. ಸ್ಥಾವರಗಳು 34. ಕೂಲಿಂಗ್ ಟವರ್‌ಗಳು ಮತ್ತು ಪ್ರಸರಣ ಸ್ಥಾವರಗಳು ಇತ್ಯಾದಿ ನಿರ್ಮಾಣ ಕೆಲಸಗಳು:

35. ಕಲ್ಲು ಗಣಿಗಾರಿಕೆ ಕಾಯ್ದೆ 1952ರ ವ್ಯಾಪ್ತಿಗೆ ಒಳಪಡದ ರಸ್ತೆ ಮತ್ತು ಕಟ್ಟಡ ನಿರ್ಮಾಣದ ಕಲ್ಲು ಕೆಲಸ 36. ನಿರ್ಮಾಣದಲ್ಲಿ ಚಪ್ಪಡಿ / ಟೈಲ್‌ಗಳನ್ನು ಅಳವಡಿಸುವುದು 37. ಯುಜಿಡಿ ನಿರ್ಮಾಣ ಸೇರಿದಂತೆ ಒಳಚರಂಡಿ ಮತ್ತು ಪ್ಲಂಬಿಂಗ್ ಕೆಲಸ 38. ವೈರಿಂಗ್, ವಿತರಣೆ ಪ್ಯಾನಲ್ ಫಿಕ್ಸಿಂಗ್ ಇತ್ಯಾದಿಗಳನ್ನು ಒಳಗೊಂಡ ವಿದ್ಯುತ್ ಕೆಲಸ 39. ಕೂಲಿಂಗ್ ಮತ್ತು ಹೀಟಿಂಗ್ ಸಿಸ್ಟಂಗಳ ಸ್ಥಾಪನೆ ಮತ್ತು ಅಳವಡಿಕೆ 40. ಲಿಫ್ಟ್, ಎಸ್ಕಲೇಟರ್ ಇತ್ಯಾದಿಗಳ ಸ್ಥಾಪನೆ 41. ಸೆಕ್ಯೂರಿಟಿ ಗೇಟುಗಳ ಸ್ಥಾಪನೆ 42. ಕಬ್ಬಿಣ/ಲೋಹದ ಗ್ರಿಲ್‌ಗಳು, ಕಿಟಕಿ, ಬಾಗಿಲುಗಳ ಸ್ಥಾಪನೆ 43. ನೀರಿನ ಕೊಯ್ಲು ರಚನೆಗಳ ನಿರ್ಮಾಣ 44. ಕಾರ್ಪೆಂಟರಿಂಗ್, ಫಾಲ್ಸ್‌ಸೀಲಿಂಗ್, ವಾಲ್ ಪ್ಯಾನಲಿಂಗ್ ಮುಂತಾದವುಗಳನ್ನು ಒಳಗೊಂಡ ಒಳಾಂಗಣ ವಿನ್ಯಾಸ 45. ಕಟ್ಟಡ ನಿರ್ಮಾಣ ಸಂದರ್ಭದಲ್ಲಿ ಅಳವಡಿಸುವ ಗ್ಲಾಸ್ ಪ್ಯಾನಲ್‌ಗಳು, ಎಸಿಪಿ ಶೀಟ್‌ಗಳು, ಸ್ಟ್ರಕ್ಚರಲ್ ಗ್ಲೇಜಿಂಗ್‌ಗಳು 46.ಪ್ರಿ-ಫ್ಯಾಬ್ರಿಕೇಟೆಡ್ ಕಾಂಕ್ರೀಟ್ ಕಾಂಪೌಂಡ್ ವಾಲ್ಸ್, ಕಾಂಕ್ರೀಟ್ ಬ್ರಿಕ್ಸ್, ಬ್ಲಾಕ್ಸ್, ಹಾಲೋಬ್ಲಾಕ್ಸ್, ಟೈಲ್ಸ್ ಮುಂತಾದವುಗಳ ಅಳವಡಿಕೆ 47.ಸಿಗ್ನೇಜ್, ರಸ್ತೆ ಪೀಠೋಪಕರಣಗಳು, ಬಸ್ ಆಶ್ರಯಗಳು/ ಸ್ಟ್ಯಾಂಡ್, ಸಿಗ್ನಲಿಂಗ್ ಸಿಸ್ಟಮ್ಸ್ ಮುಂತಾದವುಗಳ ನಿರ್ಮಾಣ 48.ರೋಟರಿಗಳ ನಿರ್ಮಾಣ ಮತ್ತು ಸ್ಥಾಪನೆ, ಕಾರಂಜಿಗಳು, ಸಾರ್ವಜನಿಕ ಉದ್ಯಾನವನ ಮತ್ತು ತೋಟಗಳಲ್ಲಿ ಕಾಲುಹಾದಿಗಳು ಇತ್ಯಾದಿಗಳ ಅಳವಡಿಕೆ 49. ನಿರ್ಮಾಣ ಉದ್ದೇಶಗಳಿಗಾಗಿ ಭೂಮಿಯ ಕೆಲಸ, ಭೂಮಿಯ ಅಗೆಯುವಿಕೆ, ನೆಲಸಮಗೊಳಿಸುವಿಕೆ ಮತ್ತು ಭೂಮಿಯ ಕತ್ತರಿಸುವಿಕೆ ಇತ್ಯಾದಿ ಕೆಲಸಗಳು 50. ತಾತ್ಕಾಲಿಕ ಆಶ್ರಯ ತಾಣಗಳ ನಿರ್ಮಾಣ ಮತ್ತು ಅಳವಡಿಕೆ 51. ಫಿಲಂಸೆಟ್ ಗಳ ನಿರ್ಮಾಣ ಮತ್ತು ಅಳವಡಿಕೆ.

ಅನುಬಂಧ-1ಎ

| ಜಿಲ್ಲಾವಾರು ಕಾರ್ಖಾನೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರ ವಿವರ<br>DISTRICT WISE TOTAL NO. OF FACTORIES AND TOTAL NO OF WORKERS | | | | |
|---|---|---|---|---|
| Name of District | No. of Factories | Male | Female | Total no.of workers |
| Bengaluru Urban | 7836 | 500355 | 306629 | 806984 |
| Bengaluru Rural | 805 | 79843 | 28419 | 108262 |
| Ramanagara | 380 | 42122 | 15301 | 57423 |
| Chitradurga | 202 | 3658 | 3846 | 7504 |
| Davanagere | 254 | 7253 | 1887 | 9140 |
| Kolara | 291 | 48293 | 14315 | 62608 |
| Chikkaballapur | 107 | 4397 | 6575 | 10972 |
| Shivamogga | 292 | 17964 | 9673 | 27637 |
| Tumakuru | 550 | 27532 | 14186 | 41718 |
| Chikkamagaluru | 113 | 2932 | 952 | 3884 |
| Dakshina Kannada | 757 | 39310 | 13251 | 52561 |
| Udupi | 481 | 23503 | 22794 | 46297 |
| Hassan | 121 | 12393 | 10652 | 23045 |
| Madikeri | 57 | 1891 | 1032 | 2923 |
| Mandya | 152 | 8382 | 8432 | 16814 |
| Mysuru | 718 | 81452 | 25677 | 107129 |
| Chamarajanagar | 37 | 1825 | 1144 | 2969 |
| Belagavi | 835 | 57888 | 6176 | 64064 |
| Vijayapura | 107 | 5638 | 1046 | 6684 |
| Bagalakote | 80 | 13327 | 571 | 13898 |
| Dharwad | 634 | 43628 | 8439 | 52067 |
| Gadaga | 113 | 4445 | 688 | 5133 |

| | | | | |
|---|---|---|---|---|
| Haveri | 135 | 7018 | 909 | 7927 |
| Uttara Kannada | 124 | 13524 | 2583 | 16107 |
| Ballary | 492 | 47649 | 2812 | 50461 |
| Bidar | 149 | 8336 | 858 | 9194 |
| Kalaburagi | 171 | 17856 | 1043 | 18899 |
| Yadgiri | 83 | 1982 | 286 | 2268 |
| Raichuru | 417 | 12101 | 3556 | 15657 |
| Koppala | 34 | 1384 | 100 | 1484 |
| TOTAL | 10527 | 1137851 | 519832 | 1657713 |

<u>ಅನುಬಂಧ-02</u>

ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯಿಂದ ಗುರುತಿಸಲಾದ ಕಾರ್ಮಿಕರ ಪಟ್ಟಿ

1. ದರ್ಜಿಗಳು
2. ದೋಬಿಗಳು
3. ಹಮಾಲಿಗಳು
4. ಹೋಟೆಲ್ ಕಾರ್ಮಿಕರು
5. ಆಟೋ ಮತ್ತು ಟ್ಯಾಕ್ಸಿ ಚಾಲಕರು ಹಾಗೂ ಖಾಸಗಿ ಬಸ್, ಲಾರಿ ಚಾಲಕರು ಹಾಗೂ ನಿರ್ವಾಹಕರು
6. ಆಟೋಮೊಬೈಲ್ ವರ್ಕ್‌ಶಾಪ್‌ಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಮತ್ತು
7. ಗೃಹ ಕಾರ್ಮಿಕರು
8. ಕೃಷಿ/ತೋಟಗಾರಿಕೆ/ಹೈನುಗಾರಿಕೆ ಕೆಲಸಗಳಲ್ಲಿ ತೊಡಗಿರುವ ಕೂಲಿ ಕಾರ್ಮಿಕರು
9. ನಾರಿನ ಉದ್ದಿಮೆಯಲ್ಲಿ ತೊಡಗಿರುವ ಕೂಲಿ ಕಾರ್ಮಿಕರು
10. ಮನೆಗಳಲ್ಲಿ ನೇಯ್ಗೆ ಕೆಲಸ ಮಾಡುವ ನೇಕಾರರು
11. ಮೀನುಗಾರರು
12. ಕುಂಬಾರರು
13. ಚಮ್ಮಾರರು
14. ಕ್ಷೌರಿಕರು
15. ಕಸಾಯಿ ಖಾನೆ ಕಾರ್ಮಿಕರು
16. ಕಮ್ಮಾರರು
17. ಚಿನಿವಾರರು/ಅಕ್ಕಸಾಲಿಗರು
18. ಮನೆಗಳಲ್ಲಿ ಬೀಡಿ ಕಟ್ಟುವವರು
19. ಮನೆಗಳಲ್ಲಿ ಅಗರಬತ್ತಿ ತಯಾರಿಸುವ ಕಾರ್ಮಿಕರು
20. ಶಿಲ್ಪಕಾರರು/ ಹಸ್ತ ಕುಶಲ ಕಾರ್ಮಿಕರು
21. ಚಿತ್ರ ಬಿಡಿಸುವವರು
22. ಬಿದಿರಿನ ವಸ್ತುಗಳನ್ನು ತಯಾರು ಮಾಡುವವರು
23. ಖಾದ್ಯ ತೈಲ/ಗಿರಣಿಯಲ್ಲಿ ಆಹಾರ ವಸ್ತುಗಳ ಸಂಸ್ಕರಣಾ ಕೆಲಸದಲ್ಲಿ ತೊಡಗಿರುವವರು.
24. ಟಿಂಬರ್ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
25. ರೇಷ್ಮೆ ಕಾರ್ಮಿಕರು
26. ಕಾಟನ್ ಗಿನ್ನಿಂಗ್ ಮತ್ತು ಪ್ರೊಸೆಸಿಂಗ್ ಕೆಲಸದಲ್ಲಿ ತೊಡಗಿರುವಕಾರ್ಮಿಕರು
27. ಮುದ್ರಣ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
28. ಕಲ್ಲು ಒಡೆಯುವಕಾರ್ಮಿಕರು
29. ಚರ್ಮ ಹದ ಮಾಡುವ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
30. ಎಲ್ಲಾ ವಿಧದ ಮಿಲ್‌ಗಳಲ್ಲಿ ಕೆಲಸ ಮಾಡುವ ಕಾರ್ಮಿಕರು
31. ಬೀದಿ ಬದಿಯ ಮಾರಾಟಗಾರರು
32. ಚಾಲಕರು/ನಿರ್ವಾಹಕರು/ಸಹಾಯಕರು/ ಕ್ಲೀನರ್‌ಗಳು/ಗಾಡಿ ಎಳೆಯುವವರು/ರಿಕ್ಷಾ ಚಾಲಕರು/ ಟಾಂಗಾವಾಲಾಗಳು.
33. ಎಲ್ಲಾ ಬಗೆಯ ರಿಪೇರಿ ಕೆಲಸ ಮತ್ತು ತ್ಯಾಜ್ಯ ವಿಲೇವಾರಿ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
34. ಚಿಂದಿ ಆಯುವವರು
35. ಅಡಿಗೆ ಕೆಲಸಗಾರರು/ಕಲ್ಯಾಣ ಮಂಟಪಗಳಲ್ಲಿ ಶುಚಿ ಕೆಲಸದಲ್ಲಿ ತೊಡಗಿರುವವರು/ಮಧ್ಯಾಹ್ನದ ಬಿಸಿ ಊಟದ ಕಾರ್ಮಿಕರು ಮತ್ತು ಸಹಾಯಕರು
36. ಸಫಾಯಿ ಕರ್ಮಚಾರಿಗಳು

37. ಕಛೇರಿಗಳಲ್ಲಿ ಶುಚಿ ಕೆಲಸದಲ್ಲಿ ತೊಡಗಿರುವ ಗುತ್ತಿಗೆ ಕಾರ್ಮಿಕರು
38. ಗುತ್ತಿಗೆ ಆಧಾರದ ಮೇಲೆ ನೇಮಕವಾಗಿರುವ ಭದ್ರತಾ ಸಿಬ್ಬಂದಿ/ಗನ್‌ಮ್ಯಾನ್‌ಗಳು
39. ಪೋರ್ಟರ್
40. ಪ್ರವಾಸಿ ಗೈಡ್‌ಗಳು
41. ಸುಣ್ಣದ ಭಟ್ಟಿ ಕಾರ್ಮಿಕರು
42. ಛಾಯಾಪ್ರತಿ ಕಾರ್ಮಿಕರು
43. ಇತರೆ ವರ್ಗ(ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 2(m) ಹಾಗೂ ಕಲಂ 2(l) ರ ವ್ಯಾಖ್ಯಾನಕ್ಕೆ ಒಳಪಡುವ ಅಸಂಘಟಿತ ವರ್ಗದ ಎಲ್ಲಾ ಕಾರ್ಮಿಕರು)
44. ಇತರೆ ವರ್ಗ(ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 2(m) ಹಾಗೂ ಕಲಂ 2(l) ರ ವ್ಯಾಖ್ಯಾನಕ್ಕೆ ಒಳಪಡುವ ಅಸಂಘಟಿತ ವರ್ಗದ ಎಲ್ಲಾ ಕಾರ್ಮಿಕರು)

ಅನುಬಂಧ-03

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೋಂದಣಿಯಾದ ಕಾರ್ಮಿಕರ

ಜಿಲ್ಲೆ / ತಾಲ್ಲೂಕುವಾರು / ಕ್ಷೇತ್ರವಾರು ಮಾಹಿತಿ

| ಕ್ರ ಸಂ | ಜಿಲ್ಲೆ / ಉಪವಿಭಾಗ | ತಾಲ್ಲೂಕು / ವೃತ್ತ | ನೋಂದಣಿಯಾಗಿರುವ ಕಾರ್ಮಿಕರ ಸಂಖ್ಯೆ |
|---|---|---|---|
| 1 | ಕಾರ್ಮಿಕ ಅಧಿಕಾರಿ, ಚಿಕ್ಕಮಗಳೂರು-1 ಮತ್ತು 2 | ಚಿಕ್ಕಮಗಳೂರು ವೃತ್ತ 1 ಮತ್ತು 2 | 16844 |
| | | ತರೀಕೆರೆ | 12868 |
| | | ಕೊಪ್ಪ, ಶೃಂಗೇರಿ, ಎನ್‌ಆರ್ ಪುರ | 1590 |
| | | ಮೂಡಿಗೆರೆ | 991 |
| | | ಕಡೂರು | 8698 |
| | | ಒಟ್ಟು | 43,991 |
| 2 | ಕಾರ್ಮಿಕ ಅಧಿಕಾರಿ ಬಳ್ಳಾರಿ 1 & 2 | ಬಳ್ಳಾರಿ | 20224 |
| | | ಸಿರುಗುಪ್ಪ | 6039 |
| | | ಹೊಸಪೇಟೆ | 5665 |
| | | ಕೂಡ್ಲಗಿ | 6983 |
| | | ಸಂಡೂರು | 4863 |
| | | ಹೂವಿನಹಡಗಲಿ | 3904 |
| | | ಎಚ್ ಬಿ ಹಳ್ಳಿ | 4020 |
| | | ಒಟ್ಟು | 51,698 |
| 3 | ಕಾರ್ಮಿಕ ಅಧಿಕಾರಿ, ಮೈಸೂರು | ಮೈಸೂರು | 38939 |
| | | ನಂಜನಗೂಡು | 4656 |
| | | ಹುಣಸೂರು | 6991 |
| | | ಟಿ ನರಸೀಪುರ | 2815 |
| | | ಕೆ ಆರ್ ನಗರ | 4226 |
| | | ಪಿರಿಯಾಪಟ್ಟಣ | 6336 |
| | | ಹೆಚ್ ಡಿ ಕೋಟೆ | 2917 |
| | | ಒಟ್ಟು | 66,880 |
| 4 | ಕಾರ್ಮಿಕ ಅಧಿಕಾರಿ, ರಾಮನಗರ | ರಾಮನಗರ ವೃತ್ತ | 9809 |
| | | ಕನಕಪುರ ವೃತ್ತ | 15131 |
| | | ಚನ್ನಪಟ್ಟಣ ವೃತ್ತ | 11679 |
| | | ಮಾಗಡಿ ವೃತ್ತ | 4528 |
| | | ಒಟ್ಟು | 41,147 |
| 5 | ಕಾರ್ಮಿಕ ಅಧಿಕಾರಿ, ಹಾಸನ | ಆಲೂರು | 791 |
| | | ಬೇಲೂರು | 2891 |

| | | | |
|---|---|---|---|
| | | ಸಕಲೇಶಪುರ | 1342 |
| | | ಹಾಸನ | 14748 |
| | | ಅರಸೀಕೆರೆ | 3634 |
| | | ಚನ್ನರಾಯಪಟ್ಟಣ | 5994 |
| | | ಹೊಳೆನರಸೀಪುರ | 4820 |
| | | ಅರಕಲಗೂಡು | 2160 |
| | | ಒಟ್ಟು | 36,380 |
| 6 | ಕಾರ್ಮಿಕ ಅಧಿಕಾರಿ, ತುಮಕೂರು | ತುಮಕೂರು | 16862 |
| | | ಗುಬ್ಬಿ | 4732 |
| | | ಚಿಕ್ಕನಾಯಕನಹಳ್ಳಿ | 1861 |
| | | ಕುಣಿಗಲ್ | 7361 |
| | | ತುರುವೇಕೆರೆ | 3084 |
| | | ಶಿರಾ | 5372 |
| | | ಮಧುಗಿರಿ & ಕೊರಟಗೆರೆ | 7163 |
| | | ಪಾವಗಡ | 7159 |
| | | ತಿಪಟೂರು | 4454 |
| | | ಒಟ್ಟು | 58,648 |
| 7 | ಕಾರ್ಮಿಕ ಅಧಿಕಾರಿ, ದಾವಣಗೆರೆ | ದಾವಣಗೆರೆ | 36248 |
| | | ಹರಿಹರ | 12238 |
| | | ಹರಪ್ಪನಹಳ್ಳಿ | 9727 |
| | | ಹೊನ್ನಾಳಿ | 7662 |
| | | ಜಗಳೂರು | 4531 |
| | | ಚನ್ನಗಿರಿ | 8586 |
| | | ಒಟ್ಟು | 78,992 |
| 8 | ಕಾರ್ಮಿಕ ಅಧಿಕಾರಿ, ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 8657 |
| | | ಬಾಗೇಪಲ್ಲಿ | 4572 |
| | | ಚಿಂತಾಮಣಿ | 4665 |
| | | ಶಿಡ್ಲಘಟ್ಟ | 4545 |
| | | ಗೌರಿಬಿದನೂರು | 5530 |
| | | ಗುಡಿಬಂಡೆ | 145 |
| | | ಒಟ್ಟು | 28,114 |
| 9 | ಕಾರ್ಮಿಕ ಅಧಿಕಾರಿ, ಚಾಮರಾಜನಗರ | ಚಾಮರಾಜನಗರ | 7870 |
| | | ಕೊಳ್ಳೇಗಾಲ | 7545 |
| | | ಗುಂಡ್ಲುಪೇಟೆ | 3167 |
| | | ಒಟ್ಟು | 18,582 |
| 10 | ಕಾರ್ಮಿಕ ಅಧಿಕಾರಿ, ಗದಗ | 01ನೇ ವೃತ್ತ, ಗದಗ | 5768 |
| | | 02ನೇ ವೃತ್ತ, ಗದಗ | 4924 |
| | | ರೋಣ | 4425 |
| | | ಮುಂಡರಗಿ | 2937 |

| | | ಶಿರಹಟ್ಟಿ | 3549 |
|---|---|---|---|
| | | ನರಗುಂದ | 2163 |
| | | ಒಟ್ಟು | 23,766 |
| 11 | ಕಾರ್ಮಿಕ ಅಧಿಕಾರಿ ಮಂಡ್ಯ 1 & 2 | ಮಂಡ್ಯ ವೃತ್ತ | 10465 |
| | | ಮದ್ದೂರು | 5440 |
| | | ಕೆ ಆರ್ ಪೇಟೆ | 5164 |
| | | ನಾಗಮಂಗಲ | 1167 |
| | | ಮಳವಳ್ಳಿ | 6008 |
| | | ಶ್ರೀರಂಗಪಟ್ಟಣ | 3856 |
| | | ಪಾಂಡವಪುರ | 4220 |
| | | ಒಟ್ಟು | 36,320 |
| 12 | ಕಾರ್ಮಿಕ ಅಧಿಕಾರಿ, ಚಿತ್ರದುರ್ಗ | ಚಿತ್ರದುರ್ಗ ವೃತ್ತ | 13965 |
| | | ಹಿರಿಯೂರು | 8914 |
| | | ಚಳ್ಳಕೆರೆ | 9016 |
| | | ಮೊಳಕಾಲ್ಮೂರು | 2557 |
| | | ಹೊಸದುರ್ಗ | 6970 |
| | | ಹೊಳಲ್ಕೆರೆ | 2683 |
| | | ಒಟ್ಟು | 44,105 |
| 13 | ಕಾರ್ಮಿಕ ಅಧಿಕಾರಿ, ಶಿವಮೊಗ್ಗ | ಶಿವಮೊಗ್ಗ ವೃತ್ತ | 21324 |
| | | ಭದ್ರಾವತಿ | 5832 |
| | | ಸಾಗರ | 5569 |
| | | ಸೊರಬ | 5294 |
| | | ಶಿಕಾರಿಪುರ | 9322 |
| | | ತೀರ್ಥಹಳ್ಳಿ | 3067 |
| | | ಹೊಸನಗರ | 5483 |
| | | ಒಟ್ಟು | 55,891 |
| 14 | ಕಾರ್ಮಿಕ ಅಧಿಕಾರಿ, ಕೋಲಾರ | ಕೋಲಾರ ವೃತ್ತ | 32006 |
| | | ಬಂಗಾರಪೇಟೆ | 13895 |
| | | ಮಾಲೂರು | 11165 |
| | | ಮುಳಬಾಗಿಲು | 18003 |
| | | ಕೆ.ಜಿ.ಎಫ್. | 7192 |
| | | ಶ್ರೀನಿವಾಸಪುರ | 4667 |
| | | ಒಟ್ಟು | 86,928 |
| 15 | ಕಾರ್ಮಿಕ ಅಧಿಕಾರಿ, ಕೊಪ್ಪಳ | ಕೊಪ್ಪಳ ವೃತ್ತ | 8168 |
| | | ಕುಷ್ಟಗಿ | 13043 |
| | | ಗಂಗಾವತಿ | 9284 |
| | | ಒಟ್ಟು | 30,495 |
| 16 | ಧಾರವಾಡ ಜಿಲ್ಲೆ ಕಾರ್ಮಿಕ ಅಧಿಕಾರಿ, | ಹುಬ್ಬಳ್ಳಿ ವೃತ್ತ | 15133 |

| | | | |
|---|---|---|---|
| | ಹುಬ್ಬಳ್ಳಿ 1 & 2 | | |
| | | ಧಾರವಾಡ ವೃತ್ತ | 17050 |
| | | ನವಲಗುಂದ | 6286 |
| | | ಕುಂದಗೋಳ | 6137 |
| | | ಕಲಘಟಗಿ | 6754 |
| | | ಒಟ್ಟು | 51360 |
| 17 | ಕಾರ್ಮಿಕ ಅಧಿಕಾರಿ, ಹಾವೇರಿ | ಹಾವೇರಿ ವೃತ್ತ | 10505 |
| | | ಶಿಗ್ಗಾಂವ್ | 3284 |
| | | ಸವಣೂರು | 3499 |
| | | ರಾಣೇಬೆನ್ನೂರು | 12347 |
| | | ಹಿರೇಕೆರೂರು | 3073 |
| | | ಬ್ಯಾಡಗಿ | 6077 |
| | | ಹಾನಗಲ್ | 2913 |
| | | ಒಟ್ಟು | 41,698 |
| 18 | ಕಾರ್ಮಿಕ ಅಧಿಕಾರಿ, ದ.ಕ ಉಪವಿಭಾಗ-1 & 2, ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ | ಮಂಗಳೂರು ವೃತ್ತ | 18977 |
| | | ಬೆಳ್ತಂಗಡಿ | 6387 |
| | | ಮಂಗಳೂರು ವೃತ್ತ | 13218 |
| | | ಬಂಟ್ವಾಳ | 13940 |
| | | ಪುತ್ತೂರು | 8010 |
| | | ಒಟ್ಟು | 60,532 |
| 19 | ಕಾರ್ಮಿಕ ಅಧಿಕಾರಿ, ಉತ್ತರಕನ್ನಡ ಜಿಲ್ಲೆ, ಕಾರವಾರ | ಕಾರವಾರ ವೃತ್ತ | 2147 |
| | | ಅಂಕೋಲಾ | 2821 |
| | | ಕುಮಟಾ | 8413 |
| | | ಹೊನ್ನಾವರ | 10162 |
| | | ಭಟ್ಕಳ | 11490 |
| | | ಶಿರಸಿ | 2532 |
| | | ಸಿದ್ದಾಪುರ | 1335 |
| | | ಯಲ್ಲಾಪುರ | 2722 |
| | | ಮುಂಡಗೋಡ | 1400 |
| | | ಹಳಿಯಾಳ | 4087 |
| | | ದಾಂಡೇಲಿ | 14093 |
| | | ಒಟ್ಟು | 61,202 |
| 20 | ಕಾರ್ಮಿಕ ಅಧಿಕಾರಿ, ಬೆಳಗಾವಿ 1& 2, ಬೆಳಗಾವಿ ಜಿಲ್ಲೆ. | ಹಿರಿಯ ಕಾರ್ಮಿಕ ನಿರೀಕ್ಷಕರು, 1ನೇ ಮತ್ತು 2ನೇ ವೃತ್ತ, ಬೆಳಗಾವಿ | 12568 |
| | | ಗೋಕಾಕ | 7999 |
| | | ಹುಕ್ಕೇರಿ | 7143 |

| | | | |
|---|---|---|---|
| | | ನಿಪ್ಪಾಣಿ | 5161 |
| | | ಚಿಕ್ಕೋಡಿ | 3403 |
| | | ಅಥಣಿ | 3587 |
| | | ರಾಯಬಾಗ | 2316 |
| | | ರಾಮದುರ್ಗ | 3662 |
| | | ಸವದತ್ತಿ | 6574 |
| | | ಬೈಲಹೊಂಗಲ | 11759 |
| | | ಒಟ್ಟು | 64,172 |
| 21 | ಕಾರ್ಮಿಕ ಅಧಿಕಾರಿ, ರಾಯಚೂರು. | ರಾಯಚೂರು 1ನೇ ವೃತ್ತ | 12121 |
| | | ರಾಯಚೂರು 2ನೇ ವೃತ್ತ | 1313 |
| | | ಮಾನ್ವಿ | 4875 |
| | | ಸಿಂಧನೂರು | 3639 |
| | | ಲಿಂಗಸುಗೂರು | 2840 |
| | | ಒಟ್ಟು | 24,788 |
| 22 | ಕಾರ್ಮಿಕ ಅಧಿಕಾರಿ, ಮಡಿಕೇರಿ | ಮಡಿಕೇರಿ | 1164 |
| | | ಸೋಮವಾರಪೇಟೆ | 1226 |
| | | ವಿರಾಜಪೇಟೆ | 2385 |
| | | ಒಟ್ಟು | 4,775 |
| 23 | ಕಾರ್ಮಿಕ ಅಧಿಕಾರಿ, ಬೀದರ | ಭಾಲ್ಕಿ | 17051 |
| | | ಔರಾದ | 8354 |
| | | ಹುಮನಾಬಾದ | 10978 |
| | | ಬಸವಕಲ್ಯಾಣ | 3931 |
| | | ಬೀದರ್ | 42747 |
| | | ಒಟ್ಟು | 83,061 |
| 24 | ಕಾರ್ಮಿಕ ಅಧಿಕಾರಿ, ಕಲಬುರಗಿ | ಕಲಬುರಗಿ ವೃತ್ತ | 54524 |
| | | ಆಳಂದ | 9561 |
| | | ಅಫಜಲಪುರ | 2201 |
| | | ಜೇವರ್ಗಿ | 2477 |
| | | ಸೇಡಂ | 3737 |
| | | ಚಿತ್ತಾಪುರ | 6644 |
| | | ಚಿಂಚೋಳಿ | 1575 |
| | | ಒಟ್ಟು | 80,719 |
| 25 | ಕಾರ್ಮಿಕ ಅಧಿಕಾರಿ, ಬಾಗಲಕೋಟೆ | ಬಾಗಲಕೋಟೆ ವೃತ್ತ | 14140 |
| | | ಬೀಳಗಿ | 3466 |
| | | ಹುನಗುಂದ | 9248 |
| | | ಜಮಖಂಡಿ | 8432 |
| | | ಮುಧೋಳ | 7707 |
| | | ಬದಾಮಿ | 11341 |

| | | | |
|---|---|---|---|
| | | ಒಟ್ಟು | 54,334 |
| 26 | ಕಾರ್ಮಿಕ ಅಧಿಕಾರಿ, ಯಾದಗಿರಿ | ಯಾದಗಿರಿ ವೃತ್ತ | 18184 |
| | | ಶಹಾಪುರ | 4567 |
| | | ಸುರಪುರ | 12460 |
| | | ಒಟ್ಟು | 35,211 |
| 27 | ಕಾರ್ಮಿಕ ಅಧಿಕಾರಿ, ವಿಜಯಪುರ 1 & 2 | ವಿಜಯಪುರ ವೃತ್ತ | 40198 |
| | | ಮುದ್ದೇಬಿಹಾಳ | 18668 |
| | | ಬಸವನ ಬಾಗೇವಾಡಿ | 10258 |
| | | ಸಿಂಧಗಿ | 5761 |
| | | ಇಂಡಿ | 2438 |
| | | ಒಟ್ಟು | 77,323 |
| 28 | ಕಾರ್ಮಿಕ ಅಧಿಕಾರಿ, ಉಡುಪಿ | ಉಡುಪಿ ವೃತ್ತ | 16640 |
| | | ಕಾರ್ಕಳ | 6165 |
| | | ಕುಂದಾಪುರ | 11414 |
| | | ಒಟ್ಟು | 34,219 |
| 29 | ಕಾರ್ಮಿಕ ಅಧಿಕಾರಿ, ಉಪವಿಭಾಗ 1 ರಿಂದ 6, ಬೆಂಗಳೂರು (ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆ) | ಬೆಂಗಳೂರು ವೃತ್ತ 1 ರಿಂದ 49 | 3,62,764 |
| | | ಆನೇಕಲ್ | 13672 |
| | | ಹೊಸಕೋಟೆ | 11033 |
| | | ದೇವನಹಳ್ಳಿ | 11912 |
| | | ದೊಡ್ಡಬಳ್ಳಾಪುರ | 8582 |
| | | ನೆಲಮಂಗಲ | 3220 |
| | | ಒಟ್ಟು | 4,11,183 |

*ವಿಶೇಷ ನೋಂದಣಿ ಅಭಿಯಾನದಲ್ಲಿ 4,21,499 ಫಲಾನುಭವಿಗಳು ನೋಂದಣಿಯಾಗಿದ್ದು, ಅವರ ಜಿಲ್ಲಾವಾರು ವಿವರ ಪ್ರಸ್ತುತ ಲಭ್ಯವಿರುವುದಿಲ್ಲ.

ಅನುಬಂಧ-4

## ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ 2018-19 ನೇ ಸಾಲಿನಲ್ಲಿ ನೋಂದಾಯಿಸಲಾದ ಜಿಲ್ಲಾವಾರು ಕಾರ್ಮಿಕರ ವಿವರ

| ಕ್ರಸಂ. | ಜಿಲ್ಲೆಯ ಹೆಸರು | ಕಾರ್ಖಾನೆಗಳು/ಕಾರ್ಯ ಸಂಸ್ಥೆಗಳು | ಕಾರ್ಮಿಕರ ಸಂಖ್ಯೆ |
|---|---|---|---|
| 1 | ಬೆಂಗಳೂರು ನಗರ | [illegible] | [illegible] |
| 2 | ಬೆಂಗಳೂರು ರೂರಲ್ | 704 | 103486 |
| 3 | ಬೆಳಗಾಂ | 407 | 45240 |
| 4 | ಬಳ್ಳಾರಿ | 336 | 38892 |
| 5 | ಬೀದರ್ | 31 | 4996 |
| 6 | ಬಾಗಲಕೋಟೆ | 52 | 11710 |
| 7 | ವಿಜಯಪುರ | 47 | 10760 |
| 8 | ಚಿಕ್ಕಮಗಳೂರು | 149 | 12311 |
| 9 | ಚಾಮರಾಜನಗರ | 28 | 4083 |
| 10 | ಚಿತ್ರದುರ್ಗ | 42 | 5347 |
| 11 | ಚಿಕ್ಕಬಳ್ಳಾಪುರ | 38 | 9010 |
| 12 | ದಾವಣಗೆರೆ | 117 | 15654 |
| 13 | ದಕ್ಷಿಣ ಕನ್ನಡ | [illegible] | [illegible] |
| 14 | ಧಾರವಾಡ | 288 | 33743 |
| 15 | ಗದಗ | 8 | 293 |
| 16 | ಕಲ್ಬುರ್ಗಿ | 93 | 16780 |
| 17 | ಹಾವೇರಿ | 35 | 6730 |
| 18 | ಹಾಸನ | 94 | 13416 |
| 19 | ಕೊಡಗು | 146 | 11008 |
| 20 | ಕೋಲಾರ | 174 | 25425 |
| 21 | ಕೊಪ್ಪಳ | 48 | 7156 |
| 22 | ಮೈಸೂರು | 636 | 81526 |
| 23 | ಮಂಡ್ಯ | 58 | 10169 |
| 24 | ರಾಮನಗರ | 226 | 37836 |
| 25 | ರಾಯಚೂರು | 20 | 7102 |
| 26 | ಶಿವಮೊಗ್ಗ | 151 | 18312 |
| 27 | ತುಮಕೂರು | 211 | 27974 |
| 28 | ಉಡುಪಿ | [illegible] | [illegible] |
| 29 | ಉತ್ತರ ಕನ್ನಡ | 64 | 12580 |
| 30 | ಯಾದಗಿರಿ | 1 | 26 |
|  | ಒಟ್ಟು | 17005 | 3991605 |

## 33. Employment in Handloom and Power Loom (Cotton) Industry

Notification No. KAE 22 LWA 2019 dated 20.02.2019

Cost of Living Allowance to be paid over and above 6843 points

Minimum Wages With effect from 20-02-2019

Cost of Living Index: 7268 – 6843 = 425 points

Minimum wages and VDA from 01.04.2019 to 31.03.2020.

### SCHEDULE

| Class of Employment | Minimum rates of wages | | |
|---|---|---|---|
| 1 | 2 | | |
| I. Weaving- Handloom: | | | |
| (1) Sarees- Plain sarees with border with width of 48"-54" (cms 121.92-137.16) | Counts | Rates per Mtr | VDA @ 19.62 per Day |
| | 40 | 30.00 | |
| | 60 | 31.00 | |
| | 80 | 35.00 | |
| | 100-120 | 40.00 | |
| Note: For any design work or chowkly (checks) 1/3 of the above rates be paid extra | | | |
| (2) Dhotis | 40 | 28.00 | |
| | 60 | 30.00 | |
| | 80 | 32.00 | |
| | 80-120 | 35.00 | |
| Note: For Malabar Lungi (checks) 1/3 of the above rates be paid extra | | | |
| (3) Furnishing fabrics (plain) (including bed sheets, upholstery cloth curtain cloth table cloth and other similar *Width:* 36" - 48" | 27.00 | | |
| Cms (91.44-121.92) | | | |
| 49" - 60" | 29.00 | | |
| Cms (124.46-152.40) | | | |
| 61" - 72" | 32.00 | | |
| Cms (154.94-182.88) | | | |
| 73"-90" | 38.00 | | |
| Cms (185.42-228.60) | | | |
| Note: For design work 1/3 of the above rates be paid extra. | | | |

| | Counts | Width | Rate per Mtr. | |
|---|---|---|---|---|
| (4) Shirting | 26-30 | 32" | 18.00 | VDA @ 19.62per Day |
| | 26-30 | 50" | 22.00 | |
| (e) Towels, Napkins and hand kerchiefs | 40-60 | 12" - 21" | 10.00 | |
| | | 22" - 28" | 18.00 | |
| | | 29" - 36" | 21.00 | |
| | | 37" - 60" | 25.00 | |

Note: For design work or chowkli (checks) 1/3 of the above rates be paid extra

Category – II Weaving – Powerloom:

| (1) <u>Sarees:</u> | Width | Counts | Rates per Mtr. | |
|---|---|---|---|---|
| *Plain with border:* | 48" - 54" | 40 | 16.00 | |
| | Cms (121.92-137.16) | | | |
| | 48" - 54" | 60 | 20.00 | |
| | Cms (121.92-137.16) | | | |
| | 48" -54" | 80 | 24.00 | |
| | Cms (121.92-137.16) | | | |
| | 48" - 54" | 80 -120 | 32.00 | |
| | Cms (121.92-137.16) | | | |
| *(2) Other than sarees* | Width | Counts | Rate per Mtr. | |
| 20's/10's (Coating) | 28" | 36-40 (71.12 Cms) | 4.00 | |
| Reeds: 20's/20's (shirting) | | | 4.00 | |
| 60'/64' (shirting) | | | 6.00 | |
| 52 to 56 Reeds (checks) | 30" | (76.2 Cms) | 8.00 | |
| 60/64(Checks) | | | 9.00 | |
| Grey Cloth (60 CTS) | | | 6.00 | |
| 34/40(plain) | | | 6.00 | |
| N.B: For Dhabi work, 1/10 of above rates be paid extra | | | | |

**Category - III: Warping (Both Handloom and Powerloom)**

| *Length* | *Width* | *Counts* | *Rate* | |
|---|---|---|---|---|
| 1) 600 Yards or 546 Mtrs | 30" or 76.2 Cms | 20 - 30 | 180.00 | |
| 2) 600 Yards or 546 Mtrs | 30"- 54" or 76.2-137.16 Cms | 20 -30 | 250.00 | VDA @ 19.62 per Day. |
| 3) 600 Yards or 546 Mtrs | 30"-54" 5 76.2-137.16 Cms | 40 - 60 | 590.00 | |
| 4) 600 Yards or 546 Mtrs | 30"-54" or 76.2-137.16 Cms | 80 - 120 | 1100.00 | |

**<u>Category - IV : Dye work</u>**

| | Rate |
|---|---|
| 1) With bleaching - per bundle of 4.5. Kgs | 24.00 |
| 2) Non bleaching - per bundle of 4.5 Kgs | 22.00 |
| 3) VAT colouring - per bundle of 4.5 Kgs | 55.00 |

**Category - V: (A) Pern Winding (By hand)**

| Counts | Rate | |
|---|---|---|
| 1) 20 - 30 | 8.00 Per Knot | VDA @ 19.62 per Day |
| 2) 40 - 60 | 13.00 Per Knot | |
| 3) 60 - 80 | 17.00 Per Knot | |
| 4) 80 - 120 Counts | 20.00Per Knot | |

**Category - V : (B) Pern Winding / Reeling (By machine)**

| Counts | Rate |
|---|---|
| 1) 20 - 30 | 5.00 Per Knot |

| | | | |
|---|---|---|---|
| 2) 40 – 60 | 6.00 Per Knot | | |
| 3) 60 -80 | 10.00 Per Knot | | |
| 4) 80 - 120 | 11.00 Per Knot | | |
| Category – VI: Folder | Rs. 9.00 | | 100.00 (8 hours of work) |
| VII. Office Staff | | | |
| | | Per Month (Rs.) | Per Day (Rs.) |
| 1) Supervisor | Basic | 10950.00 | 421.15 |
| | VDA | 510.00 | 19.62 |
| | Total | 11460.00 | 440.77 |
| 2) Accountant | Basic | 9900.00 | 380.76 |
| 3) Cashier | VDA | 510.00 | 19.62 |
| 4) Typist / Data Entry Operator | Total | 10410.00 | 400.38 |
| 5) Clerk | | | |
| 6) Watchman, Hamali | Basic | 9300.00 | 357.69 |
| | VDA | 510.00 | 19.62 |
| | Total | 9810.00 | 377.31 |

V.D.A : In addition to the basic wages, all Category of Employees in the state shall be paid V.D.A. at the rate of 4 Paise per point over and above 6643 points.

<u>ಅನುಬಂಧ-06</u>

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಫಲಾನುಭವಿಗಳಿಗೆ ನೀಡುವ ಸೌಲಭ್ಯಗಳು

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರ್ಣಗೊಳಿಸಿದ ಫಲಾನುಭವಿಗೆ ಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಖುರ್ಚಿ ಮರುಪಾವತಿ ಸೌಲಭ್ಯ
5. ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಚಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಬಿತರಿಗೆ
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಎರಡು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|
| | ಗಂಡು | ಹೆಣ್ಣು |
| ನರ್ಸರಿ | 3,000 | 4,000 |
| 1 ರಿಂದ 4ನೇ ತರಗತಿ | 3,000 | 4,000 |
| 5 ರಿಂದ 8ನೇ ತರಗತಿ | 5,000 | 6,000 |
| 9 ಹಾಗೂ 10ನೇ ತರಗತಿ | 10,000 | 11,000 |
| ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| ಐಟಿಐ | 12,000 | 15,000 |
| ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| ಪ್ರತಿ ವರ್ಷಕ್ಕೆ | 20,000 | 25,000 |
| ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| ಪ್ರತಿ ವರ್ಷಕ್ಕೆ | 25,000 | 30,000 |

| | | |
|---|---|---|
| ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| ಪ್ರತಿ ವರ್ಷಕ್ಕೆ | 40,000 | 50,000 |
| ಡಿಪ್ಲೋಮಾ | 15,000 | 20,000 |
| ಎಂ.ಟೆಕ್ / ಎಂ.ಇ | 30,000 | 35,000 |
| ಎಂ.ಡಿ (ವೈದ್ಯಕೀಯ) | 45,000 | 55,000 |
| ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. ವೈದ್ಯಕೀಯ ಸಹಾಯಧನ (ಶ್ರಮಿಕ ಆರೋಗ್ಯ ಭಾಗ್ಯ): ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಬಿತರಿಗೆ ರೂ.300/- ರಿಂದ ರೂ.10,000/-ವರೆಗೆ
13. ಅಪಘಾತ ಪರಿಹಾರ: ಮರಣ ಹೊಂದಿದ್ದಲ್ಲಿ ರೂ.5,00,000/-, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ ರೂ.2,00,000/- ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/-
14. ಪ್ರಮುಖ ವೈದ್ಯಕೀಯ ಚಿಕಿತ್ಸೆ ಸಹಾಯಧನ (ಶ್ರಮಿಕ ಚಿಕಿತ್ಸಾ ಭಾಗ್ಯ): ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮಾ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯುಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯಾ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಷನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ ರೂ.2,00,000/-ವರೆಗೆ
15. ಮದುವೆ ಸಹಾಯಧನ (ಗೃಹ ಲಕ್ಷ್ಮಿ ಬಾಂಡ್): ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ ರೂ.50,000/-
16. LPG ಸಂಪರ್ಕ ಸೌಲಭ್ಯ (ಶ್ರಮಿಕ ಅನಿಲ ಭಾಗ್ಯ): ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟವ್
17. ಬಿಎಂಟಿಸಿ ಬಸ್ ಪಾಸ್ ಸೌಲಭ್ಯ: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ಹಾಸ್ಟೆಲ್‌ನಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. ಕೆಎಸ್‌ಆರ್‌ಟಿಸಿ ಬಸ್ ಪಾಸ್ ಸೌಲಭ್ಯ: ರಾಜ್ಯಾದ್ಯಂತ ವಿದ್ಯಾಸ್ಥಾನಗಳಲ್ಲಿ ಓದುತ್ತಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ
19. ತಾಯಿ ಮಗು ಸಹಾಯ ಹಸ್ತ: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/- ಗಳ ಸಹಾಯಧನ.

## ಕಾರ್ಖಾನೆಗಳ ಕಾಯ್ದೆಯಡಿಯಲ್ಲಿ ಕಾರ್ಮಿಕರಿಗೆ ದೊರಕುವ ಸೌಲಭ್ಯಗಳು

ಕಾರ್ಖಾನೆಯಲ್ಲಿ ಕೆಲಸ ನಿರ್ವಹಿಸುವ ಎಲ್ಲಾ ಕಾರ್ಮಿಕರ ಸುರಕ್ಷತೆ ಮತ್ತು ಆರೋಗ್ಯವನ್ನು ಕಾಪಾಡಿಕೊಳ್ಳುವುದರ ಜೊತೆಗೆ ಕೆಲಸದ ಅವಧಿ, ವಾರದ ರಜೆ, ಹೆಚ್ಚುವರಿ ಕೆಲಸಕ್ಕೆ ದ್ವಿಗುಣ ವೇತನ, ರಜೆ ಸಂಬಳ ಮತ್ತು ಈ ಕೆಳಕಂಡ ಕಲ್ಯಾಣ ಸೌಲಭ್ಯಗಳನ್ನು ಕೆಲಸಗಾರರ ಸಂಖ್ಯೆಗೆ ಅನುಗುಣವಾಗಿ ದೊರಕುತ್ತದೆ.

- ಕುಡಿಯುವ ನೀರು
- ಪ್ರಥಮ ಚಿಕಿತ್ಸೆ
- ಶೌಚಾಲಯ
- ಬಾಲವಾಡಿ (30 ಕ್ಕಿಂತ ಹೆಚ್ಚು ಮಹಿಳಾ ಕಾರ್ಮಿಕರು ಇದ್ದಲ್ಲಿ)
- ಊಟದ ಕೊಠಡಿ (150 ಕ್ಕಿಂತ ಹೆಚ್ಚು ಹೆಚ್ಚು ಕಾರ್ಮಿಕರು ಇದ್ದಲ್ಲಿ)
- ಉಪಾಹಾರ ಗೃಹ (250 ಕ್ಕಿಂತ ಹೆಚ್ಚು ಹೆಚ್ಚು ಕಾರ್ಮಿಕರು ಇದ್ದಲ್ಲಿ)
- ಕಲ್ಯಾಣಾಧಿಕಾರಿ (500 ಕ್ಕಿಂತ ಹೆಚ್ಚು ಹೆಚ್ಚು ಕಾರ್ಮಿಕರು ಇದ್ದಲ್ಲಿ)
- ಆಂಬ್ಯುಲೆನ್ಸ್ ಕೊಠಡಿ (500 ಕ್ಕಿಂತ ಹೆಚ್ಚು ಹೆಚ್ಚು ಕಾರ್ಮಿಕರು ಇದ್ದಲ್ಲಿ)
- ಆಂಬ್ಯುಲೆನ್ಸ್ ವಾಹನ (500 ಕ್ಕಿಂತ ಹೆಚ್ಚು ಹೆಚ್ಚು ಕಾರ್ಮಿಕರು ಇದ್ದಲ್ಲಿ)
- ವೈದ್ಯರು ಮತ್ತು ಅರೆವೈದ್ಯಕೀಯ ಸಿಬ್ಬಂದಿಗಳು (500 ಕ್ಕಿಂತ ಹೆಚ್ಚು ಹೆಚ್ಚು ಕಾರ್ಮಿಕರು ಇದ್ದಲ್ಲಿ)
- ಸುರಕ್ಷತಾಧಿಕಾರಿ (1000 ಕ್ಕಿಂತ ಹೆಚ್ಚು ಹೆಚ್ಚು ಕಾರ್ಮಿಕರು ಇದ್ದಲ್ಲಿ)

**ಕರ್ನಾಟಕ ಸರ್ಕಾರ**

ಸಂಖ್ಯೆ: ಇ–ಕಾಇ 105 ಎಲ್‌ಇಟಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 19/03/2020

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ **ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)** ಇವರ **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1677ಕ್ಕೆ** ಉತ್ತರ ಸಲ್ಲಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ **ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)** ಇವರ **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1677ಕ್ಕೆ** ಉತ್ತರ ಸಲ್ಲಿಸುವ ಕುರಿತು ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

*(ಡಿ. ಧನಂಜಯ)*
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1685 |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) |
| ಉತ್ತರಿಸಬೇಕಾದ ದಿನಾಂಕ | 19–03–2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಹಾಸನ ಜಿಲ್ಲಾ ವ್ಯಾಪ್ತಿಯ ಹಾಸನ ತಾ. ದುದ್ದ ಸಮುದಾಯ ಆಸ್ಪತ್ರೆಯ ದುರಸ್ಥಿ ಮತ್ತು ನವೀಕರಣ, ಮೊಸಳೆಹೊಸಳ್ಳಿ ಚನ್ನರಾಯಪಟ್ಟಣ ತಾ, ದಂಡಿಗನಹಳ್ಳಿ ಹೋಬಳಿ ಉದಯಪುರ ಸಮುದಾಯ ಆಸ್ಪತ್ರೆ ಹಾಗೂ ಹೊಳೆನರಸೀಪುರ ತಾ. ಪಡುವಲಹಿಪ್ಪೆ ಸಮುದಾಯ ಆಸ್ಪತ್ರೆಯ ದುರಸ್ಥಿ ಮತ್ತು ನವೀಕರಣ ಕಾಮಗಾರಿಳನ್ನು 2018–19ನೇ ಸಾಲಿನ ಲೋಕೋಪಯೋಗಿ ಇಲಾಖೆ, ಹಾಸನ ವೃತ್ತದ ದರಸೂಚಿಯನ್ವಯ ಒಟ್ಟು ರೂ 220.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳುವ ಪ್ರಸ್ತಾವನೆಗೆ ಪ್ರಸಕ್ತ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆಯಡಿ ಲಭ್ಯವಿರುವ ಅನುದಾನಕ್ಕೆ ಅನುಗುಣವಾಗಿ ಈಗಾಗಲೇ ಕ್ರಿಯಾ ಯೋಜನೆಯು ಅನುಮೋದನೆಯಾಗಿದ್ದು, ಕಾಮಗಾರಿಗಳ ಪ್ರಸ್ತಾವನೆಯನ್ನು ಅನುಮೋದನೆಗಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರುರವರಿಗೆ ದಿನಾಂಕ:24.12.2019ರಲ್ಲಿ ಸಲ್ಲಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲಾ ವ್ಯಾಪ್ತಿಯ(1) ಹಾಸನ ತಾಲ್ಲೂಕು ದುದ್ದ ಸಮುದಾಯ ಆರೋಗ್ಯ ಕೇಂದ್ರ, (2) ಚನ್ನರಾಯಪಟ್ಟಣ ತಾಲ್ಲೂಕು ಮೊಸಳೆಹೊಸಳ್ಳಿ (3) ಉದಯಪುರ, ಸಮುದಾಯ ಆರೋಗ್ಯ ಕೇಂದ್ರ, ಹೊಳೆನರಸೀಪುರ ತಾಲ್ಲೂಕಿನ ಪಡುವಲಹಿಪ್ಪೆ ಸಮುದಾಯ ಆರೋಗ್ಯ ಕೇಂದ್ರಗಳ ದುರಸ್ಥಿ ಮತ್ತು ಅಭಿವೃದ್ಧಿ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು 2018–19 ಸಾಲಿನ ಲೋಕೋಪಯೋಗಿ ಇಲಾಖೆ, ಹಾಸನ ವೃತ್ತದ ದರ ಸೂಚಿಯನ್ವಯ ತಲಾ ರೂ. 55.00 ಲಕ್ಷಗಳಂತೆ ಒಟ್ಟು ರೂ. 220.00 ಲಕ್ಷಗಳ ಅಂದಾಜು ಪಟ್ಟಿಯನ್ನು ಆಯುಕ್ತರಿಗೆ ಸಲ್ಲಿಸಿರುತ್ತಾರೆ. |
| ಆ | ಹಾಗಿದ್ದಲ್ಲಿ, ಹಾಸನ ತಾ. ದುದ್ದ ಸಮುದಾಯ ಆಸ್ಪತ್ರೆಯ ಮೊಸಲೆಹೊಸಳ್ಳಿ ಸಮುದಾಯ ಆಸ್ಪತ್ರೆ ಚನ್ನರಾಯಪಟ್ಟಣ ತಾ.ದಂಡಿಗನಹಳ್ಳಿ ಹೋಬಳಿ ಉದಯಪುರ ಸಮುದಾಯ ಆಸ್ಪತ್ರೆ ಹಾಗೂ ಹೊಳೆನರಸೀಪುರ ತಾ. ಪಡುವಲಹಿಪ್ಪೆ ಸಮುದಾಯ ಆಸ್ಪತ್ರೆಯ ದುರಸ್ಥಿ ಮತ್ತು ನವೀಕರಣ ಕಾಮಗಾರಿಗಳಿಗಾಗಿ ರೂ.220.00 ಗಳ ಅನುದಾನವನ್ನು ಬಿಡುಗಡೆಗೊಳಿಸಲು ಸರ್ಕಾರಕ್ಕೆ ಇರುವ ತೊಂದರೆಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಸದರಿ ಪ್ರಸ್ತಾವನೆಯಲ್ಲಿ ಕಾಮಗಾರಿಗಳ ವೆಚ್ಚಗಳ ಬಗ್ಗೆ, ಸೂಕ್ತ ಲೆಕ್ಕ ಶೀರ್ಷಿಕೆ ಹಾಗೂ ಅನುದಾನದ ಲಭ್ಯತೆ ಬಗ್ಗೆ ಮಾಹಿತಿ ಲಭ್ಯವಿಲ್ಲದ ಕಾರಣ ದಿನಾಂಕ: 04–03–2020 ರಂದು ಮುಖ್ಯ ಅಭಿಯಂತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇಂಜಿನಿಯರ್ ವಿಭಾಗ, ಬೆಂಗಳೂರು ಇವರು ಪ್ರಸಕ್ತ ಸಾಲಿನಲ್ಲಿ ಕಾಮಗಾರಿ ಕೈಗೊಳ್ಳಲು ಕ್ರಿಯಾ ಯೋಜನೆಯಲ್ಲಿ ಅಳವಡಿಸಿಕೊಂಡಿರುವ ಬಗ್ಗೆ ಹಾಗೂ ಯಾವ ಲೆಕ್ಕಶೀರ್ಷಿಕೆಯಡಿಯಲ್ಲಿ ಹೆಚ್ಚುವರಿ ಅನುದಾನ ಲಭ್ಯವಿದೆ ಎಂಬ ಮಾಹಿತಿಯೊಂದಿಗೆ ಮರು ಪ್ರಸ್ತಾವನೆ ಸಲ್ಲಿಸುವಂತೆ ಆಯುಕ್ತರು ಅಂದಾಜು ಪಟ್ಟಿಯನ್ನು ಮುಖ್ಯ ಅಭಿಯಂತರರಿಗೆ ಹಿಂತಿರುಗಿಸಿರುವುದಾಗಿ ತಿಳಿದು ಬಂದಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ಆಇ 03 ಟಿಎಫ್‌ಪಿ 2018 ದಿನಾಂಕ: 14–5–2018 ರ ಪ್ರಕಾರ ಲಭ್ಯವಿರುವ ಅನುದಾನದಲ್ಲಿ ಒಂದು ಕಾಮಗಾರಿಗೆ ಅಂದಾಜು ರೂ. 2.5 ಕೋಟಿಗಳವರೆಗಿನ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಅಧಿಕಾರವನ್ನು ಇಲಾಖಾ ಮುಖ್ಯಸ್ಥರಿಗೆ ಪ್ರತ್ಯಾಯೋಜಿಸಲಾಗಿದ್ದು, ಸರ್ಕಾರಕ್ಕೆ ಇದರಿಂದ ಯಾವುದೇ ತೊಂದರೆ ಇರುವುದಿಲ್ಲ. |

ಆಕುಕ 35 ಎಸ್.ಎಂ.ಎಂ. 2020

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 01 ಇಜಿಒವಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು,ದಿನಾಂಕ: 18.03.2020

(12) 4/S
19/3/2020

ಇಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಉನ್ನತ ಶಿಕ್ಷಣ ಇಲಾಖೆ
ಬಹುಮಹಡಿಗಳ ಕಟ್ಟಡ, ಬೆಂಗಳೂರು

**ರವರಿಗೆ,**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ/ಪರಿಷತ್,
ವಿಧಾನಸೌಧ, ಬೆಂಗಳೂರು

**ಮಾನ್ಯರೇ,**

ವಿಷಯ: **ಕರ್ನಾಟಕ ವಿಧಾನ ಸಭೆ ಸದಸ್ಯರಾದ ಮಾನ್ಯ ಶ್ರೀ. ಆನಂದ ಸಿದ್ದು ನ್ಯಾಮಗೌಡ ರವರ ಕೇಳಿದ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 2536ಕ್ಕೆ ಉತ್ತರ ಸಲ್ಲಿಸುವ ಬಗ್ಗೆ**

*****

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಮಾನ್ಯ ಶ್ರೀ. **ಆನಂದ ಸಿದ್ದು ನ್ಯಾಮಗೌಡ ರವರ ಕೇಳಿದ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 2536ಕ್ಕೆ ಉತ್ತರ** 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿ ಕೊಡಲಾಗಿದೆ.

ತಮ್ಮ ವಿಶ್ವಾಸಿ,

(ಎನ್.ಆರ್.ಎರೆಕುಪ್ಪಿ)
ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ
ಸರ್ಕಾರದ ಉಪ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2536

ಸದಸ್ಯರ ಹೆಸರು : ಶ್ರೀ. ಆನಂದ ಸಿದ್ದು ನ್ಯಾಮಗೌಡ

ಉತ್ತರಿಸಬೇಕಾದ ದಿನಾಂಕ : 19-03-2020

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯ ಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್‌ಟಾಪ್ ನೀಡುವುದು ಸರ್ಕಾರದ ಉತ್ತಮ ಯೋಜನೆಯಾಗಿದ್ದು, ಅದನ್ನು ದ್ವಿತೀಯ ಹಾಗೂ ಅಂತಿಮ ವರ್ಷದ ವಿದ್ಯಾರ್ಥಿಗಳಿಗೆ ಉಚಿತವಾಗಿ ಲ್ಯಾಪ್‌ಟಾಪ್ ವಿತರಣೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್‌ಟಾಪ್ ನೀಡುವ ಯಾವುದೇ ಯೋಜನೆ ಸರ್ಕಾರದಲ್ಲಿಲ್ಲ.<br><br>ಆದರೇ, ಉನ್ನತ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ,2019-20 ನೇ ಸಾಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರಥಮ ವರ್ಷದ ಪದವಿಗೆ ಪ್ರವೇಶಾತಿ ಪಡೆದ ವಿದ್ಯಾರ್ಥಿಗಳಿಗೆ ಮಾತ್ರ ಲ್ಯಾಪ್‌ಟಾಪ್ ಗಳನ್ನು ವಿತರಿಸಲು ಕ್ರಮಕೈಗೊಳ್ಳಲಾಗಿದೆ. ದ್ವಿತೀಯ ಹಾಗೂ ಅಂತಿಮ ವರ್ಷದ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್‌ಟಾಪ್ ವಿತರಣೆಯ ಯೋಜನೆಯು ಸರ್ಕಾರದ ಮುಂದಿರುವುದಿಲ್ಲ. |
| (ಆ) | ಇದ್ದಲ್ಲಿ, ಕೈಗೊಂಡಿರುವ ಕ್ರಮವೇನು; (ವಿವರ ನೀಡುವುದು) | ಉದ್ಭವಿಸುವುದಿಲ್ಲ. |
| (ಇ) | ಸ್ನಾತಕೋತ್ತರ ಪದವಿ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಿಸುವ ಯೋಜನೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೇ, ಕೈಗೊಂಡ ಕ್ರಮವೇನು? | ಇಲ್ಲ. |

**Ed01egov2020**

(ಡಾ.ಸಿ.ಎನ್. ಅಶ್ವತ್ಥನಾರಾಯಣ)

ಮಾನ್ಯ ಉಪ ಮುಖ್ಯ ಮಂತ್ರಿಗಳು

ಉನ್ನತ ಶಿಕ್ಷಣ,ಮಾಹಿತಿ ತಂತ್ರಜ್ಞಾನ,ಜೈವಿಕ ತಂತ್ರಜ್ಞಾನ,ವಿಜ್ಞಾನ ಮತ್ತು ತಂತ್ರಜ್ಞಾನ,ಕೌಶಲ್ಯಾಭಿವೃದ್ಧಿ,ಉದ್ಯಮ ಶೀಲತೆ ಹಾಗೂ ಜೀವನೋಪಾಯ ಇಲಾಖೆ

ಕರ್ನಾಟಕ ಸರ್ಕಾರ

197

ಸಂಖ್ಯೆ: ಆಕುಕ 57 ಎಸ್‌ಬಿವಿ 2020.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:19.03.2020.

19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ,

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:-** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂಖ್ಯೆ: 2515ಕ್ಕೆ ಉತ್ತರ ನೀಡುವ ಬಗ್ಗೆ.

*****

ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂಖ್ಯೆ: 2515ಕ್ಕೆ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಪದ್ಮ ವಿ) 19/3/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1 ಮತ್ತು 2)

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2515 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ) |
| ಉತ್ತರಿಸಬೇಕಾದ ದಿನಾಂಕ | 19.03.2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | 2018-19, 2019-20ನೇ ಸಾಲಿನಲ್ಲಿ ರಾಜ್ಯದ ಆರೋಗ್ಯ ಕೇಂದ್ರಗಳಿಗೆ ಆಂಬ್ಯುಲೆನ್ಸ್ ವಾಹನ ವಿತರಣೆ ಮಾಡಲಾಗಿದೆಯೇ; | ಇಲ್ಲ. |
| ಆ | ಇದ್ದಲ್ಲಿ, ಈ ಎರಡು ವರ್ಷಗಳಲ್ಲಿ ಒದಗಿಸಿದ ಆಂಬ್ಯುಲೆನ್ಸ್‌ಗಳ ಮಾಹಿತಿ ನೀಡುವುದು; | ಉದ್ಭವಿಸುವುದಿಲ್ಲ. |
| ಇ | ಅತೀ ಹಿಂದುಳಿದ ತಾಲ್ಲೂಕುಗಳಾದ ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕಗಳಿಗೆ ಈ ಸಾಲಿನಲ್ಲಿ ಆಂಬ್ಯುಲೆನ್ಸ್ ನೀಡದಿರಲು ಕಾರಣವೇನು; | 2018-19, 2019-20ನೇ ಸಾಲಿನಲ್ಲಿ ಆಂಬ್ಯುಲೆನ್ಸ್ ವಾಹನಗಳನ್ನು ಖರೀದಿಸಿರುವುದಿಲ್ಲ. |
| ಈ | ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕುಗಳಿಗೆ ಆಂಬ್ಯುಲೆನ್ಸ್ ವಾಹನ ಮಂಜೂರಾಗಿದ್ದು ವಾಹನ ನೋಂದಣಿ ಎಲ್ಲಾ ಮಾಡಿದ ನಂತರ ಈ ತಾಲ್ಲೂಕುಗಳಿಗೆ ಆಂಬ್ಯುಲೆನ್ಸ್ ನೀಡದೇ ಬೇರೆಡೆಗೆ ಬದಲಾವಣೆ ಮಾಡಲು ಕಾರಣವೇನು; | 2017-18ನೇ ಸಾಲಿನಲ್ಲಿ ಹೊಸದಾಗಿ ಖರೀದಿಸಲಾದ ಆಂಬ್ಯುಲೆನ್ಸ್ ವಾಹನಗಳನ್ನು ಬಾಗೇಪಲ್ಲಿ ಮತ್ತು ಗುಡಿಬಂಡೆ ಆಸ್ಪತ್ರೆಗಳಿಗೆ ಹಂಚಿಕೆ ಮಾಡಲು ಸಲ್ಲಿಸಿದ್ದ ಪ್ರಸ್ತಾವನೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಬೇರೆಡೆಗೆ ವರ್ಗಾವಣೆ ಮಾಡಲಾಗಿರುತ್ತದೆ. |
| ಉ | ವರ್ಗಾವಣೆ ಮಾಡಿರುವ ಕಾರಣ ಈ ಎರಡು ತಾಲ್ಲೂಕುಗಳಿಗೆ ಅನ್ಯಾಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಊ | ಬಂದಿದ್ದಲ್ಲಿ, ಈ ಅನ್ಯಾಯ ಸರಿಪಡಿಸಲು ಸರ್ಕಾರ ಏನು ಕ್ರಮ ಕೈಗೊಂಡಿದೆ? (ವಿವರ ನೀಡುವುದು) | ಖರೀದಿ ಪ್ರಕ್ರಿಯೆ ಕೈಗೊಂಡಲ್ಲಿ ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕಗಳಿಗೆ ಹಂಚಿಕೆ ಮಾಡಲು ಕ್ರಮ ವಹಿಸಲಾಗುವುದು. |

ಆಕುಕ 57 ಎಸ್‌ಬಿವಿ 2020.

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 01 ಇಜಿಒವಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು,ದಿನಾಂಕ:18.03.2020

(91) 4/5
19/3/2020

ಇಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಉನ್ನತ ಶಿಕ್ಷಣ ಇಲಾಖೆ
ಬಹುಮಹಡಿಗಳ ಕಟ್ಟಡ, ಬೆಂಗಳೂರು

**ರವರಿಗೆ,**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ/ಪರಿಷತ್,
ವಿಧಾನಸೌಧ, ಬೆಂಗಳೂರು

**ಮಾನ್ಯರೇ,**

ವಿಷಯ: **ಕರ್ನಾಟಕ ವಿಧಾನ ಸಭೆ ಸದಸ್ಯರಾದ ಮಾನ್ಯ ಶ್ರೀ. ಮಹಾದೇವ.ಕೆ. ರವರ ಕೇಳಿದ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1920ಕ್ಕೆ ಉತ್ತರ ಸಲ್ಲಿಸುವ ಬಗ್ಗೆ**

*****

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಮಾನ್ಯ ಶ್ರೀ. **ಮಹಾದೇವ.ಕೆ. ರವರ ಕೇಳಿದ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1920ಕ್ಕೆ ಉತ್ತರ** 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿ ಕೊಡಲಾಗಿದೆ.

ತಮ್ಮ ವಿಶ್ವಾಸಿ,

(ಎನ್.ಆರ್.ಎರೆಕುಪ್ಪಿ)
ಆಂತರಿಕ ಆರ್ಥಿಕ ಸಲಹೆಗಾರರು ಹಾಗೂರ
ಸರ್ಕಾರದ ಉಪ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1920

ಸದಸ್ಯರ ಹೆಸರು : ಶ್ರೀ. ಮಹದೇವ ಕೆ.(ಪಿರಿಯಾಪಟ್ಟಣ)

ಉತ್ತರಿಸಬೇಕಾದ ದಿನಾಂಕ : 19-03-2020

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯ ಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರದಿಂದ ಈ ಸಾಲಿನಲ್ಲಿ ಎಷ್ಟು ಪದವಿ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ನೀಡಲಾಗುತ್ತಿದೆ; (ವಿವರ ನೀಡುವುದು) | 2019-20 ನೇ ಸಾಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರಥಮ ವರ್ಷದ ಪದವಿಗೆ ಪ್ರವೇಶಾತಿ ಪಡೆದ ಹಾಗೂ ಕೌಟಂಬಿಕ ವಾರ್ಷಿಕ ಆದಾಯ ರೂ. 2.5 ಲಕ್ಷಗಳಿಗಿಂತ ಕಡಿಮೆ ಇರುವ 109916 ವಿದ್ಯಾರ್ಥಿಗಳಿಗೆ ಮಾತ್ರ ಲ್ಯಾಪ್‌ಟಾಪ್‌ಗಳನ್ನು ವಿತರಿಸಲು ಕ್ರಮಕೈಗೊಳ್ಳಲಾಗಿದೆ. |
| (ಆ) | ಸರ್ಕಾರದಿಂದ ಈ ಸಾಲಿನಲ್ಲಿ ಲ್ಯಾಪ್‌ಟಾಪ್ ಯೋಜನೆಯನ್ನು ಅನುದಾನ ರಹಿತ ಹಾಗೂ ಅನುದಾನ ಸಹಿತ ಕಾಲೇಜುಗಳ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿದೆಯೇ; | ಇಲ್ಲ |
| (ಇ) | ಈಗ ನೀಡುತ್ತಿರುವ ಲ್ಯಾಪ್‌ಟಾಪ್ ಅನ್ನು ಮೊದಲನೇ ವರ್ಷದ ಪದವಿ ವಿದ್ಯಾರ್ಥಿಗಳಿಗೆ ಮಾತ್ರ ನೀಡಿ 2ನೇ ಹಾಗೂ ಅಂತಿಮ ವರ್ಷದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನೀಡದೇ ತಾರತಮ್ಯ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2019-20 ನೇ ಸಾಲಿನಲ್ಲಿ ಪ್ರಥಮ ವರ್ಷದ ಪದವಿಗೆ ಪ್ರವೇಶಾತಿ ಪಡೆದ ಹಾಗೂ ಕೌಟಂಬಿಕ ವಾರ್ಷಿಕ ಆದಾಯ ರೂ. 2.5 ಲಕ್ಷಗಳಿಗಿಂತ ಕಡಿಮೆ ಇರುವ ವಿದ್ಯಾರ್ಥಿಗಳಿಗೆ ಮಾತ್ರ ವಿತರಿಸಲು ಕ್ರಮಕೈಗೊಳ್ಳಲಾಗಿದೆ. ದ್ವಿತೀಯ ಮತ್ತು ಅಂತಿಮ ವರ್ಷದಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಉಚಿತ ಲ್ಯಾಪ್‌ಟಾಪ್ ವಿತರಣೆಯ ಯೋಜನೆಯು ಸರ್ಕಾರದ ಮುಂದಿರುವುದಿಲ್ಲ. |
| (ಈ) | ಹಾಗಿದ್ದಲ್ಲಿ, ಸರ್ಕಾರದ ಲ್ಯಾಪ್‌ಟಾಪ್ ಯೋಜನೆಯ ಪ್ರಯೋಜನವನ್ನು ಪದವಿ ವ್ಯಾಸಂಗ ಮಾಡುತ್ತಿರುವ ಪ್ರತಿ ವಿದ್ಯಾರ್ಥಿಗಳಿಗೆ ಒದಗಿಸಲು ಸರ್ಕಾರಕ್ಕಿರುವ ತೊಂದರೆಗಳೇನು; ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

Ed01eGov2020

(ಡಾ.ಸಿ.ಎನ್. ಅಶ್ವಥನಾರಾಯಣ)

ಮಾನ್ಯ ಉಪ ಮುಖ್ಯ ಮಂತ್ರಿಗಳು

ಉನ್ನತ ಶಿಕ್ಷಣ,ಮಾಹಿತಿ ತಂತ್ರಜ್ಞಾನ,ಜೈವಿಕ ತಂತ್ರಜ್ಞಾನ,ವಿಜ್ಞಾನ ಮತ್ತು ತಂತ್ರಜ್ಞಾನ,ಕೌಶಲ್ಯಾಭಿವೃದ್ಧಿ,ಉದ್ಯಮ ಶೀಲತೆ ಹಾಗೂ ಜೀವನೋಪಾಯ ಇಲಾಖೆ

**ಕರ್ನಾಟಕ ಸರ್ಕಾರ**

208

ಸಂಖ್ಯೆ: ಆಕುಕ 46 ಎಸ್‌ಬಿವಿ 2020.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:19.03.2020.

U/S 19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ,

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:-** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ (ಮಂಗಳೂರು ನಗರ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ:1496ಕ್ಕೆ ಉತ್ತರ ಕಳುಹಿಸುವ ಬಗ್ಗೆ.

*****

ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ (ಮಂಗಳೂರು ನಗರ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ:1496ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

19/3/2020
**(ಪದ್ಮ ವಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1 ಮತ್ತು 2)

ಕರ್ನಾಟಕ ವಿಧಾನಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1496 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ) |
| ಉತ್ತರಿಸಬೇಕಾದ ದಿನಾಂಕ | 19.03.2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಜಿಲ್ಲಾ ಸರ್ಕಾರಿ ಲೇಡಿಗೋಶನ್ ಹಾಸ್ಪಿಟಲ್ ಮಂಗಳೂರು ಇದನ್ನು ಮೇಲ್ದರ್ಜೆಗೇರಿಸುವುದು ಹಾಗೂ ಸಿಬ್ಬಂದಿ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಜಿಲ್ಲಾ ಸರ್ಕಾರಿ ಲೇಡಿಗೋಶನ್ ಆಸ್ಪತ್ರೆಯನ್ನು ಮೇಲ್ದರ್ಜೆಗೇರಿಸಲು ಹೆಚ್ಚುವರಿಯಾಗಿ 60 ಹಾಸಿಗೆಯುಳ್ಳ ತಾಯಿ ಮತ್ತು ಮಕ್ಕಳ ವಿಭಾಗವನ್ನು ನಿರ್ಮಾಣ ಮಾಡಲಾಗುತ್ತಿದೆ. ಪ್ರಸ್ತುತ 272 ಹಾಸಿಗೆಗಳ ಸಾಮರ್ಥ್ಯವಿದ್ದು, ತಿಂಗಳಿಗೆ ಸುಮಾರು 476 ಹೆರಿಗೆ ಪ್ರಕರಣಗಳು ಸಂಭವಿಸುತ್ತಿವೆ. ಇದಕ್ಕೆ ಅನುಗುಣವಾಗಿ ಸಿಬ್ಬಂದಿಯನ್ನು ನೀಡಲಾಗಿದೆ. ಆಸ್ಪತ್ರೆಯಲ್ಲಿ ಸಿಬ್ಬಂದಿ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ | ಹಾಗಿದ್ದಲ್ಲಿ, ಖಾಲಿ ಇರುವ ಹುದ್ದೆಗಳನ್ನು ಭರ್ತಿಗೊಳಿಸಲು ಕೈಗೊಂಡಿರುವ ಕ್ರಮಗಳೇನು? | ಗ್ರೂಪ್ ಡಿ. ನೌಕರರ ಖಾಯಂ ಹುದ್ದೆಗಳು ಖಾಲಿಯಿದ್ದು, ರಾಷ್ಟ್ರೀಯ ಆರೋಗ್ಯ ಅಭಿಯಾನದಿಂದ ಹೆಚ್ಚುವರಿಯಾಗಿ ಈ ಹುದ್ದೆಗಳನ್ನು ನೀಡಲಾಗಿದೆ. ಖಾಲಿ ಇರುವ ಇನ್ನುಳಿದ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮದ ಬಗ್ಗೆ ಅನುಬಂಧದಲ್ಲಿ ನೀಡಲಾಗಿದೆ. |

ಆಕುಕ 46 ಎಸ್‌ಬಿವಿ 2020.

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಸಂ: 1496 [illegible]

ತಜ್ಞ ವೈದ್ಯರನ್ನು "On Call Basis" ಮೇಲೆ ತೆಗೆದುಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ:ಆಕುಕ 178 ಹೆಚ್‌ಎಸ್‌ಹೆಚ್ 2011 ದಿನಾಂಕ: 20-05-2016 ರಲ್ಲಿ ಆಯಾ ಜಿಲ್ಲಾ ಆರೋಗ್ಯ & ಕುಟುಂಬ ಕಲ್ಯಾಣಾಧಿಕಾರಿಗಳು ಜಿಲ್ಲಾಧಿಕಾರಿಗಳ ಸಹಮತಿ ಪಡೆದು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಆಕುಕ 297 ಹೆಚ್‌ಎಸ್‌ಹೆಚ್ 2015, ದಿನಾಂಕ:22-04-2016 ಹಾಗೂ ಆಕುಕ 359 ಹೆಚ್‌ಎಸ್‌ಹೆಚ್ 2016, ದಿನಾಂಕ:01-08-2016ರಲ್ಲಿ ಅನುಮತಿ ನೀಡಲಾಗಿದೆ. ಎಂ.ಬಿ.ಬಿ.ಎಸ್ ಪದವಿ ಹೊಂದಿದ ವೈದ್ಯ ಅಭ್ಯರ್ಥಿಗಳು ಲಭ್ಯವಿಲ್ಲದೆ ಇದ್ದ ಪಕ್ಷದಲ್ಲಿ ಸದರಿ ಹುದ್ದೆಯ ಎದುರು ಗುತ್ತಿಗೆ ಆಯುಷ್ ವೈದ್ಯರನ್ನು ಆಯಾ ಜಿಲ್ಲಾ ಆರೋಗ್ಯ & ಕುಟುಂಬ ಕಲ್ಯಾಣಾಧಿಕಾರಿಗಳು ಜಿಲ್ಲಾಧಿಕಾರಿಗಳ ಸಹಮತಿ ಪಡೆದು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರವು ದಿನಾಂಕ:06.02.2020ರ ಕರ್ನಾಟಕ ರಾಜ್ಯ ಪತ್ರದಲ್ಲಿ ಕರಡು ನಿಯಮಗಳನ್ನು ಹೊರಡಿಸಿದೆ.

ವಿಶೇಷ ನೇಮಕಾತಿ ಸಮಿತಿಯಿಂದ ದಿನಾಂಕ:09.09.2019 ರಲ್ಲಿ 977 ಶುಶ್ರೂಷಕರ ಹುದ್ದೆಗಳಿಗೆ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿದ್ದು, ಕೌನ್ಸಿಲಿಂಗ್ ಮೂಲಕ ಸ್ಥಳ ನೇಮಕಾತಿ ಮಾಡಿ ಈಗಾಗಲೇ ನೇಮಕಾತಿ ಆದೇಶಗಳನ್ನು ಜಾರಿ ಮಾಡಲಾಗಿರುತ್ತದೆ.

ವಿಶೇಷ ನೇಮಕಾತಿ ಸಮಿತಿಯ ಅಧಿಸೂಚನೆ ಸಂಖ್ಯೆ ಎಸ್‌ಆರ್‌ಸಿ/21/2017-18 ದಿನಾಂಕ 20.06.2017 ರನ್ವಯ ಶುಶ್ರೂಷಕರು (ಡಿಪ್ಲಮೋ)-889 ಹುದ್ದೆಗಳಿಗೆ ದಿನಾಂಕ:27.02.2020 ರಂದು ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗಿದ್ದು, ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಆಕ್ಷೇಪಣೆಗಳನ್ನು ಪರಿಶೀಲಿಸಿದ ನಂತರ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿ ಸದರಿ ಹುದ್ದೆಗಳನ್ನು ನಿಯಮಾನುಸಾರ ಭರ್ತಿಮಾಡಲಾಗುವುದು.

ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಖಾಲಿ ಇರುವ 293 ವಿವಿಧ ವೃಂದದ ಅರೆ-ವೈದ್ಯಕೀಯ ಹುದ್ದೆಗಳನ್ನು ಭರ್ತಿಮಾಡಲು ಕ್ರಮ ಕೈಗೊಳ್ಳಲಾಗುತ್ತಿದ್ದು, ವಿಶೇಷ ನೇಮಕಾತಿ ನಿಯಮಗಳನ್ನು ಜಾರಿ ಮಾಡಿದ ನಂತರ ಅಧಿಸೂಚನೆ ಹೊರಡಿಸಿ ನೇಮಕಾತಿ ಪ್ರಕ್ರಿಯೆಯನ್ನು ಚಾಲನೆಗೊಳಿಸಲಾಗುವುದು.

ಉಳಿಕೆ ಮೂಲ ವೃಂದದಲ್ಲಿ ಖಾಲಿ ಇರುವ ಫಾರ್ಮಸಿಸ್-400, ಕ್ಷ-ಕಿರಣ ತಂತ್ರಜ್ಞರು-08 ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರ-150 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಇನ್ನುಳಿದಂತೆ ಹೊರಗುತ್ತಿಗೆ ಆಧಾರದ ಮೇಲೆ ಫಾರ್ಮಸಿಸ್ಟ್-400 ಮತ್ತು ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರು-150 ಹುದ್ದೆಗಳನ್ನು ಭರ್ತಿಮಾಡಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಿಯಮಾನುಸಾರ ಟೆಂಡರ್ ಕರೆದು ಹೊರಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡುವಂತೆ ಕ್ರಮ ಕೈಗೊಳ್ಳಲು ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಗೆ ಸೂಚಿಸಲಾಗಿದೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಉಳಿಕೆ ಮೂಲ ವೃಂದದಲ್ಲಿ ಖಾಲಿ ಇರುವ ವಿವಿಧ ವೃಂದದ 4981 ಅರೆ-ವೈದ್ಯಕೀಯ ಹುದ್ದೆಗಳನ್ನು ಹಾಗೂ ಫಾರ್ಮಸಿಸ್ಟ್, ಕ್ಷ-ಕಿರಣ ತಂತ್ರಜ್ಞ ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳನ್ನು ಭರ್ತಿಮಾಡಲು ಕ್ರಮ ಕೈಗೊಳ್ಳಲಾಗುತ್ತಿದ್ದು, ಇನ್ನುಳಿದ ಅರೆ-ವೈದ್ಯಕೀಯ ಹುದ್ದೆಗಳಿಗೆ ವಿಶೇಷ ನೇಮಕಾತಿ ನಿಯಮಗಳನ್ನು ಜಾರಿ ಮಾಡಿದ ನಂತರ ನೇಮಕಾತಿ ಪ್ರಕ್ರಿಯೆಗೆ ಚಾಲನೆ ನೀಡಲಾಗುವುದು ಹಾಗೂ ಪದೋನ್ನತಿ ಹುದ್ದೆಗಳನ್ನು ಪದೋನ್ನತಿ ಮೂಲಕ ತುಂಬಲು ಕ್ರಮ ತೆಗೆದುಕೊಳ್ಳಲಾಗಿದೆ.

60

# ಕರ್ನಾಟಕ ಸರ್ಕಾರ

**ಸಂಖ್ಯೆ:** ಅಪಜೀ 50 ಇಎನ್‌ವಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 18.03.2020.

19/3/2020

**ಇಂದ,**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
(ಜೀವಿಪರಿಸ್ಥಿತಿ ಮತ್ತು ಪರಿಸರ),
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ.

**ಇವರಿಗೆ,**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ. ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1802 ಕ್ಕೆ ಉತ್ತರ ಕಳುಹಿಸುತ್ತಿರುವ ಬಗ್ಗೆ.

**ಉಲ್ಲೇಖ:** ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1802/ 2020, ದಿನಾಂಕ: 05.03.2020.

*****

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಿತ ಪತ್ರಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ. ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1802 ಕ್ಕೆ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆಯ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

18/3/2020
**(ಮುರಳೀಧರ ಎಸ್. ತಳ್ಳಿಕೇರಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ
(ಜೀವಿಪರಿಸ್ಥಿತಿ ಮತ್ತು ಪರಿಸರ)

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1802
2. ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ)
3. ಉತ್ತರಿಸಬೇಕಾದ ದಿನಾಂಕ : 19.03.2020
4. ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

| ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕರಾವಳಿ ವಲಯ ಮ್ಯಾನೇಜ್‌ಮೆಂಟ್ ಪ್ಲ್ಯಾನ್ (CZMP) ಎಂದರೇನು? | ಕೇಂದ್ರ ಸರ್ಕಾರದ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯವು ಅಧಿಸೂಚನೆ ಸಂಖ್ಯೆ: GSR 37(E), ದಿನಾಂಕ: 18.01.2019 ರ ಮೂಲಕ 1991 ಮತ್ತು 2011 ರ ಕರಾವಳಿ ನಿಯಂತ್ರಣ ವಲಯ ಅಧಿಸೂಚನೆಗಳನ್ನು ಅಧಿಕ್ರಮಿಸಿ ಹೊಸ ಕರಾವಳಿ ನಿಯಂತ್ರಣ ವಲಯ ಅಧಿಸೂಚನೆ 2019 ಅನ್ನು ಜಾರಿಗೆ ತಂದಿರುತ್ತದೆ. ಈ ಅಧಿಸೂಚನೆಯ ಅನುಸಾರ ಕರಾವಳಿ ನಿಯಂತ್ರಿತ ಪ್ರದೇಶವನ್ನು ಅಧಿಸೂಚನೆಯ ವ್ಯಾಖ್ಯಾನದ ಅನುಸಾರ ವಿವಿಧ ವಲಯಗಳಾಗಿ ವರ್ಗೀಕರಿಸಿ, ಈ ವಲಯಗಳ ನಿರ್ವಹಣೆ ಮತ್ತು ವಿವಿಧ ಚಟುವಟಿಕೆಗಳನ್ನು ನಿಯಂತ್ರಣ ಮಾಡುವ ಉದ್ದೇಶದಿಂದ ಒಂದು ಯೋಜನೆಯನ್ನು ತಯಾರಿಸಿ ಕೇಂದ್ರ ಸರ್ಕಾರದ ಅನುಮೋದನೆ ಪಡೆದು ಅದರಂತೆ ಅನುಷ್ಠಾನಗೊಳಿಸುವುದನ್ನು ಕಡ್ಡಾಯಗೊಳಿಸಲಾಗಿದೆ. ಈ ಯೋಜನೆಯನ್ನು ಕಡಲ ತೀರ ವಲಯ ನಿರ್ವಹಣಾ ಯೋಜನೆ (Coastal Zone Management Plan - CZMP) ಎಂದು ಕರೆಯಲಾಗುತ್ತದೆ. |
| ಆ) | ಯಾವ ಯಾವ ರಾಜ್ಯದಲ್ಲಿ ಕರಾವಳಿ ನಿಯಂತ್ರಣ ವಲಯ (CZMP) ಜಾರಿಯಲ್ಲಿದೆ; ಎಲ್ಲಾ ರಾಜ್ಯಗಳಿಗೆ (CZMP) ಒಂದೇ ನಿಯಮವಿದೆಯೇ; ಇಲ್ಲವಾದಲ್ಲಿ ಕಾರಣವೇನು? (ವಿವರ ನೀಡುವುದು) | ಕೇಂದ್ರ ಸರ್ಕಾರದ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯವು ಪರಿಸರ (ಸಂರಕ್ಷಣಾ) ಅಧಿನಿಯಮ 1986 ರಡಿಯಲ್ಲಿ ಹೊರಡಿಸಿರುವ 2019ರ ಅಧಿಸೂಚನೆಯು ಕಡಲ ತೀರ ಹೊಂದಿರುವ 9 ರಾಜ್ಯಗಳು ಮತ್ತು 4 ಕೇಂದ್ರಾಡಳಿತ ಪ್ರದೇಶಗಳಿಗೆ ಅನ್ವಯಿಸುತ್ತದೆ (**ವಿವರವನ್ನು ಅನುಬಂಧದಲ್ಲಿ ಲಗತ್ತಿಸಿದೆ**). ಎಲ್ಲಾ ಕಡಲ ತೀರ ರಾಜ್ಯ/ಕೇಂದ್ರಾಡಳಿತ ಪ್ರದೇಶಗಳು ನಿಯಮಾನುಸಾರ ಈ ಅಧಿಸೂಚನೆಯಂತೆ ಕಡಲ ತೀರ ವಲಯ ನಿರ್ವಹಣಾ ಯೋಜನೆಯನ್ನು ತಯಾರಿಸಿ ಕೇಂದ್ರ ಸರ್ಕಾರದಿಂದ ಅನುಮೋದನೆ ಪಡೆದು ಅದರಂತೆ ಅನುಷ್ಠಾನಗೊಳಿಸುವುದು ಶಾಸನಾತ್ಮಕವಾಗಿ ಕಡ್ಡಾಯವಾಗಿರುತ್ತದೆ.<br>ಈ ಹಿಂದೆ 2011ರ CRZ ಅಧಿಸೂಚನೆಯಲ್ಲಿ ಮುಂಬಯಿ ಮಹಾ ಪ್ರಾಂತ್ಯ/ಗೋವಾ ರಾಜ್ಯ /ಕೇರಳ ರಾಜ್ಯಕ್ಕೆ ಕೆಲವು ವಿನಾಯಿತಿಗಳನ್ನು ನೀಡಲಾಗಿತ್ತು. ಆದರೆ, ಪ್ರಸ್ತುತ ಹೊರಡಿಸಿರುವ 2019ರ CRZ ಅಧಿಸೂಚನೆಯಲ್ಲಿ ಎಲ್ಲಾ ರಾಜ್ಯಗಳಿಗೂ ಒಂದೇ ರೀತಿಯ ನಿಯಮವನ್ನು ಜಾರಿಗೆ ತರಲಾಗಿದೆ. |

| ಇ) | ಹಾಗಿದ್ದಲ್ಲಿ, ಕೇರಳ ಮತ್ತು ಗೋವಾ ರಾಜ್ಯಗಳಲ್ಲಿರುವಂತೆ ಕರ್ನಾಟಕದಲ್ಲಿ (CZMP) ನಿಯಮ ತರಲು ಸರ್ಕಾರ ಕೈಗೊಂಡ ಕ್ರಮವೇನು? | 2019ರ CRZ ಅಧಿಸೂಚನೆಯಲ್ಲಿ ಎಲ್ಲಾ ರಾಜ್ಯಗಳಿಗೂ ಒಂದೇ ರೀತಿಯ ನಿಯಮವನ್ನು ಜಾರಿಗೆ ತಂದಿರುವುದರಿಂದ ಇದು ಅನ್ವಯಿಸುವುದಿಲ್ಲ. |
|---|---|---|
| ಈ) | ಗೋವಾ ಮತ್ತು ಕೇರಳದಲ್ಲಿ 50 ಮೀ. ವ್ಯಾಪ್ತಿಗೆ CZMP ಸೀಮಿತವಾಗಿದ್ದು, ಕರ್ನಾಟಕದಲ್ಲಿ ಮಾತ್ರ I, II, III ಎಂದು ವಲಯಗಳನ್ನು ಮಾಡಿ ಯಾವುದೇ ಅಭಿವೃದ್ಧಿ ಕೆಲಸ ಮಾಡಲು ಅನುಮತಿ ನೀಡದೇ ಜನರಿಗೆ ತೊಂದರೆಯಾಗುತ್ತಿರುವ ಬಗ್ಗೆ ಸರ್ಕಾರ ಯಾವ ಕ್ರಮ ತೆಗೆದುಕೊಂಡಿದೆ? | ಈ ಹಿಂದೆ 2011ರ CRZ ಅಧಿಸೂಚನೆಯಂತೆ, ಕೇರಳ ರಾಜ್ಯದಲ್ಲಿನ ಹಿನ್ನೀರಿನ ನಡುಗಡ್ಡೆ ಪ್ರದೇಶಗಳಿಗೆ ಮಾತ್ರ CRZ ವ್ಯಾಪ್ತಿಯನ್ನು 50 ಮೀಟರ್ ಗೆ ಸೀಮಿತಗೊಳಿಸಲಾಗಿತ್ತು ಆದರೆ, ಪ್ರಸ್ತುತ ಹೊರಡಿಸಿರುವ 2019ರ CRZ ಅಧಿಸೂಚನೆಯಲ್ಲಿ ಎಲ್ಲಾ ರಾಜ್ಯಗಳಿಗೂ ಒಂದೇ ರೀತಿಯ ನಿಯಮವನ್ನು ಜಾರಿಗೆ ತರಲಾಗಿದೆ.<br><br>ಭಾರತ ಸರ್ಕಾರ ಅರಣ್ಯ, ಪರಿಸರ ಮತ್ತು ಹವಾಮಾನ ಬದಲಾವಣೆ ಮಂತ್ರಾಯಲಯವು ಪರಿಸರ (ಸಂರಕ್ಷಣಾ) ಕಾಯ್ದೆ 1986ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಕಡಲತೀರಗಳ ಸಂರಕ್ಷಣೆ, ನಿರ್ವಹಣೆಗಾಗಿ ಹಾಗೂ ಕರಾವಳಿ ಸಮುದಾಯಗಳ ಜೀವನೋಪಾಯ ಹಾಗೂ ಭದ್ರತೆಯ ದೃಷ್ಟಿಯಿಂದ ಈ ಕೆಳಗೆ ಪಟ್ಟಿಮಾಡಿರುವಂತೆ ಕಡಲ ತೀರದ ಪ್ರದೇಶಗಳನ್ನು "ಕರಾವಳಿ ನಿಯಂತ್ರಣ ವಲಯ" (CRZ) ಎಂದು ಘೋಷಿಸಿ ಕರಾವಳಿ ವಲಯ ನಿಯಂತ್ರಣ ಅಧಿಸೂಚನೆ, 2019ನ್ನು ಹೊರಡಿಸಿರುತ್ತದೆ.<br><br>ನಿಯಂತ್ರಿತ ಕಡಲ ತೀರ ಪ್ರದೇಶಗಳು:<br>1. ಸಮುದ್ರ ಉಬ್ಬರ ಭರತ ರೇಖೆಯಿಂದ (High Tide Line- HTL) 500 ಮೀಟರ್ ವ್ಯಾಪ್ತಿಯ ಭೂಪ್ರದೇಶ<br>2. ಉಬ್ಬರ ಭರತ ರೇಖೆ (HTL) ಹಾಗೂ ಇಳಿತ ಭರತ ರೇಖೆಗಳ (Low Tide Line-LTL) ನಡುವಣ ಪ್ರದೇಶ<br>3. ನೀರಿನಲ್ಲಿ ಸಾವಿರದಲ್ಲಿ 5 (Part Per Thousand-PPT) ಭಾಗಗಳಷ್ಟು ಲವಣಾಂಶ ಇರುವ ದೂರದಷ್ಟು ಸಮುದ್ರದ ಭಾಗದೊಂದಿಗೆ ಸಂಪರ್ಕವಿರುವ ನದಿ, ಕೊಲ್ಲಿ ಇತ್ಯಾದಿ ಹಾಗೂ ಅಲೆಗಳ ಪ್ರಭಾವವಿರುವ ಜಲಕಾಯಗಳ ಎರಡೂ ಬದಿಯ ಉಬ್ಬರ ಭರತ ರೇಖೆಯಿಂದ (HTL) 50 ಮೀಟರ್ ವ್ಯಾಪ್ತಿ ಅಥವಾ ಸದರಿ ಜಲಕಾಯದ ಅಥವಾ ನದಿಯ ಅಗಲದಷ್ಟು ಇವುಗಳ ಪೈಕಿ ಯಾವುದು ಕಡಿಮೆಯೋ ಆ ಪ್ರದೇಶ.<br>4. ಸಮುದ್ರದ ಇಳಿತ ರೇಖೆಯಿಂದ (LTL) 12 ನಾಟಿಕಲ್ ಮೈಲಿ ದೂರದ ಸಮುದ್ರ ಹಾಗೂ ಅಲೆಗಳ ಪ್ರಭಾವಿರುವ ಜಲ ಕಾಯಗಳ ಎರಡೂ ದಂಡೆಯ ಇಳಿತ ರೇಖೆಗಳ (LTL) ನಡುವಿನ ಜಲಾವೃತ ಪ್ರದೇಶ.<br>ಮೇಲ್ಕಂಡ CRZ ಪ್ರದೇಶಗಳನ್ನು ಅವುಗಳ ಪರಿಸರ ಸೂಕ್ಷ್ಮತೆಗೆ ಅನುಸಾರ ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.<br><br>• CRZ –I **ಪರಿಸರ ಅತಿ ಸೂಕ್ಷ್ಮ ಪ್ರದೇಶ**<br>• CRZ–II ಕಡಲ ತೀರದ ರೇಖೆಯಿಂದ ಅಥವಾ ಕಡಲ ತೀರದ ರೇಖೆಗೆ ಬಲು ಹತ್ತಿರವಾಗಿ ಅಭಿವೃದ್ಧಿ ಪಡಿಸಿದ |

|  |  | ಪ್ರದೇಶಗಳು.<br>• CRZ-III ಅಭಿವೃದ್ಧಿ ಹೊಂದಿದ ಮತ್ತು ಹೊಂದಿರದ ಗ್ರಾಮೀಣ ಪ್ರದೇಶಗಳು.<br>• CRZ -IV ಉಬ್ಬರ ರೇಖೆಯಿಂದ ಸಮುದ್ರದ ಕಡೆಗೆ ಹನ್ನೆರಡು ನಾಟಿಕಲ್ ಮೈಲುಗಳವರೆಗಿನ ಜಲ ಪ್ರದೇಶ.<br><br>CRZ ಪ್ರದೇಶದಲ್ಲಿ ಯಾವುದೇ ಹೊಸ ಉದ್ದಿಮೆ, ಸ್ಥಾಪಿಸುವುದನ್ನು ಹಾಗೂ ಇರುವ ಉದ್ದಿಮೆಗಳ ವಿಸ್ತರಣೆಗೆ ನಿರ್ಬಂಧ ಹೇರಲಾಗಿದೆ. ಆದರೆ ಹೊಸ ಕಟ್ಟಡಗಳು, ಕಟ್ಟಡಗಳ ಪುನರ್ ನಿರ್ಮಾಣ, ದುರಸ್ತಿ ಇತ್ಯಾದಿ ಚಟುವಟಿಕೆಗಳನ್ನು ಕರಾವಳಿ ವಲಯ ನಿಯಂತ್ರಣ ಅಧಿಸೂಚನೆ, 2019ರ ವಿವಿಧ ವರ್ಗೀಕರಣದ ಅನುಸಾರ ನಿಯಂತ್ರಣಕ್ಕೆ ಒಳಪಡಿಸಿ ಅನುಮತಿ ನೀಡಲು ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಇದು ಕಡಲ ತೀರವನ್ನು ಹೊಂದಿರುವ ಎಲ್ಲಾ 9 ರಾಜ್ಯಗಳಿಗೆ ಹಾಗೂ ಎಲ್ಲಾ ಕೇಂದ್ರಾಡಳಿತ ಪ್ರದೇಶಗಳಿಗೆ ಏಕರೂಪವಾಗಿ ಅನ್ವಯಿಸುತ್ತದೆ. |

**ಕಡತ ಸಂಖ್ಯೆ:** ಅಪಜೀ 50 ಇಎನ್ ವಿ 2020

18/12/20

**(ಆನಂದ್ ಸಿಂಗ್)**
ಅರಣ್ಯ, ಜೀವಿಪರಿಸ್ಥಿತಿ ಹಾಗೂ ಪರಿಸರ ಸಚಿವರು.

# ಅನುಬಂಧ

## ಕರಾವಳಿ ನಿಯಂತ್ರಣ ವಲಯ ವ್ಯಾಪ್ತಿ ಹೊಂದಿರುವ ರಾಜ್ಯಗಳು ಹಾಗೂ

## ಕೇಂದ್ರಾಡಳಿತ ಪ್ರದೇಶಗಳು

| ಕ್ರ. ಸಂ. | ಕಡಲ ತೀರ ರಾಜ್ಯಗಳು | ಕ್ರ. ಸಂ. | ಕೇಂದ್ರಾಡಳಿತ ಪ್ರದೇಶಗಳು |
|---|---|---|---|
| 1 | ಗುಜರಾತ್ | 1 | ದಮನ್ ಮತ್ತು ದಿಯು |
| 2 | ಮಹಾರಾಷ್ಟ್ರ | 2 | ಲಕ್ಷದ್ವೀಪ |
| 3 | ಗೋವಾ | 3 | ಪಾಂಡಿಚೇರಿ |
| 4 | ಕರ್ನಾಟಕ | 4 | ಅಂಡಮಾನ್ |
| 5 | ಕೇರಳ | | |
| 6 | ತಮಿಳುನಾಡು | | |
| 7 | ಆಂಧ್ರ ಪ್ರದೇಶ | | |
| 8 | ಒರಿಸ್ಸಾ | | |
| 9 | ಪಶ್ಚಿಮ ಬಂಗಾಳ | | |

ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 78 ಇಪಿಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.03.2020.

19/3/2020

ಇಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ:- ಕರ್ನಾಟಕ ಮಾನ್ಯ ವಿಧಾನ ಸಭೆಯ ಸದಸ್ಯರಾದ ಡಾ: ಶ್ರೀನಿವಾಸಮೂರ್ತಿ. ಕೆ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1923 ಕ್ಕೆ ಉತ್ತರವನ್ನು ನೀಡುವ ಬಗ್ಗೆ.

ಉಲ್ಲೇಖ:- ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1923/2020, ದಿನಾಂಕ: 05.03.2020.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಡಾ: ಶ್ರೀನಿವಾಸಮೂರ್ತಿ. ಕೆ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1923 ಕ್ಕೆ ಉತ್ತರದ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

18/3/2020
(ಮುರಳೀಧರ ಎಸ್. ತಳ್ಳಿಕೇರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ
(ಜೀವಿಪರಿಸ್ಥಿತಿ ಮತ್ತು ಪರಿಸರ)

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1923
2. ವಿಧಾನ ಸಭೆಯ ಸದಸ್ಯರ ಹೆಸರು : ಡಾ|| ಶ್ರೀನಿವಾಸಮೂರ್ತಿ ಕೆ.
3. ಉತ್ತರಿಸಬೇಕಾದ ದಿನಾಂಕ : 19.03.2020
4. ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ನೆಲಮಂಗಲ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಕುಮುದ್ವತಿ ನದಿ ತೀರದಿಂದ ಎಷ್ಟು ಕಿ.ಮೀ. ವರೆಗೆ ಭೂಪರಿವರ್ತನೆ ಮಾಡಬಹುದು. (ವಿವರ ನೀಡುವುದು) | ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 215 ಇಎನ್‌ವಿ 2000, ದಿನಾಂಕ:18.11.2003ರ ರೀತ್ಯಾ ಕುಮುದ್ವತಿ ನದಿಯ ಎರಡೂ ಬದಿಯ ದಂಡೆಯಿಂದ ಒಂದು ಕಿ.ಮೀ. ವರೆಗಿನ ಪ್ರದೇಶವನ್ನು ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದ ವಲಯ-3 ಎಂದು ಗುರುತಿಸಲಾಗಿದ್ದು, ಈ ಪ್ರದೇಶದಲ್ಲಿ ಯಾವುದೇ ವ್ಯಕ್ತಿ ಪೂರ್ವಾನುಮತಿ ಇಲ್ಲದೆ ಕೃಷಿ ಮತ್ತು ಕೃಷಿ ಸಂಬಂಧಿತ ಚಟುವಟಿಕೆಗಳನ್ನು ಹೊರತುಪಡಿಸಿ ಮತ್ತಾವುದೇ ಚಟುವಟಿಕೆಗಳನ್ನು ಕೈಗೊಳ್ಳುವಂತಿಲ್ಲ. ಹಾಗೂ ಎರಡೂ ಬದಿಯ ವಲಯ -2 ರಿಂದ ಹೊರತಾದ ಒಂದು ಕಿ.ಮೀ. ನಿಂದ ಎರಡು ಕಿ.ಮೀ. ವರೆಗಿನ ಪ್ರದೇಶವನ್ನು ವಲಯ-4 ಎಂದು ಗುರುತಿಸಲಾಗಿದೆ. ಈ ವಲಯದಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಹಸಿರು ವರ್ಗದ ಗುರುತಿಸಿರುವ ಕೈಗಾರಿಕೆಗಳನ್ನು ಮಾತ್ರ ಅನುಮತಿಸಲಾಗಿದೆ. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಈ ಸಂಬಂಧ ಸ್ಥಾಪನಾ ಸಮ್ಮತಿ ಪತ್ರ (CFE) ಪಡೆದ ನಂತರವೇ ಇನ್ನುಳಿದ ನಿಯಂತ್ರಣ ಪ್ರಾಧಿಕಾರಗಳು ಅನುಮತಿ ನೀಡಬಹುದಾಗಿರುತ್ತದೆ. ಈ ಪ್ರದೇಶದಲ್ಲಿ ನೆಲಮಹಡಿ ಮತ್ತು ಒಂದು ಮೇಲ್ಮಹಡಿ ಕಟ್ಟಡಗಳಿಗೆ ಮಾತ್ರ ಅವಕಾಶವಿರುತ್ತದೆ. ಈ ಕಟ್ಟಡಗಳಲ್ಲಿ ಮಳೆ ನೀರು ಕೊಯ್ಲು ಕಡ್ಡಾಯವಾಗಿರುತ್ತದೆ.<br><br>ಕುಮುದ್ವತಿ ನದಿಯ ಅಚ್ಚುಕಟ್ಟು ಪ್ರದೇಶದ ಭೂಮಿಯನ್ನು ಕೃಷಿಯೇತರ ಚಟುವಟಿಕೆಗಳಿಗೆ ಪರಿವರ್ತಿಸುವ ಅಧಿಕಾರ ಕಂದಾಯ ಇಲಾಖೆಯ ವ್ಯಾಪ್ತಿಯಲ್ಲಿರುತ್ತದೆ. |
| (ಆ) | ಕ್ಯಾಚ್‌ಮೆಂಟ್ ಏರಿಯಾದಲ್ಲಿ ಭೂಪರಿವರ್ತನೆ ಮಾಡಬಹುದೇ; (ವಿವರ ನೀಡುವುದು) | ಸರ್ಕಾರದ ಅಧಿಸೂಚನೆ ಸಂಖ್ಯೆ ಅಪಜೀ 215 ಇಎನ್‌ವಿ 2000, ದಿನಾಂಕ:18.11.2003ಕ್ಕೆ ಒಳಪಟ್ಟು ತಿಪ್ಪಗೊಂಡನಹಳ್ಳಿ ಜಲಾನಯನ ಪ್ರದೇಶದಲ್ಲಿ ನಿಯಮಾನುಸಾರ ಸಂಬಂಧಪಟ್ಟ ಇಲಾಖೆ/ಪ್ರಾಧಿಕಾರ ಭೂಪರಿವರ್ತನೆ ಮಾಡಬಹುದಾಗಿರುತ್ತದೆ. |
| (ಇ) | ಈವರೆಗೆ ಈ ಭಾಗದಲ್ಲಿ ಭೂಪರಿವರ್ತನೆ ಮಾಡಿರುವ ಪ್ರಕರಣ ಯಾವುದಾದರೂ ಇವೆಯೇ (ವಿವರ ನೀಡುವುದು) | ನೆಲಮಂಗಲ ಸ್ಥಳೀಯ ಯೋಜನಾ ಪ್ರದೇಶ ವ್ಯಾಪ್ತಿಯಲ್ಲಿ ಈವರೆಗೆ ಟಿ.ಜಿ.ಆರ್ ವಲಯ-3 ರಲ್ಲಿ ಭೂ ಪರಿವರ್ತನೆಗೆ ತಾಂತ್ರಿಕ ಅಭಿಪ್ರಾಯ ನೀಡಿರುವುದಿಲ್ಲವಾದ್ದರಿಂದ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವ್ಯಾಪ್ತಿಯಲ್ಲಿ ಯಾವುದೇ ಭೂ ಪರಿವರ್ತನೆ ಆದೇಶ ಹೊರಡಿಸಿರುವುದಿಲ್ಲ. |

| (ಈ) | ಕುಮುದ್ವತಿ ನದಿ ತೀರದಿಂದ ಎಷ್ಟು ಕಿ.ಮೀ. ವರೆಗೆ ಕ್ಯಾಚ್‌ಮೆಂಟ್ ಏರಿಯಾ ಎಂದು ಗುರುತಿಸಲಾಗಿದೆ? (ವಿವರ ನೀಡುವುದು) | ಅರ್ಕಾವತಿ ಮತ್ತು ಕುಮುದ್ವತಿ ನದಿಗಳ ಜಲಾನಯನ ಪ್ರದೇಶವನ್ನು ಒಳಗೊಂಡಂತೆ ತಿಪ್ಪಗೊಂಡನಹಳ್ಳಿ ಜಲಾಶಯದ ಜಲಾನಯನ ಪ್ರದೇಶವು ಬೆಂಗಳೂರು-ತುಮಕೂರು ರಸ್ತೆಯಲ್ಲಿ ದಾಬಸ್‌ಪೇಟೆವರೆಗೆ ಹಾಗೂ ನಂದಿ ಬೆಟ್ಟದವರೆಗೆ ಇರುತ್ತದೆ. ಈ ಪ್ರದೇಶವನ್ನು 12°56' ಮತ್ತು 13°23'15" ಉತ್ತರ ಅಕ್ಷಾಂಶ ಹಾಗೂ 77°13'30" ಮತ್ತು 77°41'15" ಪೂರ್ವ ರೇಖಾಂಶಗಳ ನಡುವೆ ಹರಡಿದ್ದು, ಒಟ್ಟು 1453 ಚದರ ಕಿ.ಮೀ ಎಂದು ಗುರುತಿಸಲಾಗಿದೆ. |
|---|---|---|

ಸಂಖ್ಯೆ: ಅಪಜೀ 78 ಇಪಿಸಿ 2020

13/3/2020

**(ಆನಂದ್ ಸಿಂಗ್)**

ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

# ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 11 ಎಂಡಿಬಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 19.03.2020

19/3/20

ಇವರಿಂದ:-
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಶಿಕ್ಷಣ ಇಲಾಖೆ, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)

ಇವರಿಗೆ:-
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ** :- ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಅಂಜಲಿ ಹೇಮಂತ್ ನಿಂಬಾಳ್ಕರ್ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 692 ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅಂಜಲಿ ಹೇಮಂತ್ ನಿಂಬಾಳ್ಕರ್ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ : 692 ಕ್ಕೆ ಉತ್ತರವನ್ನು 100/350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿ ಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಎಸ್.ಆರ್.ಎಸ್.ನಾಥನ್)
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ (ಪ್ರಾಥಮಿಕ ಹಾಗೂ ಪ್ರೌಢ)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 692 |
| ಸದಸ್ಯರ ಹೆಸರು | : | ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ) |
| ಉತ್ತರಿಸಬೇಕಾದ ದಿನಾಂಕ | : | 19-03-2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

<table>
<tr><th>ಕ್ರಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಆರ್.ಎಂ.ಎಸ್.ಎ ಯೋಜನೆಯಡಿ ಖಾನಾಪುರ ತಾಲ್ಲೂಕಿನಲ್ಲಿ ಮಂಜೂರಾಗಿದ್ದ ಶಾಲಾ ಕಟ್ಟಡ ಕಾಮಗಾರಿಗಳು ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಇಲ್ಲ</td></tr>
<tr><td>ಆ)</td><td>ಬಂದಿದ್ದಲ್ಲಿ, ಆರ್.ಎಂ.ಎಸ್.ಎ ಯೋಜನೆಯಡಿ ಖಾನಾಪುರ ತಾಲ್ಲೂಕಿಗೆ ಮಂಜೂರಾಗಿದ್ದ ಶಾಲಾ ಕಟ್ಟಡಗಳೆಷ್ಟು; (ಸಂಪೂರ್ಣ ವಿವರಗಳನ್ನು ಒದಗಿಸುವುದು)</td><td>

• ಆರ್.ಎಂ.ಎಸ್.ಎ ಯೋಜನೆಯಡಿ ಖಾನಾಪುರ ತಾಲ್ಲೂಕಿನಲ್ಲಿ 2009-10 ಮತ್ತು 2010-11ರಲ್ಲಿ ಮಂಜೂರಾಗಿ ಅನುಷ್ಠಾನಗೊಂಡಿರುವ 6 ಕಾಮಗಾರಿಗಳಲ್ಲಿ (5 ಬಲವರ್ಧನೆ+1 ಉನ್ನತೀಕರಣ) ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ. ವಿವರಗಳು ಈ ಕೆಳಕಂಡಂತಿವೆ.

<table>
<tr><th>ಕ್ರ.ಸಂ.</th><th>ಟೈಪ್</th><th>ಶಾಲೆಯ ಹೆಸರು</th></tr>
<tr><td>1</td><td>T-45</td><td>ಸ.ಪ.ಪೂ.ಕಾ ಖಾನಾಪುರ</td></tr>
<tr><td>2</td><td>T-48</td><td>ಸ.ಪ್ರೌ.ಶಾ ಚಿಕ್ಕದಿನ ಕೊಪ್ಪ</td></tr>
<tr><td>3</td><td>T-74</td><td>ಸ.ಸಂ.ಪ್ರೌ.ಶಾ ಲಿಂಗನಮಠ್</td></tr>
<tr><td>4</td><td>T-74</td><td>ಸ.ಸಂ.ಪ್ರೌ.ಶಾ ಶಿರೋಳಿ</td></tr>
<tr><td>5</td><td>T-74</td><td>ಸ.ಸಂ.ಪ್ರೌ.ಶಾ ಸುರಪುರ್-ಕೇರವಾಡ</td></tr>
<tr><td>6</td><td>T-2 UP</td><td>ಮರಾಠಿ.ಹಿ.ಪ್ರಾ.ಶಾ ಗುಂಜಿ</td></tr>
</table>

ಖಾನಾಪುರ ತಾಲ್ಲೂಕಿನಲ್ಲಿ ಆರ್.ಎಂ.ಎಸ್.ಎ ಯೋಜನೆಯಡಿ 2009-10 ಮತ್ತು 2010-11ರ ಸಾಲಿನಲ್ಲಿ ಅನುಮೋದನೆಯಾಗಿ ನಂತರ 2103-14 ರಿಂದ 2017-18 ರವರೆಗೆ ವಿವಿಧ ಕಾರಣಗಳಿಂದ ಪ್ರಾರಂಭಗೊಳ್ಳದೆ ಗುತ್ತಿಗೆ ವ್ಯಾಪ್ತಿಯಿಂದ ಹಿಂಪಡೆದು / ಮರುಮಾನ್ಯತೆ ಪಡೆದ 01 ಉನ್ನತೀಕರಣ ಕಾಮಗಾರಿ ಮತ್ತು ಹೊಸದಾಗಿ 2 ಕಾಮಗಾರಿಗಳು (1ಬಲವರ್ಧನೆ+1ಉನ್ನತೀಕರಣ) ಸೇರಿ ಒಟ್ಟು 3 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ಸರ್ಕಾರದ ಆದೇಶದ ಸಂಖ್ಯೆ : ಇಡಿ 01 ಎಂಸಿಡಿ 2018 ದಿನಾಂಕ :08.03.2018 ರಲ್ಲಿ ನೀಡಲಾಗಿದೆ. ವಿವರಗಳು ಈ ಕೆಳಕಂಡಂತಿದೆ.

<table>
<tr><th>ಕ್ರ.ಸಂ.</th><th>ಟೈಪ್</th><th>ಶಾಲೆಯ ಹೆಸರು</th></tr>
<tr><td>1</td><td>T-2 UP (ಉನ್ನತೀಕರಣ)</td><td>ಪ್ರೌ.ಶಾ ಅಮಟೆ (ಮರಾಠಿ)</td></tr>
<tr><td>2</td><td>T-2 UP (ಉನ್ನತೀಕರಣ)</td><td>ಮರಾಠಿ.ಹಿ.ಪ್ರಾ.ಶಾ ಸಿಲ್‌ವಾಡ್</td></tr>
<tr><td>3</td><td>ST(ಬಲವರ್ಧನೆ)</td><td>ಮರಾಠಿ.ಹಿ.ಪ್ರಾ.ಶಾ ಕುಂಬರ್ಡ</td></tr>
</table>
</td></tr>
</table>

<table>
<tr>
<td>ಇ)</td>
<td>ಸದರಿ ಶಾಲಾ ಕಟ್ಟಡ ಕಾಮಗಾರಿಗಳು ಸ್ಥಗಿತಗೊಂಡಿರುವುದಕ್ಕೆ ಕಾರಣಗಳೇನು; ಯಾವ ಕಾಲಮಿತಿಯೊಳಗೆ ಸದರಿ ಕಟ್ಟಡಗಳನ್ನು ನಿರ್ಮಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು)</td>
<td>ಸದರಿ ಕಾಮಗಾರಿಗಳಿಗೆ ಕೇಂದ್ರ ಸರ್ಕಾರದ ಅನುದಾನ ಬಿಡುಗಡೆಯಾಗಿಲ್ಲದ ಕಾರಣ ಕಾಮಗಾರಿಗಳನ್ನು ಕೈಗೊಳ್ಳಲಾಗಿರುವುದಿಲ್ಲ.<br>ಕಳೆದ ಮೂರು ವರ್ಷಗಳಲ್ಲಿ ಕೇಂದ್ರ ಸರ್ಕಾರದಿಂದ ಅನುದಾನ ಬಿಡುಗಡೆಯಾಗದ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರದ ಅನುದಾನದಲ್ಲಿ 410 ಕಾಮಗಾರಿಗಳ ಪೈಕಿ 121 ಕಾಮಗಾರಿಗಳನ್ನು ರೂ.174.27 ಕೋಟಿ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ:ಇಪಿ 03 ಎಂಸಿಡಿ 2020, ದಿನಾಂಕ:28.02.2020 ರಲ್ಲಿ ಆದೇಶ ನೀಡಲಾಗಿದೆ. ಸದರಿ ಆದೇಶದಲ್ಲಿ ಆದ್ಯತೆ ಮೇರೆಗೆ ಖಾನಾಪುರ ಕ್ಷೇತ್ರದ ಈ ಕೆಳಕಂಡ ಉನ್ನತೀಕರಿಸಿದ ಶಾಲೆಗೆ ಅನುದಾನ ನಿಗಧಿಪಡಿಸಲಾಗಿರುತ್ತದೆ.
<table>
<tr><td>ಶಾಲೆಯ ಹೆಸರು</td><td>ಅನುದಾನ (ರೂ.ಲಕ್ಷಗಳಲ್ಲಿ)</td></tr>
<tr><td>ಸರ್ಕಾರಿ ಪ್ರೌಢಶಾಲೆ ಆಮ್ಟೆ(ಮರಾಠಿ)</td><td>143.20</td></tr>
</table>
ಸದರಿ ಕಾಮಗಾರಿಯನ್ನು ಶೀಘ್ರದಲ್ಲೇ ಪ್ರಾರಂಭಿಸಲಾಗುವುದು.</td>
</tr>
</table>

ಇಪಿ 11 ಎಂಸಿಡಿ 2020

(ಎಸ್. ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

103

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ56ಹೆಚ್‌ಪಿಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 18.03.2020

19/3/2020

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಉನ್ನತ ಶಿಕ್ಷಣ ಇಲಾಖೆ,

**ಇವರಿಗೆ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ
ಬೆಂಗಳೂರು

ಮಾನ್ಯರೆ

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಸಾಲ ಜಯರಾಮ್ (ತುರುವೇಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2404 ಕ್ಕೆ ಉತ್ತರ ಒದಗಿಸುತ್ತಿರುವ ಬಗ್ಗೆ.

**ಉಲ್ಲೇಖ:** ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.2404/2020,
ದಿನಾಂಕ: [illegible]3/2020

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಸಾಲ ಜಯರಾಮ್ (ತುರುವೇಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2404ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ

(ಎನ್.ಆರ್ ಎರೆಕುಪ್ಪಿ)
ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ಆಂತರಿಕ ಆರ್ಥಿಕ ಸಲಹೆಗಾರರು,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 2404 |
| ಸದಸ್ಯರ ಹೆಸರು | : ಶ್ರೀ ಮಸಾಲ ಜಯರಾಮ್ (ತುರುವೇಕೆರೆ) |
| ಉತ್ತರಿಸುವ ದಿನಾಂಕ | : 19.03.2020 |
| ಉತ್ತರಿಸುವ ಸಚಿವರು | : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನಲ್ಲಿ ಕಾನೂನು ಕಾಲೇಜು ಸ್ಥಾಪಿಸುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಹಾಗಿದ್ದಲ್ಲಿ, ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; ಯಾವಾಗ ಪ್ರಾರಂಭಿಸಲಾಗುವುದು? (ವಿವರ ನೀಡುವುದು) | ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನಲ್ಲಿ ಸರ್ಕಾರಿ ಕಾನೂನು ಕಾಲೇಜು ಪ್ರಾರಂಭಿಸುವ ಸಂಬಂಧ ಪ್ರಾದೇಶಿಕ ಜಂಟಿ ನಿರ್ದೇಶಕರು ಸ್ಥಳ ಪರಿಶೀಲನೆ ನಡೆಸಿ ವರದಿ ಸಲ್ಲಿಸಿರುತ್ತಾರೆ. ಜಂಟಿ ನಿರ್ದೇಶಕರ ವರದಿ ಮತ್ತು ಅಭಿಪ್ರಾಯವನ್ನು ಪರಿಶೀಲಿಸಿ ಪೂರಕ ಪದವಿ ಪೂರ್ವ ಕಾಲೇಜುಗಳು ಹಾಗೂ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು, ಈ ಕಾಲೇಜುಗಳಿಂದ ಪ್ರವೇಶ ಪಡೆಯಬಹುದಾದ ವಿದ್ಯಾರ್ಥಿಗಳ ಸಂಖ್ಯೆ ಹಾಗೂ ಲಭ್ಯವಾಗಬಹುದಾದ ಮೂಲಭೂತ ಸೌಲಭ್ಯಗಳ ಕುರಿತು ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ: ಇಡಿ 56 ಹೆಚ್‌ಪಿಸಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿ ಹಾಗೂ
ಉನ್ನತ ಶಿಕ್ಷಣ ಸಚಿವರು

174

## ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 50 ಹೆಚ್‌ಪಿಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 18.03.2020

19/3/2020

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಉನ್ನತ ಶಿಕ್ಷಣ ಇಲಾಖೆ,

**ಇವರಿಗೆ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ
ಬೆಂಗಳೂರು

ಮಾನ್ಯರೆ

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಲಿಂಗೇಗೌಡ ಕೆ.ಎಂ. (ಅರಸೀಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2564 ಕ್ಕೆ ಉತ್ತರ ಒದಗಿಸುತ್ತಿರುವ ಬಗ್ಗೆ.

**ಉಲ್ಲೇಖ:** ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ2564/2020,
ದಿನಾಂಕ: 6/3/2020

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಲಿಂಗೇಗೌಡ ಕೆ.ಎಂ. (ಅರಸೀಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2564 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

**ತಮ್ಮ ನಂಬುಗೆಯ**

(ಎನ್.ಆರ್ ಎರೆಕುಪ್ಪಿ)
ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ಆಂತರಿಕ ಆರ್ಥಿಕ ಸಲಹೆಗಾರರು,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 2564 |
| ಸದಸ್ಯರ ಹೆಸರು | : ಶ್ರೀ ಶಿವಲಿಂಗೇಗೌಡ ಕೆ.ಎಂ (ಅರಸೀಕೆರೆ) |
| ಉತ್ತರಿಸುವ ದಿನಾಂಕ | : 19.03.2020 |
| ಉತ್ತರಿಸುವ ಸಚಿವರು | : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಗೌರವ ಸಂಭಾವನೆಯನ್ನು ಪ್ರತಿ ತಿಂಗಳು ನೀಡದಿರುವುದರಿಂದ ಅತಿಥಿ ಉಪನ್ಯಾಸಕ ಜೀವನ ನಿರ್ವಹಣೆಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ರಾಜ್ಯದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಗೌರವ ಸಂಭಾವನೆಯನ್ನು ಪ್ರತಿ ತಿಂಗಳು ನೀಡಲು ಸರ್ಕಾರದ ಮುಂದಿರುವ ತೊಂದರೆಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ಪ್ರತಿ ವರ್ಷ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ವಿವಿಧ ಕೋರ್ಸು ಮತ್ತು ಕಾಂಬಿನೇಷನ್‌ಗಳಿಗೆ ವಿದ್ಯಾರ್ಥಿಗಳು ಪ್ರವೇಶ ಪಡೆದ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಲಭ್ಯವಾಗುವ ಒಟ್ಟು ಕಾರ್ಯಭಾರದಲ್ಲಿ ಮೊದಲಿಗೆ ಖಾಯಂ ಉಪನ್ಯಾಸಕರಿಗೆ ಕಾರ್ಯಭಾರವನ್ನು ಹಂಚಿಕೆ ಮಾಡಲಾಗುವುದು. ತದನಂತರ ಉಳಿಕೆಯಾಗುವ ಹೆಚ್ಚುವರಿ ಕಾರ್ಯಭಾರಕ್ಕೆ ಕಲಾ/ವಾಣಿಜ್ಯ ವಿಭಾಗದಲ್ಲಿ ವಾರಕ್ಕೆ 8 ಗಂಟೆ ಹಾಗೂ ವಿಜ್ಞಾನ ವಿಭಾಗದಲ್ಲಿ 10 ಗಂಟೆಯಂತೆ ವಿಷಯವಾರು ಲಭ್ಯವಾಗುವ ಹೆಚ್ಚುವರಿ ಕಾರ್ಯಭಾರಕ್ಕೆ ಆನ್‌ಲೈನ್ ಮುಖಾಂತರ ಅರ್ಜಿ ಆಹ್ವಾನಿಸಿ ಅರ್ಹತಾ ಪಟ್ಟಿ ಸಿದ್ಧಪಡಿಸಿದ ಮೇಲೆ ಸದರಿ ಪಟ್ಟಿಯಂತೆ ಪ್ರತಿ ಕಾಲೇಜಿನಲ್ಲಿ ಅತಿಥಿ ಉಪನ್ಯಾಸಕರನ್ನು ಪ್ರಾಂಶುಪಾಲರ ಹಂತದಲ್ಲಿ ನೇಮಕ ಮಾಡಿಕೊಳ್ಳಲಾಗುತ್ತದೆ. ತದನಂತರ ಕಾಲೇಜುಗಳಿಂದ ಪ್ರಾದೇಶಿಕ ಜಂಟಿ ನಿರ್ದೇಶಕರ ಅನುಮೋದನೆಗೆ ಸಲ್ಲಿಸಲಾಗುತ್ತಿದ್ದು, ಸದರಿ ಪ್ರಸ್ತಾವನೆಯನ್ನು ಕಾರ್ಯಭಾರದೊಂದಿಗೆ ಪರಿಶೀಲಿಸಿ ಜಂಟಿ ನಿರ್ದೇಶಕರ ಹಂತದಲ್ಲಿ ಅನುಮೋದನೆ ನೀಡಿದ ನಂತರ ಅತಿಥಿ ಉಪನ್ಯಾಸಕರಿಗೆ ವೇತನವನ್ನು ಪಾವತಿಸುವುದರಿಂದ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ ಗೌರವಧನ ಪಾವತಿಯಲ್ಲಿ ವಿಳಂಬವಾಗುತ್ತದೆ. ಅಲ್ಲದೆ ಅತಿಥಿ ಉಪನ್ಯಾಸಕರ ವೇತನವನ್ನು ಖಜಾನೆ-2ರ ಮುಖಾಂತರ ಕ್ಲೇಮು ಮಾಡಲಾಗುತ್ತಿದ್ದು, ಹಲವು ಕಾಲೇಜುಗಳಲ್ಲಿ ಪ್ರಾಂಶುಪಾಲರ |

| | | ಹಾಗೂ ವಿಷಯ ನಿರ್ವಾಹಕರ ಡಿ.ಎಸ್.ಸಿ ಕೀಗಳ ನವೀಕರಣ, ಪ್ರಾಂಶುಪಾಲರ ನಿವೃತ್ತಿಯ ನಂತರ ಹೊಸ ಪ್ರಾಂಶುಪಾಲರು ಡಿ.ಎಸ್.ಎಸ್. ಕೀ ಪಡೆದುಕೊಳ್ಳುವುದು ಹಾಗೂ ಆಯವ್ಯಯ ಕ್ರೋಢೀಕರಣದಿಂದ ವಿಳಂಬವಾಗುತ್ತಿರುವುದರಿಂದಾಗಿ ಗೌರವಧನ ಪಾವತಿಯಲ್ಲಿ ತಡವಾಗಿರುತ್ತದೆ. |
|---|---|---|
| ಇ) | ರಾಜ್ಯದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಗೌರವ ಸಂಭಾವನೆಯನ್ನು ಪ್ರತಿ ತಿಂಗಳು ಪಾವತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು(ಸಂಪೂರ್ಣ ಮಾಹಿತಿ ನೀಡುವುದು)? | ಶೈಕ್ಷಣಿಕ ಸಾಲಿನ ಪ್ರಾರಂಭದಲ್ಲಿ ಕಾಲೇಜುಗಳಿಂದ ಅತಿಥಿ ಉಪನ್ಯಾಸಕರ ನೇಮಕಾತಿ ಅನುಮೋದನೆಗಾಗಿ ಅಗತ್ಯ ದಾಖಲೆಗಳೊಂದಿಗೆ ಆಯಾ ಪ್ರಾದೇಶಿಕ ಜಂಟಿ ನಿರ್ದೇಶಕರುಗಳಿಗೆ ವಿಳಂಬಮಾಡದೇ ಸಲ್ಲಿಸಲು ಪ್ರಾಂಶುಪಾಲರಿಗೆ ಸೂಚಿಸಲಾಗಿರುತ್ತದೆ. ಹಾಗೂ ಪ್ರಾಂಶುಪಾಲರುಗಳಿಂದ ಸ್ವೀಕೃತವಾಗುವ ಪ್ರಸ್ತಾವನೆಯನ್ನು ತ್ವರಿತಗತಿಯಲ್ಲಿ ಪರಿಶೀಲಿಸಿ ಅನುಮೋದನೆಯನ್ನು ನೀಡಿ ಗೌರವಧನ ಪಾವತಿಗೆ ಅನುವು ಮಾಡಿಕೊಡಲು ಎಲ್ಲಾ ಜಂಟಿ ನಿರ್ದೇಶಕರುಗಳಿಗೆ ಸಹ ಸೂಚನೆಯನ್ನು ನೀಡಲಾಗಿದೆ. ಅಲ್ಲದೇ ಡಿ.ಎಸ್.ಎಸ್. ಕೀ ನವೀಕರಣ, ಪ್ರಾಂಶುಪಾಲರ ಬದಲಾವಣೆಯಿಂದ ಹೊಸ ಡಿ.ಎಸ್.ಎಸ್ ಕೀ ಪಡೆಯಲು ಅಗತ್ಯ ದಾಖಲೆಗಳನ್ನು ಸಲ್ಲಿಸಿ ವೈಯಕ್ತಿಕ ಗಮನಹರಿಸಿ ಕೀಗಳನ್ನು ಪಡೆಯಲು ಎಲ್ಲಾ ಪ್ರಾಂಶುಪಾಲರುಗಳಿಗೆ ಸೂಚನೆಯನ್ನು ನೀಡಲಾಗಿದೆ. ಅಂತಿಮವಾಗಿ ಅತಿಥಿ ಉಪನ್ಯಾಸಕರ ಸಂಖ್ಯೆಗಳಿಗೆ ಅನುಸಾರವಾಗಿ ಆಯಾ ಆರ್ಥಿಕ ಸಾಲಿನಲ್ಲಿ ಒದಗಿಸುವ ಅನುದಾನದಲ್ಲಿ ಕೊರತೆಯುಂಟಾಗದಂತೆ ಮಂಜೂರು ಮಾಡಲು ತಿಳಿಸಿದೆ. |

ಸಂಖ್ಯೆ: ಇಡಿ ೫೦ ಹೆಚ್‌ಪಿಸಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿ ಹಾಗೂ
ಉನ್ನತ ಶಿಕ್ಷಣ ಸಚಿವರು

120

## ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 70 ಎಫ್‌ಡಬ್ಲೂಎಲ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19-03-2020.

O/S
19/3/2020

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ನಿರಂಜನ್ ಕುಮಾರ್ ಸಿ.ಎಸ್ (ಗುಂಡ್ಲುಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2398ಕ್ಕೆ ಉತ್ತರಿಸುವ ಬಗ್ಗೆ.

*****

ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ನಿರಂಜನ್ ಕುಮಾರ್ ಸಿ.ಎಸ್ (ಗುಂಡ್ಲುಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2398ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

**(ಗಾಯತ್ರಿ ಎಲ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ, 6ನೇ ಅಧಿವೇಶನ)

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2398 |
| 2) | ಸದಸ್ಯರ ಹೆಸರು | : | ಶ್ರೀ ನಿರಂಜನ್ ಕುಮಾರ್ ಸಿ.ಎಸ್ (ಗುಂಡ್ಲುಪೇಟೆ) |
| 3) | ಉತ್ತರಿಸುವ ದಿನಾಂಕ | : | 19.03.2020 |
| 4) | ಉತ್ತರಿಸುವವರು | : | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರದಲ್ಲಿ ಕಾಡಾನೆಗಳ ಹಾವಳಿಯಿಂದ ಸಾರ್ವಜನಿಕರ ಪ್ರಾಣಹಾನಿ ಹಾಗೂ ಬೆಳೆಹಾನಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದರೆ, ಕಾಡಾನೆಗಳ ಹಾವಳಿಯನ್ನು ತಡೆಗಟ್ಟಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ; | ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ವ್ಯಾಪ್ತಿಯಲ್ಲಿ ಕಾಡಾನೆಗಳ ಹಾವಳಿಯನ್ನು ತಡೆಗಟ್ಟಲು ಇಲಾಖೆಯ ವತಿಯಿಂದ ಈ ಕೆಳಕಂಡ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>• ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಆನೆಗಳಿರುವ ಪ್ರದೇಶಗಳಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ ಮತ್ತು ನಿರ್ವಹಣೆ ಮಾಡಲಾಗುತ್ತಿದೆ.<br>• ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ಆನೆ ತಡೆ ಕಂದಕಗಳನ್ನು ಉನ್ನತೀಕರಿಸಲಾಗಿದೆ.<br>• ಕಾಡಾನೆ ಹಾವಳಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ಉಪಯೋಗಿತ ರೈಲ್ವೆ ಹಳಿಗಳನ್ನು ಬಳಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>• ರೈತರ ಜಮೀನುಗಳಲ್ಲಿ ಶೇ. 50:50 ಅನುಪಾತದಲ್ಲಿ ಸೋಲಾರ್‌ತಂತಿ ಬೇಲಿ ನಿರ್ಮಾಣ ಮಾಡುವ ಮೂಲಕ ರೈತರ ಬೆಳೆ ರಕ್ಷಣೆಗೆ ಕ್ರಮ ಕೈಗೊಳ್ಳಲಾಗಿದೆ.<br>• ಕಾಡಾನೆ ಹಿಮ್ಮೆಟ್ಟಿಸುವ ತಂಡ (Anti-Depredation Camp), ಕ್ಷಿಪ್ರಸ್ಪಂದನ ತಂಡ (Rapid Response Teams (RRT)) ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯವನ್ನು ಕೈಗೊಳ್ಳಲಾಗುತ್ತಿದೆ. |

<table>
<tr>
<td></td>
<td></td>
<td>

- ಕಾಡಾನೆಗಳು ಕೃಷಿ ಜಮೀನುಗಳು ಮತ್ತು ವಸತಿ ಪ್ರದೇಶಗಳಲ್ಲಿ ಕಾಣಿಸಿಕೊಂಡಾಗ ಕಾಡಾನೆಗಳ ಮಾಹಿತಿಯನ್ನು ವಿನಿಮಯಿಸಲು / ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಿ, ಸಹಾಯವಾಣಿ ಸಂಖ್ಯೆ: 1926 ನ್ನು ಅನುಷ್ಠಾನಗೊಳಿಸಲಾಗಿದೆ.
- ಕಾಡಾನೆಗಳು ಇರುವಂತಹ ಸೂಕ್ಷ್ಮ ಪ್ರದೇಶಗಳಲ್ಲಿ ಸಾರ್ವಜನಿಕರಲ್ಲಿ ಅರಿವು ಮೂಡಿಸಲು ಆನೆಗಳ ಚಲನವಲನದ ಬಗ್ಗೆ ದೊಡ್ಡಗಾತ್ರದ ಸೂಚನಾ ಫಲಕಗಳನ್ನು ಅಳವಡಿಸಲಾಗಿದೆ.

</td>
</tr>
<tr>
<td>ಇ)</td>
<td>ಕಳೆದ ಮೂರು ವರ್ಷಗಳಿಂದ ಈ ಕ್ಷೇತ್ರದಲ್ಲಿ ಕಾಡಾನೆಗಳ ಹಾವಳಿಯಿಂದ ಮೃತಪಟ್ಟ ಸಾರ್ವಜನಿಕರಿಗೆ ಹಾಗೂ ಉಂಟಾದ ಬೆಳೆ ಹಾನಿಗೆ ಸರ್ಕಾರದಿಂದ ಎಷ್ಟು ಅನುದಾನ ಮಂಜೂರಾಗಿದೆ; (ಸಂಪೂರ್ಣ ಮಾಹಿತಿ ಒದಗಿಸುವುದು)</td>
<td>ಕಳೆದ ಮೂರು ವರ್ಷಗಳಲ್ಲಿ ಪರಿಹಾರ ಪಾವತಿಗಾಗಿ ಬಿಡುಗಡೆಯಾಗಿರುವ ಅನುದಾನ ಹಾಗೂ ಬಿಡುಗಡೆಗೆ ಬಾಕಿ ಇರುವ ಅನುದಾನದ ವಿವರ ಈ ಕೆಳಕಂಡಂತಿದೆ:<br>
(ರೂ.ಗಳಲ್ಲಿ)
<table>
<tr><th>ಕ್ರ. ಸಂ</th><th>ವರ್ಷ</th><th>ಬಿಡುಗಡೆಯಾದ ಅನುದಾನ</th><th>ಭರಿಸಿದ ವೆಚ್ಚ</th><th>ಬಿಡುಗಡೆ ಆಗಬೇಕಿರುವ ಅನುದಾನ</th></tr>
<tr><td>1</td><td>2016-17</td><td>60,02,810.00</td><td>60,02,810.00</td><td>0.00</td></tr>
<tr><td>2</td><td>2017-18</td><td>38,51,499.00</td><td>38,51,499.00</td><td>0.00</td></tr>
<tr><td>3</td><td>2018-19</td><td>68,52,759.00</td><td>68,52,759.00</td><td>0.00</td></tr>
<tr><td>4</td><td>2019-20</td><td>77,97,200.00</td><td>77,80,295.00</td><td>30,04,989.00</td></tr>
</table>
</td>
</tr>
<tr>
<td>ಈ)</td>
<td>ಕಾಡಾನೆಗಳ ಹಾವಳಿಯನ್ನು ತಡೆಗಟ್ಟಲು ರೈಲ್ವೆ ಕಂಬಿಗಳನ್ನು ಅಳವಡಿಸುವ ಬಗ್ಗೆ ಸರ್ಕಾರದ ನಿಲುವೇನು;</td>
<td>2015-16ನೇ ಸಾಲಿನಿಂದ ಪ್ರಸ್ತುತ ಸಾಲಿನವರೆಗೆ ಗುಂಡ್ಲುಪೇಟೆ ತಾಲ್ಲೂಕಿನ ಅರಣ್ಯ ಪ್ರದೇಶದ ಗಡಿರೇಖೆಯಲ್ಲಿ ನಿರ್ಮಾಣ ಮಾಡಿರುವ ರೈಲ್ವೆ ಹಳಿ ಬ್ಯಾರಿಕೇಡ್ ವಿವರ ಈ ಕೆಳಕಂಡಂತಿವೆ:
<table>
<tr><th>ಕ್ರ.ಸಂ</th><th>ವಲಯ</th><th>ನಿರ್ಮಿಸಲಾಗಿರುವ ರೈಲ್ವೆ ಹಳಿ ಬ್ಯಾರಿಕೇಡ್‌ನ ಉದ್ದ (ಕಿ.ಮೀ)</th></tr>
<tr><td>1</td><td>ಓಂಕಾರ</td><td>13.21</td></tr>
<tr><td>2</td><td>ಜಿ.ಎಸ್.ಬೆಟ್ಟ</td><td>0.775</td></tr>
<tr><td>3</td><td>ಮದ್ದೂರು</td><td>0.440</td></tr>
</table>
</td>
</tr>
</table>

| ಉ) | ಗುಂಡ್ಲುಪೇಟೆ ತಾಲ್ಲೂಕಿನ ಕಾಡಂಚಿನಲ್ಲಿರುವ ಗ್ರಾಮಗಳನ್ನು ಕಾಡಾನೆಗಳ ಹಾವಳಿಯಿಂದ ರಕ್ಷಿಸಲು ಗ್ರಾಮಗಳ ಸುತ್ತ ರೈಲ್ವೆ ಕಂಬಿಗಳನ್ನು ಅಳವಡಿಸುವ ಬಗ್ಗೆ ಸರ್ಕಾರ ಚಿಂತಿಸಿದೆಯೇ; ಕಾಡಂಚಿನಲ್ಲಿರುವ ಗ್ರಾಮಗಳ ವಿವರ ಒದಗಿಸುವುದು; | ಗುಂಡ್ಲುಪೇಟೆ ತಾಲ್ಲೂಕಿನ ಕಾಡಂಚಿನಲ್ಲಿರುವ ಗ್ರಾಮಗಳನ್ನು ಕಾಡಾನೆಗಳ ಹಾವಳಿಯಿಂದ ರಕ್ಷಿಸಲು ಇಲ್ಲಿಯವರೆಗೆ 14.425 ಕಿ.ಮೀ.. ಉದ್ದದ ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಮಾಡಲಾಗಿದೆ. ಮುಂದಿನ ವರ್ಷಗಳಲ್ಲಿಯೂ ಸಹ ಅವಶ್ಯವಿರುವ ಉಳಿದ ಕಾಡಂಚಿನ ಪ್ರದೇಶಗಳಲ್ಲಿ ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಮುಂದುವರಿಸಲಾಗುವುದು. |
|---|---|---|

**ಗುಂಡ್ಲುಪೇಟೆ ತಾಲ್ಲೂಕಿನ ಕಾಡಂಚಿನಲ್ಲಿರುವ ಗ್ರಾಮಗಳ ವಿವರ.**

| ಕ್ರ.ಸಂ | ಗ್ರಾಮದ ಹೆಸರು | ಕ್ರ.ಸಂ | ಗ್ರಾಮದ ಹೆಸರು |
|---|---|---|---|
| 1 | ಹೊಸಪುರ | 22 | ಮಗುವಿನಹಳ್ಳಿ |
| 2 | ಯಡವನಹಳ್ಳಿ | 23 | ಕಲಿಗೌಡನಹಳ್ಳಿ |
| 3 | ಕೋಟೆಕೆರೆ | 24 | ಸಿದ್ದಾಪುರ |
| 4 | ಮಂಚಹಳ್ಳಿ | 25 | ಶಿವಪುರ |
| 5 | ಸವಕನಹಳ್ಳಿ | 26 | ಹುಂಡಿಪುರ |
| 6 | ಅಲತೂರು | 27 | ಕೆಬ್ಬೆಪುರ |
| 7 | ದೇಶಿಪುರ | 28 | ಮಂಗಳ |
| 8 | ಬರಗಿ | 29 | ಕನಿಯನ್‌ಪುರ್ |
| 9 | ಹೊಂಗಹಳ್ಳಿ | 30 | ಜಕ್ಕಹಳ್ಳಿ |
| 10 | ಮಸಹಳ್ಳಿ | 31 | ಲೊಕ್ಕೆರೆ |
| 11 | ಚನ್ನಮಲ್ಲಿಪುರ | 32 | ಯಲಚೆಟ್ಟಿ |
| 12 | ಮದ್ದೂರು | 33 | ಬೆಲವಾಡಿಹುಂಡಿ |
| 13 | ಬಾಚನಹಳ್ಳಿ | 34 | ಶೆಟ್ಟಿಹಳ್ಳಿ |
| 14 | ಬೇರಂಬಾಡಿ | 35 | ಬಾಚಳ್ಳಿ |
| 15 | ಲಕ್ಕಿಪುರ್ | 36 | ಮಲಪುರ |
| 16 | ಕನ್ನಗಲ್ | 37 | ಯರಿಯೂರು |
| 17 | ಕುನಗಳ್ಳಿ | 38 | ಹೆಗ್ಗವಾಡಿ |
| 18 | ಕಲ್ಲಿಪುರ | 39 | ಕುಂದುಕೆರೆ |
| 19 | ಹಂಗಳಹೊಸಹಳ್ಳಿ | 40 | ಚಿರಕಾನಹಳ್ಳಿ |
| 20 | ಹಂಗಳ | 41 | ಕಡಬೂರು |
| 21 | ಸಿದ್ದೈಯನಪುರ | 42 | ರಾಮಯ್ಯನಪುರ |

| ಊ) | ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರದಲ್ಲಿ ಕಾಡಾನೆಗಳ ಹಾವಳಿ ಇರುವ ಪ್ರದೇಶಗಳಲ್ಲಿ ರೈಲ್ವೆ ಕಂಬಿಗಳನ್ನು ಯಾವ ಕಾಲಮಿತಿಯೊಳಗೆ ಅಳವಡಿಸಲಾಗುವುದು (ವಿವರ ನೀಡುವುದು) | ಬಂಡೀಪುರ ವಿಭಾಗದಲ್ಲಿ ಕಾಡಾನೆಗಳ ಹಾವಳಿ ನಿಯಂತ್ರಿಸುವ ನಿಟ್ಟಿನಲ್ಲಿ 126.00 ಕಿ.ಮೀ., ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಮಾಡಲು ಪ್ರಸ್ತಾವನೆ ಇದ್ದು, 2018-19ನೇ ಸಾಲಿನವರೆಗೆ ಒಟ್ಟು 29.00 ಕಿ.ಮೀ ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಮಾಡಲಾಗಿದೆ. ಇನ್ನುಳಿದಂತೆ, 2019-20ನೇ ಸಾಲಿಗೆ 12.00 ಕಿ.ಮೀ., ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಮಾಡಲು ಗುರಿಯನ್ನು ನಿಗದಿಪಡಿಸಲಾಗಿದೆ. ಉಳಿದ 85.00 ಕಿ.ಮೀ., ರೈಲ್ವೆ ಬ್ಯಾರಿಕೇಡ್ ಅಳವಡಿಕೆ ಕಾಮಗಾರಿಯ ನಿರ್ಮಾಣವನ್ನು ಮುಂದಿನ ವರ್ಷಗಳಲ್ಲಿ ಅನುದಾನ ಲಭ್ಯತೆಗೆ ಅನುಗುಣವಾಗಿ ಕೈಗೊಳ್ಳಲಾಗುವುದು. |
|---|---|---|

ಸಂಖ್ಯೆ: ಅಪಜೀ 70 ಎಫ್ ಡಬ್ಲ್ಯೂ ಎಲ್ 2020

18/03/20

(ಆನಂದ್ ಸಿಂಗ್)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

25

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ47ಹೆಚ್‌ಪಿಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 18.03.2020

19/3/2020

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಉನ್ನತ ಶಿಕ್ಷಣ ಇಲಾಖೆ,

**ಇವರಿಗೆ**

ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ
ಬೆಂಗಳೂರು

ಮಾನ್ಯರೆ

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅಶೋಕ ನಾಯಕ ಕೆ.ಬಿ. (ಶಿವಮೊಗ್ಗ ಗ್ರಾ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2423 ಕ್ಕೆ ಉತ್ತರ ಒದಗಿಸುತ್ತಿರುವ ಬಗ್ಗೆ.

**ಉಲ್ಲೇಖ:** ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ2423/2020, ದಿನಾಂಕ: 6/3/2020

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅಶೋಕ ನಾಯಕ ಕೆ.ಬಿ (ಶಿವಮೊಗ್ಗ ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: _____ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ

(ಎನ್.ಆರ್ ಎರೆಕುಪ್ಪಿ)
ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ಆಂತರಿಕ ಆರ್ಥಿಕ ಸಲಹೆಗಾರರು,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 2423 |
| ಸದಸ್ಯರ ಹೆಸರು | : ಶ್ರೀ ಅಶೋಕ್ ನಾಯಕ್ ಕೆ.ಬಿ. (ಶಿವಮೊಗ್ಗ ಗ್ರಾಮಾಂತರ) |
| ಉತ್ತರಿಸುವ ದಿನಾಂಕ | : 19.03.2020 |
| ಉತ್ತರಿಸುವ ಸಚಿವರು | : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಹೊಸದಾಗಿ ಎಷ್ಟು ಪ್ರಥಮ ದರ್ಜೆ ಕಾಲೇಜುಗಳನ್ನು ಪ್ರಾರಂಭಿಸಲಾಗಿದೆ. (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ 16 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಪ್ರಾರಂಭಿಸಲಾಗಿದೆ. ವಿಧಾನಸಭಾ ಕ್ಷೇತ್ರವಾರು, ಮಾಹಿತಿಯನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ. |
| ಆ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಪ್ರಾರಂಭಿಸಲು ಎಷ್ಟು ಪ್ರಸ್ತಾವನೆಗಳು ಸಲ್ಲಿಕೆಯಾಗಿವೆ. ಇವುಗಳಲ್ಲಿ ಎಷ್ಟು ಕಾಲೇಜುಗಳಿಗೆ ಮಂಜೂರಾತಿ ನೀಡಲಾಗಿದೆ; ಉಳಿಕೆ ಪ್ರಸ್ತಾವನೆಗಳಿಗೆ ಯಾವಾಗ ಮಂಜೂರಾತಿ ನೀಡಲಾಗುವುದು; (ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಪ್ರಾರಂಭಿಸಲು ಒಟ್ಟು 37 ಪ್ರಸ್ತಾವನೆಗಳು ಸಲ್ಲಿಕೆಯಾಗಿವೆ. ಇವುಗಳಲ್ಲಿ 16 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಮಂಜೂರಾತಿ ನೀಡಲಾಗಿದೆ.<br>ಉಳಿದ ಪ್ರಸ್ತಾವನೆಗಳಿಗೆ ಸಂಬಂಧಿಸಿದಂತೆ ಯಾವುದೇ ತೀರ್ಮಾನವಾಗಿರುವುದಿಲ್ಲ. ವಿಧಾನಸಭಾ ಕ್ಷೇತ್ರವಾರು ಮಾಹಿತಿಯನ್ನು **ಅನುಬಂಧ-2** ರಲ್ಲಿ ಲಗತ್ತಿಸಿದೆ. |
| ಇ) | ಶಿವಮೊಗ್ಗ ಗ್ರಾಮಾಂತರ ಕ್ಷೇತ್ರ ವ್ಯಾಪ್ತಿಯ ಆನವೇರಿ ಗ್ರಾಮವು ಎಲ್ಲಾ ರೀತಿಯಲ್ಲಿ ಅರ್ಹತೆ ಮತ್ತು ಅವಶ್ಯಕತೆ ಹೊಂದಿದ್ದು ಪ್ರಸ್ತಾವನೆ ಸಲ್ಲಿಸಿದ್ದರೂ ಸಹ ಪ್ರಥಮ ದರ್ಜೆ ಕಾಲೇಜನ್ನು ಮಂಜೂರು ಮಾಡದಿರಲು ಕಾರಣವೇನು; | ಶಿವಮೊಗ್ಗ ಗ್ರಾಮಾಂತರ ಕ್ಷೇತ್ರ ವ್ಯಾಪ್ತಿಯ ಆನವೇರಿ ಗ್ರಾಮವೂ ಸೇರಿದಂತೆ ಪ್ರಸ್ತುತ ಸಾಲಿನಲ್ಲಿ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಪದವಿ ಕಾಲೇಜುಗಳ ಗುಣಮಟ್ಟವನ್ನು ಸುಧಾರಿಸುವತ್ತ ಹೆಚ್ಚಿನ ಆದ್ಯತೆ ನೀಡಲಾಗುತ್ತಿದ್ದು, ಹೊಸ ಕಾಲೇಜುಗಳನ್ನು ಪ್ರಾರಂಭಿಸುವ ಕುರಿತಂತೆ ಮಂಜೂರಾತಿ ನೀಡಲಾಗುತ್ತಿಲ್ಲ. ಯಾವುದೇ ಸ್ಥಳದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಪ್ರಾರಂಭಿಸದಿರಲು ನಿರ್ಧರಿಸಿದೆ. |
| ಈ) | 2020-21ನೇ ಸಾಲಿನಲ್ಲಿ ಆನವೇರಿ ಪ್ರಥಮ ದರ್ಜೆ ಕಾಲೇಜಿಗೆ ಅನುಮೋದನೆ ನೀಡಲಾಗುವುದೇ; | |

ಸಂಖ್ಯೆ: ಇಡಿ 47 ಹೆಚ್‌ಪಿಸಿ 2020

**(ಡಾ: ಅಶ್ವಥ್ ನಾರಾಯಣ ಸಿ.ಎನ್)**
ಉಪ ಮುಖ್ಯಮಂತ್ರಿ ಹಾಗೂ
ಉನ್ನತ ಶಿಕ್ಷಣ ಸಚಿವರು

ಅನುಬಂಧ-2

## ಕಳೆದ ಮೂರು ವರ್ಷಗಳಲ್ಲಿ ಹೊಸ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಪ್ರಾರಂಭಕ್ಕಾಗಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವ ಪಟ್ಟಿ

| ಕ್ರ.ಸಂ. | ಸ್ಥಳ | ತಾಲ್ಲೂಕು | ಜಿಲ್ಲೆ | ಪ್ರಸ್ತಾವನೆ ಸಲ್ಲಿಸಿರುವ ವರ್ಷ/ದಿನಾಂಕ |
|---|---|---|---|---|
| 1 | ಜೀನಹಳ್ಳಿ | ಹೊನ್ನಾಳಿ | ದಾವಣಗೆರೆ | ಕಾಶಿಇ/23/ಯೋಜನೆ/2015-16, ದಿ:21.01.2017 |
| 2 | ತಳಕಲ್ | ಯಲಬುರ್ಗಾ | ಕೊಪ್ಪಳ | ಕಾಶಿಇ/23/ಯೋಜನೆ/2015-16, ದಿ:14.03.2017 |
| 3 | ಹನುಮಸಾಗರ | ಕುಷ್ಟಗಿ | ಕೊಪ್ಪಳ | ಕಾಶಿಇ/23/ಯೋಜನೆ/2015-16, ದಿ:14.03.2017 |
| 4 | ಬೇವೂರು | ಯಲಬುರ್ಗಾ | ಕೊಪ್ಪಳ | ಕಾಶಿಇ/23/ಯೋಜನೆ/2015-16, ದಿ:14.03.2017 |
| 5 | ಹಿರೇಬಾಗೇವಾಡಿ | ಬೆಳಗಾವಿ | ಬೆಳಗಾವಿ | ಕಾಶಿಇ/15/ಯೋಜನೆ/2017-18, ದಿ:26.05.2017 |
| 6 | ನೆಂಪು (ಕರ್ಕುಂಜೆ ಗ್ರಾಮ) | ಕುಂದಾಪುರ | ಉಡುಪಿ | ಕಾಶಿಇ/23/ಯೋಜನೆ/2015-16,ದಿ:26.05.2017 |
| 7 | ಕೋಲಾರ (ವಸತಿಯುಕ್ತ ಕಾಲೇಜು) | ಮುಳಬಾಗಿಲು ತಾ॥ ಆವಣಿ ಹೋ | ಕೋಲಾರ | ಕಾಶಿಇ/ಶೈವಿ/27/2017-18, ದಿ:30.05.2017 |
| 8 | ಚಿತ್ರದುರ್ಗ (ವಸತಿಯುಕ್ತ ಕಾಲೇಜು) | ಹೊಳಲ್ಕೆರೆ ತಾ॥ ರಾಮಗಿರಿ ಹೋ ಮಲ್ಲಾಡಿಹಳ್ಳಿ | ಚಿತ್ರದುರ್ಗ | ಕಾಶಿಇ/ಶೈವಿ/27/2017-18, ದಿ:30.05.2017 |
| 9 | ಚಾಮರಾಜನಗರ (ವಸತಿಯುಕ್ತ ಕಾಲೇಜು) | ಕಸಬಾ ಹೋ ಯಡಪುರ ಗ್ರಾಮ | ಚಾಮರಾಜನಗರ | ಕಾಶಿಇ/ಶೈವಿ/27/2017-18, ದಿ:30.05.2017 |
| 10 | ಹಾವೇರಿ(ವಸತಿಯುಕ್ತ ಕಾಲೇಜು) | ದೇವಗಿರಿ ಗ್ರಾಮ | ಹಾವೇರಿ | ಕಾಶಿಇ/ಶೈವಿ/27/2017-18, ದಿ:30.05.2017 |
| 11 | ವಿಜಯಪುರ (ವಸತಿಯುಕ್ತ ಕಾಲೇಜು) | ಹಡಲಗೇರಿ ಮುದ್ದೇಬಿಹಾಳ ತಾ॥ | ವಿಜಯಪುರ | ಕಾಶಿಇ/ಶೈವಿ/27/2017-18, ದಿ:30.05.2017 |
| 12 | ಕಲಬುರ್ಗಿ (ವಸತಿಯುಕ್ತ ಕಾಲೇಜು) | ಸೇಡಂ ತಾ॥ ಗುಂಡೇಪಲ್ಲಿ ಗ್ರಾಮ | ಕಲಬುರ್ಗಿ | ಕಾಶಿಇ/ಶೈವಿ/27/2017-18, ದಿ:30.05.2017 |
| 13 | ರಾಯಚೂರು (ವಸತಿಯುಕ್ತ ಕಾಲೇಜು) | ಕವಿತಾಳ ಹೋ/ಗ್ರಾಮ | ರಾಯಚೂರು | ಕಾಶಿಇ/ಶೈವಿ/27/2017-18, ದಿ:30.05.2017 |
| 14 | ಯಾದಗಿರಿ(ವಸತಿಯುಕ್ತ ಕಾಲೇಜು) | ಮುದ್ನಾಳ ಗ್ರಾಮ | ಯಾದಗಿರಿ | ಕಾಶಿಇ/ಶೈವಿ/27/2017-18, ದಿ:30.05.2017 |
| 15 | ಕೊಪ್ಪಳ(ವಸತಿಯುಕ್ತ ಕಾಲೇಜು) | ಯಲಬುರ್ಗಾ ತಾ॥, ತಳಬಾಳ ಗ್ರಾಮ | ಕೊಪ್ಪಳ | ಕಾಶಿಇ/ಶೈವಿ/27/2017-18, ದಿ:30.05.2017 |
| 16 | ಬೀದರ್(ವಸತಿಯುಕ್ತ ಕಾಲೇಜು) | ಹಾಲಹಳ್ಳಿ(ಬೀದರ್‌ನ ಸ್ನಾತಕೋತ್ತರ ಕೇಂದ್ರ ಆವರಣ) | ಬೀದರ್ | ಕಾಶಿಇ/ಶೈವಿ/27/2017-18, ದಿ:30.05.2017 |
| 17 | ಹಂಪಾಪುರ | ಹೆಚ್.ಡಿ.ಕೋಟೆ | ಮೈಸೂರು | ಕಾಶಿಇ/23/ಯೋಜನೆ/2015-16,ದಿ:06.06.2017 |

| ಕ್ರ.ಸಂ. | ಸ್ಥಳ | ತಾಲ್ಲೂಕು | ಜಿಲ್ಲೆ | [illegible] |
|---|---|---|---|---|
| 18 | ಶ್ರೀನಿವಾಸಪುರ (ಮಹಿಳಾ) | ಶ್ರೀನಿವಾಸಪುರ | ಕೋಲಾರ | ಕಾಶಿಇ/23/ಯೋಜನೆ/2015-16, ದಿ:16.10.2017 |
| 19 | ಹಂದನಕೆರೆ | ಚಿಕ್ಕನಾಯಕನಹಳ್ಳಿ | ತುಮಕೂರು | ಕಾಶಿಇ/23/ಯೋಜನೆ/2015-1 ದಿ:12.01.2018 |
| 20 | ಹಾಗಲವಾಡಿ | ಗುಬ್ಬಿ | ತುಮಕೂರು | ಕಾಶಿಇ/23/ಯೋಜನೆ/2015-16, ದಿ:12.01.2018 |
| 21 | ಯಡಹಳ್ಳಿ (ಮಹಿಳಾ) | ಮುಧೋಳ | ಬಾಗಲಕೋಟೆ | ಕಾಶಿಇ/23/ಯೋಜನೆ/2015-16, ದಿ:5.07.2018 |
| 22 | ದೇವನೂರು ಬಡಾವಣೆ | ಮೈಸೂರು | ಮೈಸೂರು | ಕಾಶಿಇ/27/ಯೋಜನೆ/2018-19, ದಿ:16.08.2018 |
| 23 | ರಾಮನಗರ (ವಸತಿಯುಕ್ತ ಕಾಲೇಜು) | - | ರಾಮನಗರ | ಕಾಶಿಇ/09/ವಯುಕಾಲೇಜು/ಯೋಜನೆ/2018-19, 05.06.2018 |
| 24 | ಹರದನಹಳ್ಳಿ (ವಸತಿಯುಕ್ತ ಮಹಿಳಾ ಕಾಲೇಜು) | ಹೊಳೆನರಸೀಪುರ | ಹಾಸನ | ಕಾಶಿಇ/25/ವಯುಮಕಾಲೇಜು/ಯೋಜನೆ/2018-19, 03.08.2018 |
| 25 | ಆಲಮಟ್ಟಿ | ಬಸವನಬಾಗೇವಾಡಿ | ವಿಜಯಪುರ | ಕಾಶಿಇ/23/ಯೋಜನೆ/2015-16, ದಿ:16.10.2018 |
| 26 | ಬೇಲೂರು (ಮಹಿಳಾ) | ಬೇಲೂರು | ಹಾಸನ | ಕಾಶಿಇ/23/ಯೋಜನೆ/2015-16, ದಿ:29.10.2018 |
| 27 | ಜಯಪುರ | ಮೈಸೂರು | ಮೈಸೂರು | ಕಾಶಿಇ/23/ಯೋಜನೆ/2015-16, ದಿ:29.10.2018 |
| 28 | ವಡಗಾವಿ | ಬೆಳಗಾವಿ | ಬೆಳಗಾವಿ | ಕಾಶಿಇ/23/ಯೋಜನೆ/2015-16, ದಿ:29.10.2018 |
| 29 | ಗುಳೇದಗುಡ್ಡ | ಬಾದಾಮಿ | ಬಾಗಲಕೋಟೆ | ಕಾಶಿಇ/11/ಯೋಜನೆ/2018-19, ದಿ:16.11.2018 |
| 30 | ಬೆಳ್ಳಾವಿ | ತುಮಕೂರು | ತುಮಕೂರು | ಕಾಶಿಇ/ಶೈವಿ/171/ಕಾ.ಸ್ಥಳಾಂತರ/2018-19, |
| 31 | ಕೆಸ್ತೂರು | ಮದ್ದೂರು | ಮಂಡ್ಯ | ಕಾಶಿಇ/03/ಯೋಜನೆ/2018-19, 22.02.2019 |
| 32 | ಬಸರಾಳು | ಮಂಡ್ಯ | ಮಂಡ್ಯ | ಕಾಶಿಇ/03/ಯೋಜನೆ/2018-19, 22.02.2019 |
| 33 | ಆನವೇರಿ | ಭದ್ರಾವತಿ | ಶಿವಮೊಗ್ಗ | ಕಾಶಿಇ/03/ಯೋಜನೆ/2018-19, ದಿ:15.05.2019 |
| 34 | ಹೆಬ್ಬಾಲೆ | ಸೋಮವಾರಪೇಟೆ | ಕೊಡಗು | ಕಾಶಿಇ/03/ಯೋಜನೆ/2018-19, ದಿ:19.06.2019 |
| 35 | ಕೊಂಡ್ಲಹಳ್ಳಿ | ಮೊಳಕಾಲ್ಮೂರು | ಚಿತ್ರದುರ್ಗ | ಕಾಶಿಇ/03/ಯೋಜನೆ/2018-19, ದಿ:19.06.2019 |
| 36 | ವಾಡಿ | ಚಿತ್ತಾಪೂರ | ಗುಲ್ಬರ್ಗಾ | ಕಾಶಿಇ/03/ಯೋಜನೆ/2018-19, ದಿ:20.06.2019 |
| 37 | ನಿಪ್ಪಾಣಿ | ನಿಪ್ಪಾಣಿ | ಬೆಳಗಾವಿ | ಕಾಶಿಇ/03/ಯೋಜನೆ/2018-19, ದಿ:06.09.2019 |

ಕಾಲೇಜು ಶಿಕ್ಷಣ ನಿರ್ದೇಶಕರು

ಅನುಬಂಧ-3

## ಕಳೆದ ಮೂರು ವರ್ಷಗಳಲ್ಲಿ ಮಂಜೂರಾತಿ ನೀಡಲಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಪಟ್ಟಿ

| ಕ್ರ.ಸಂ. | ಸ್ಥಳ | ತಾಲ್ಲೂಕು | ಜಿಲ್ಲೆ |
|---|---|---|---|
| 1 | ಕೋಲಾರ (ವಸತಿಯುಕ್ತ ಕಾಲೇಜು) | ಮುಳಬಾಗಿಲು ತಾ॥ ಆವಣಿ ಹೋ | ಕೋಲಾರ |
| 2 | ಚಿತ್ರದುರ್ಗ (ವಸತಿಯುಕ್ತ ಕಾಲೇಜು) | ಹೊಳಲ್ಕೆರೆ ತಾ॥ ರಾಮಗಿರಿ ಹೋ ಮಲ್ಲಾಡಿಹಳ್ಳಿ | ಚಿತ್ರದುರ್ಗ |
| 3 | ಚಾಮರಾಜನಗರ (ವಸತಿಯುಕ್ತ ಕಾಲೇಜು) | ಕಸಬಾ ಹೋ ಯಡಮುರ ಗ್ರಾಮ | ಚಾಮರಾಜನಗರ |
| 4 | ಹಾವೇರಿ(ವಸತಿಯುಕ್ತ ಕಾಲೇಜು)- | ದೇವಗಿರಿ ಗ್ರಾಮ | ಹಾವೇರಿ |
| 5 | ವಿಜಯಪುರ (ವಸತಿಯುಕ್ತ ಕಾಲೇಜು) | ಹಡಲಗೇರಿ ಮುದ್ದೇಬಿಹಾಳ ತಾ॥ | ವಿಜಯಪುರ |
| 6 | ಕಲಬುರ್ಗಿ (ವಸತಿಯುಕ್ತ ಕಾಲೇಜು) | ಸೇಡಂ ತಾ॥ ಗುಂಡೇಪಲ್ಲಿ ಗ್ರಾಮ | ಕಲಬುರ್ಗಿ |
| 7 | ರಾಯಚೂರು (ವಸತಿಯುಕ್ತ ಕಾಲೇಜು) | ಕವಿತಾಳ ಹೋ/ಗ್ರಾಮ | ರಾಯಚೂರು |
| 8 | ಯಾದಗಿರಿ(ವಸತಿಯುಕ್ತ ಕಾಲೇಜು) | ಮುದ್ನಾಳ ಗ್ರಾಮ | ಯಾದಗಿರಿ |
| 9 | ಕೊಪ್ಪಳ(ವಸತಿಯುಕ್ತ ಕಾಲೇಜು) | ಯಲಬುರ್ಗಾ ತಾ॥, ತಳಬಾಳ ಗ್ರಾಮ | ಕೊಪ್ಪಳ |
| 10 | ಬೀದರ್(ವಸತಿಯುಕ್ತ ಕಾಲೇಜು) | ಹಾಲಹಳ್ಳಿ(ಬೀದರ್‌ನ ಸ್ನಾತಕೋತ್ತರ ಕೇಂದ್ರ ಆವರಣ) | ಬೀದರ್ |
| 11 | ಯಡಹಳ್ಳಿ (ಮಹಿಳಾ) | ಮುಧೋಳ | ಬಾಗಲಕೋಟೆ |
| 12 | ರಾಮನಗರ (ವಸತಿಯುಕ್ತ ಕಾಲೇಜು) | – | ರಾಮನಗರ |
| 13 | ಹರದನಹಳ್ಳಿ (ವಸತಿಯುಕ್ತ ಮಹಿಳಾ ಕಾಲೇಜು) | ಹೊಳೆನರಸೀಪುರ | ಹಾಸನ |
| 14 | ಗುಳೇದಗುಡ್ಡ | ಬಾದಾಮಿ | ಬಾಗಲಕೋಟೆ |
| 15 | ಕೆಸ್ತೂರು | ಮದ್ದೂರು | ಮಂಡ್ಯ |
| 16 | ಬೆಳ್ಳಾವಿ | ತುಮಕೂರು | ತುಮಕೂರು |

ಕಾಲೇಜು ಶಿಕ್ಷಣ ನಿರ್ದೇಶಕರು

ಅನುಬಂಧ-1

**ಕಳೆದ ಮೂರು ವರ್ಷಗಳಲ್ಲಿ ಪ್ರಾರಂಭಿಸಲಾಗಿರುವ ಹೊಸ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಮತಕ್ಷೇತ್ರವಾರು/ವರ್ಷವಾರು ಪಟ್ಟಿ**

| ಕ್ರ.ಸಂ. | ಕಾಲೇಜಿನ ವಿವರ | ಮತಕ್ಷೇತ್ರ | ಪ್ರಾರಂಭಿಸಲಾದ ವರ್ಷ |
|---|---|---|---|
| 1 | 2 | 3 | 4 |
| 1 | ಸ.ಪ್ರ.ದ.ಮಹಿಳಾ ಕಾಲೇಜು, ಗಂಧದಕೋಠಿ, ಹಾಸನ ಜಿಲ್ಲೆ | ಹಾಸನ | 2016-17 |
| 2 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮುಳಬಾಗಿಲು, | ಮುಳಬಾಗಿಲು | 2017-18 |
| 3 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿತ್ರದುರ್ಗ | ಚಿತ್ರದುರ್ಗ | 2017-18 |
| 4 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಾಮರಾಜನಗರ | ಚಾಮರಾಜ ನಗರ | 2017-18 |
| 5 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಾವೇರಿ | ಹಾವೇರಿ | 2017-18 |
| 6 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯಪುರ | ವಿಜಯಪುರ | 2017-18 |
| 7 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಲಬುರ್ಗಿ | ಕಲಬುರ್ಗಿ | 2017-18 |
| 8 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ರಾಯಚೂರು | ರಾಯಚೂರು | 2017-18 |
| 9 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಯಾದಗಿರಿ | ಯಾದಗಿರಿ | 2017-18 |
| 10 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೊಪ್ಪಳ | ಕೊಪ್ಪಳ | 2017-18 |
| 11 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬೀದರ್ | ಬೀದರ್ | 2017-18 |
| 12 | ವಸತಿಯುಕ್ತ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ರಾಮನಗರ ಜಿಲ್ಲೆ | ರಾಮನಗರ | 2018-19 |
| 13 | ವಸತಿಯುಕ್ತ ಸ.ಪ್ರ.ದ.ಮಹಿಳಾ ಕಾಲೇಜು, ಹರದನಹಳ್ಳಿ, ಹಾಸನ ಜಿಲ್ಲೆ | ಹೊಳೆನರಸೀ ಪುರ | 2018-19 |
| 14 | ಸ.ಪ್ರ.ದ.ಮಹಿಳಾ ಕಾಲೇಜು, ಯಡಹಳ್ಳಿ, ಮುಧೋಳ ತಾ॥, ಬಾಗಲಕೋಟೆ ಜಿಲ್ಲೆ | ಮುಧೋಳ | 2018-19 |
| 15 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬೆಳ್ಳಾವಿ, ತುಮಕೂರು ತಾ॥ ಮತ್ತು ಜಿಲ್ಲೆ | ತುಮಕೂರು (ಗ್ರಾ) | 2019-20 |
| 16 | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಳೇದಗುಡ್ಡ, ಬಾದಾಮಿ ತಾ।, ಬಾಗಲಕೋಟೆ ಜಿಲ್ಲೆ | ಬಾದಾಮಿ | 2019-20 |

ಕಾಲೇಜು ಶಿಕ್ಷಣ ನಿರ್ದೇಶಕರು

ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 26 ಎಫ್‌ಟಿಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:19-03-2020.

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2574ಕ್ಕೆ ಉತ್ತರಿಸುವ ಬಗ್ಗೆ.

*****

ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2574ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

(ಗಾಯತ್ರಿ. ಎಲ್)
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

# ಕರ್ನಾಟಕ ವಿಧಾನ ಸಭೆ
## (15ನೇ ವಿಧಾನಸಭೆ, 6ನೇ ಅಧಿವೇಶನ)

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2574 |
| ಸದಸ್ಯರ ಹೆಸರು | : | ಶ್ರೀ ಹ್ಯಾರಿಸ್.ಎನ್.ಎ (ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | : | 19-03-2020 |
| ಉತ್ತರಿಸುವವರು | : | ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಹೆದ್ದಾರಿ ಮತ್ತು ಪ್ರಮುಖ ರಸ್ತೆಗಳ ಬದಿಗಳಲ್ಲಿ ಅರಣ್ಯ ಇಲಾಖೆ ಹಮ್ಮಿಕೊಂಡಿರುವ ಸಾಲು ಮರ ಬೆಳೆಸುವ ಯೋಜನೆ ಪರಿಣಾಮಕಾರಿಯಾಗಿ ಜಾರಿಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ರೀತಿ ಸಸಿಗಳನ್ನು ನೆಟ್ಟು ಮರ ಬೆಳೆಸಲು ಸರ್ಕಾರ ರೂಪಿಸಿರುವ ಮಾರ್ಗಸೂಚಿಗಳ (ವಿವರ ನೀಡುವುದು) | ಬಂದಿರುವುದಿಲ್ಲ.<br><br>ಸರ್ಕಾರದ ಆದೇಶ ಸಂಖ್ಯೆ:ಅಪಜೀ 168 ಎಫ್‌ಡಿಪಿ 2017, ದಿನಾಂಕ 06.12.2018ರ ಮಾರ್ಗಸೂಚಿ ಪ್ರಕಾರ ನೆಡುತೋಪು ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಸರ್ಕಾರ 2016-17 ರಿಂದ 2019-20ನೇ ಸಾಲಿನಲ್ಲಿ ರಾಜ್ಯದ ಹೆದ್ದಾರಿ ಮತ್ತು ಪ್ರಮುಖ ರಸ್ತೆಗಳ ಬದಿಯಲ್ಲಿ ಸಸಿಗಳನ್ನು ನೆಡಲು ಇಲಾಖೆಯವರು ನಿಗದಿಪಡಿಸಿರುವ ಮತ್ತು ಜನವರಿ 2020ರ ಅಂತ್ಯದವರೆಗೆ ವೆಚ್ಚ ಮಾಡಿದ ಅನುದಾನವೆಷ್ಟು; (ವರ್ಷವಾರು, ಜಿಲ್ಲಾವಾರು ವಿವರಗಳನ್ನು ನೀಡುವುದು) | 2016-17 ರಿಂದ 2019-2020 ನೇ ಸಾಲಿನ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಇ) | ಈ ಯೋಜನಾನುಷ್ಠಾನದ ಗುರಿ ಮತ್ತು ಸಾಧನೆ ಪ್ರಗತಿಯ ವಿವರಗಳನ್ನು ನೀಡುವುದು? | |

ಸಂಖ್ಯೆ: ಅಪಜೀ 26 ಎಫ್‌ಟಿಎಸ್ 2020

(ಆನಂದ ಸಿಂಗ್)
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2501
ಸದಸ್ಯರ ಹೆಸರು : ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ)
ಉತ್ತರಿಸುವ ದಿನಾಂಕ : 19-03-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

| ಪ್ರಶ್ನೆ | | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಹೊಸದಾಗಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನು ಮಂಜೂರು ಮಾಡಲಾಗುತ್ತಿದೆಯೆ; | ರಾಜ್ಯದ 361 ಸರ್ಕಾರಿ ಪ್ರೌಢ ಶಾಲೆಗಳನ್ನು ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನಾಗಿ ಉನ್ನತೀಕರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆ. |
| ಆ | ವಿಜಯಪುರ ಜಿಲ್ಲೆಯಲ್ಲಿ ಹೊಸ ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನು ಮಂಜೂರು ಮಾಡುವ ಪ್ರಸ್ತಾವನೆಗಳು ಸರ್ಕಾರದ ಮುಂದೆ ಇವೆಯೆ; | ಇದೆ. |
| ಇ | ಹಾಗಿದ್ದಲ್ಲಿ, ಹೊಸದಾಗಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಮಂಜೂರಾತಿಗೆ ಇದುವರೆಗೂ ಸರ್ಕಾರ ಕೈಕೊಂಡಿರುವ ಕ್ರಮಗಳೇನು; | ಸದರಿ ಕಾಲೇಜುಗಳನ್ನು ಉನ್ನತೀಕರಿಸಲು ಕೆಳಕಂಡ ಮಾಹಿತಿಗಳನ್ನು ಕ್ರೋಢೀಕರಿಸಲಾಗುತ್ತಿದ್ದು, ಸದರಿ ವಿವರಗಳನ್ನು ಪಡೆದು ಆರ್ಥಿಕ ಇಲಾಖೆಯ ಸಹಮತಿಗೆ ಕಳುಹಿಸಲು ಕ್ರಮವಹಿಸಲಾಗುತ್ತಿದೆ.<br>1. ಈ ಪ್ರೌಢಶಾಲೆಗಳನ್ನು ಉನ್ನತೀಕರಿಸುವ ಮಾನದಂಡಗಳು:<br>2. ಉನ್ನತೀಕರಿಸುವಂತಹ ಪ್ರದೇಶಗಳಲ್ಲಿ ಎಸ್.ಎಸ್.ಎಲ್.ಸಿ. ಯಿಂದ ಪದವಿ ಪೂರ್ವ ಶಿಕ್ಷಣಕ್ಕೆ ಬರುವ ಸರಾಸರಿ ವಿದ್ಯಾರ್ಥಿಗಳ ವಿವರಗಳು;<br>3. ಕೆ.ಪಿ.ಶಾಲೆಗಳಡಿ ಈ ಕಾಲೇಜುಗಳನ್ನು ಉನ್ನತೀಕರಿಸಲು ಇರುವ ಅವಕಾಶದ ಬಗ್ಗೆ ಮಾಹಿತಿ;<br>4. ಪದವಿ ಪೂರ್ವ ಕಾಲೇಜಿನಲ್ಲಿ ವಿದ್ಯಾರ್ಥಿಗಳ ಗರಿಷ್ಠ/ಕನಿಷ್ಠ ಸಂಖ್ಯೆಯ ವಿವರ;<br>5. ಉಪನ್ಯಾಸಕರ ವಿವರಗಳ ಬಗ್ಗೆ ಸ್ಪಷ್ಟ ಸಂಖ್ಯೆಯ/ಮೊತ್ತದ ಮಾಹಿತಿ; |
| ಈ | ವಿಜಯಪುರ ಜಿಲ್ಲೆಯ ಇಂಗಳೇಶ್ವರ, ವಂದಾಲ, ಬೇನಾಳ ಎನ್.ಹೆಚ್. ಮತ್ತು ಮಸೂತಿ ಗ್ರಾಮಗಳಲ್ಲಿ ಹೊಸ ಸಕಾರಿ ಪದವಿ ಪೂರ್ವ ಕಾಲೇಜುಗಳನ್ನು ತೆರೆಯಲು ಕೈಕೊಂಡಿರುವ ಕ್ರಮಗಳೇನು; | ವಿಜಯಪುರ ಜಿಲ್ಲೆಯ ಇಂಗಳೇಶ್ವರ, ವಂದಾಲ, ಮಸೂತಿ ಈ ಗ್ರಾಮಗಳಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನು ಪ್ರಾರಂಭಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ.<br>ಮುಂದುವರೆದು ಬೇನಾಳ ಎನ್.ಹೆಚ್. ಗ್ರಾಮದಲ್ಲಿ ಸರ್ಕಾರಿ ಪ್ರೌಢಶಾಲೆ ಇದ್ದು, 4 ಎಕರೆ ನಿವೇಶನ ಇರುತ್ತದೆ. ಎಸ್.ಎಸ್.ಎಲ್.ಸಿ ಯಲ್ಲಿ 63 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದು, ಸದರಿ ಪ್ರೌಢಶಾಲೆಯನ್ನು ಪದವಿ ಪೂರ್ವ ಕಾಲೇಜನ್ನಾಗಿ ಉನ್ನತೀಕರಿಸುವ ಬಗ್ಗೆ ಪ್ರಸ್ತಾವನೆಯು ನಿರ್ದೇಶನಾಲಯದಲ್ಲಿ ಪರಿಶೀಲನಾ ಹಂತದಲ್ಲಿರುತ್ತದೆ. |

| ಉ | 2020-21ನೇ ಶೈಕ್ಷಣಿಕ ವರ್ಷದಿಂದ ವಿದ್ಯಾರ್ಥಿಗಳ ಹೆಚ್ಚಿನ ವ್ಯಾಸಂಗಕ್ಕಾಗಿ ಅನುಕೂಲವಾಗುವಂತೆ ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನು ಆರಂಭಿಸಲಾಗುವುದೇ? | ಸದರಿ ಕಾಲೇಜುಗಳನ್ನು ಉನ್ನತೀಕರಿಸಲು ಪ್ರಶ್ನೆ "ಇ" ರಲ್ಲಿ ವಿವರಿಸಿದ ಮಾಹಿತಿಗಳನ್ನು ಕ್ರೋಢೀಕರಿಸಲಾಗುತ್ತಿದ್ದು, ಸದರಿ ವಿವರಗಳನ್ನು ಪಡೆದು ಆರ್ಥಿಕ ಇಲಾಖೆಯ ಸಹಮತಿಗೆ ಕಳುಹಿಸಲು ಕ್ರಮವಹಿಸಲಾಗುತ್ತಿದೆ. |
|---|---|---|

ಸಂಖ್ಯೆ: ಇಪಿ 51 ಪಿಜಿಸಿ ಬ್ಲ್ಯೂ 2020

(ಎಸ್. ಸುರೇಶಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

70

ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 27 ಎಫ್‌ಟಿಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:19-03-2020.

19/3/2020

ಇಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ಹೂಲಗೇರಿ ಡಿ.ಎಸ್. (ಲಿಂಗಸುಗೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2559ಕ್ಕೆ ಉತ್ತರಿಸುವ ಬಗ್ಗೆ.

*****

ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ಹೂಲಗೇರಿ ಡಿ.ಎಸ್. (ಲಿಂಗಸುಗೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2559ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

(ಗಾಯತ್ರಿ. ಎಲ್)
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

# ಕರ್ನಾಟಕ ವಿಧಾನಸಭೆ

15ನೇ ವಿಧಾನಸಭೆ 6ನೇ ಅಧಿವೇಶನ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2559 |
| 2) | ಸದಸ್ಯರ ಹೆಸರು | : | ಶ್ರೀ ಹೂಲಗೇರಿ ಡಿ.ಎಸ್.<br>(ಲಿಂಗಸುಗೂರು) |
| 3) | ಉತ್ತರಿಸುವ ದಿನಾಂಕ | : | 19-03-2020. |
| 4) | ಉತ್ತರಿಸುವವರು | : | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು. |

<table>
<tr><th>ಕ್ರಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಯಚೂರು ಜಿಲ್ಲೆಯ ಲಿಂಗಸುಗೂರು ಪಟ್ಟಣದಲ್ಲಿ "ಟ್ರೀ ಪಾರ್ಕ್" ಮಂಜೂರು ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಯೋಜನೆಯ ಅಂದಾಜು ಮೊತ್ತವೆಷ್ಟು;</td><td>ರಾಯಚೂರು ಜಿಲ್ಲೆಯ ಲಿಂಗಸುಗೂರು ಪಟ್ಟಣದ ಅಡವಿಭಾವಿ ಪ್ರದೇಶದಲ್ಲಿ 2015-16ನೇ ಸಾಲಿನಲ್ಲಿ ಒಂದು ಟ್ರೀ ಪಾರ್ಕ್ ನಿರ್ಮಾಣ ಮಾಡಲಾಗಿದ್ದು, ಅನುದಾನದ ಲಭ್ಯತೆಯ ಮೇರೆಗೆ ಈವರೆಗೂ ಈ ಕೆಳಕಂಡಂತೆ ಅನುದಾನವನ್ನು ಬಿಡುಗಡೆ ಮಾಡಿ ಅಭಿವೃದ್ಧಿ ಪಡಿಸಲಾಗುತ್ತಿದೆ.
<table>
<tr><th>ವರ್ಷ</th><th>ಹಂಚಿಕೆ ಮಾಡಿರುವ ಅನುದಾನ (ರೂ ಲಕ್ಷಗಳಲ್ಲಿ)</th></tr>
<tr><td>2015-16</td><td>15.460</td></tr>
<tr><td>2016-17</td><td>7.460</td></tr>
<tr><td>2017-18</td><td>15.000</td></tr>
<tr><td>2018-19</td><td>6.669</td></tr>
<tr><td>2019-20</td><td>13.940</td></tr>
<tr><td>ಒಟ್ಟು</td><td>58.529</td></tr>
</table>
</td></tr>
<tr><td>ಆ)</td><td>ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನಲ್ಲಿ ಇರುವ ಒಟ್ಟು ಅರಣ್ಯ ಪ್ರದೇಶವೆಷ್ಟು; ಅರಣ್ಯ ಪ್ರದೇಶವನ್ನು ಅಭಿವೃದ್ಧಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು;</td><td>ಲಿಂಗಸುಗೂರು ತಾಲೂಕಿನ ವ್ಯಾಪ್ತಿಯಲ್ಲಿರುವ ಅರಣ್ಯ ಪ್ರದೇಶದ ವಿವರ ಈ ಕೆಳಗಿನಂತಿದೆ. (ವಿಸ್ತೀರ್ಣ: ಹೆಕ್ಟೇರ್‌ಗಳಲ್ಲಿ)
<table>
<tr><th>ಕಾಯ್ದಿಟ್ಟ ಅರಣ್ಯ</th><th>ರಕ್ಷಿತ ಅರಣ್ಯ</th><th>ಸೆಕ್ಷನ್-4 ಅಧಿಸೂಚಿತ ಅರಣ್ಯ</th><th>ಅವರ್ಗೀಕೃತ ಅರಣ್ಯ</th><th>ದಾಖಲೆಗಳಲ್ಲಿ ಅರಣ್ಯ</th><th>ಒಟ್ಟು</th></tr>
<tr><td>2750.46</td><td>329.94</td><td>644.29</td><td>7358.59</td><td>40.95</td><td>11124.23</td></tr>
</table>
ಮುಂದುವರೆದು, ಲಿಂಗಸುಗೂರು ತಾಲ್ಲೂಕಿನ ಅರಣ್ಯ ಪ್ರದೇಶವನ್ನು ಅಭಿವೃದ್ಧಿಪಡಿಸಲು ಕ್ಷೀಣಿತ ಅರಣ್ಯ ಪ್ರದೇಶಗಳಲ್ಲಿ ಕಾಲಕಾಲಕ್ಕೆ ನಿಗದಿಯಾಗುತ್ತಿರುವ ಅನುದಾನಕ್ಕೆ ತಕ್ಕಂತೆ ನೆಡುತೋಪು ನಿರ್ಮಾಣ, ಗಡಿ ಸಂರಕ್ಷಣೆ ಮಾಡಲು ಜಾನುವಾರು ನಿರೋಧಕ ಕಂದಕ ನಿರ್ಮಾಣ ಮಾಡಲಾಗುತ್ತಿದೆ.<br><br>ಅರಣ್ಯ ಪ್ರದೇಶಕ್ಕೆ ಬೆಂಕಿ ಬೀಳದಂತೆ ಬೆಂಕಿ ನಿಯಂತ್ರಣ ಕಾಮಗಾರಿಗಳನ್ನು ಹಾಗೂ ನೈಸರ್ಗಿಕ ಅರಣ್ಯ ಪುನಶ್ಚೇತನ ಚಟುವಟಿಕೆಗಳನ್ನು ಕೈಗೊಳ್ಳಲಾಗುತ್ತಿದೆ. ಅಲ್ಲದೆ, ವಿವಿಧ ಅಭಿವೃದ್ಧಿ ಕಾಮಕಾರಿಗಳನ್ನು ಕೈಗೊಂಡ ವಿವರಗಳನ್ನು ಉಪಪ್ರಶ್ನೆ(ಇ)ಗೆ ಸಂಬಂಧಪಟ್ಟ ಅನುಬಂಧ-1 ರಲ್ಲಿ ಒದಗಿಸಿದೆ.</td></tr>
</table>

| ಇ) | 2017-18 ರಿಂದ 2019-20ನೇ ಸಾಲಿನವರೆಗೂ ಲಿಂಗಸುಗೂರು ವಿಧಾನಸಭಾ ಕ್ಷೇತ್ರಕ್ಕೆ ಅರಣ್ಯ, ಜೀವಶಾಸ್ತ್ರ, ಮತ್ತು ಪರಿಸರ ಇಲಾಖೆಯ ವಿವಿಧ ಯೋಜನೆಗಳಿಗೆ ಮಂಜೂರಾತಿಯಾಗಿರುವ ಅನುದಾನವೆಷ್ಟು; ಕೈಗೆತ್ತಿಕೊಂಡಿರುವ ಕಾಮಗಾರಿಗಳಾವುವು (ವಿವರ ನೀಡುವುದು)? | ವಿವರಗಳನ್ನು **ಅನುಬಂಧ-1 ಮತ್ತು ಅನುಬಂಧ-2**ರಲ್ಲಿ ಒದಗಿಸಿದೆ |
|---|---|---|

ಸಂಖ್ಯೆ: ಅಪಜೀ 27 ಎಫ್ ಟಿಎಸ್ 2020

18/03/2020
(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಅನುಬಂಧ - 1

ಎಲ್.ಎ.ಕ್ಯೂ. 2559

ಶ್ರೀ. ಡಿ.ಎಸ್. ಹೂಲಿಗೇರಿ

ಪ್ರಶ್ನೆ ಸಂ (ಇ)

2017–18 ರಿಂದ 2019–20ನೇ ಸಾಲಿನವರೆಗೂ ಲಿಂಗಸುಗೂರು ವಿಧಾನಸಭಾ ಕ್ಷೇತ್ರಕ್ಕೆ ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆಯ ವಿವಿಧ ಯೋಜನೆಗಳಿಗೆ ಮಂಜೂರಾತಿಗಿರುವ ಅನುದಾನವೆಷ್ಟು; ಕೈಗೆತ್ತಿಕೊಂಡಿರುವ ಕಾಮಗಾರಿಗಳಾವುವು

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ವರ್ಷ | ವಿಭಾಗ / ಜಿಲ್ಲೆ | ವಿಧಾನ ಸಭಾಕ್ಷೇತ್ರ | ಅರಣ್ಯ ಅಭಿವೃದ್ಧಿ ಕಾಮಗಾರಿಗಳು | | | | | | ಭರಿಸಿದ ವೆಚ್ಚ (ರೂ.ಲಕ್ಷಗಳಲ್ಲಿ) | ಒಟ್ಟು ವೆಚ್ಚ |
|---|---|---|---|---|---|---|---|---|---|---|---|
| | | | | ನೆಡುತೋಪು ನಿರ್ಮಾಣ | ನೆಡುತೋಪು ನಿರ್ವಹಣೆ | ಭರಿಸಿದ ವೆಚ್ಚ (ರೂ.ಲಕ್ಷಗಳಲ್ಲಿ) | ಮುಂಗಡ ಕಾಮಗಾರಿ | ಸಸಿಗಳನ್ನು ಬೆಳೆಸುವುದು / ವಿತರಣೆ | ಇತರೆ ಅರಣ್ಯ ಅಭಿವೃದ್ಧಿ ಕಾಮಗಾರಿ | | |
| | | | | ವಿಸ್ತೀರ್ಣ (ಹೆ. / ಕಿ.ಮೀ./ ಘ.ಮೀ. / | | | ವಿಸ್ತೀರ್ಣ (ಹೆ. / ಕಿ.ಮೀ./ ಘ.ಮೀ. / ಸಂಖ್ಯೆ) | | | | |
| 1 | 2017–18 | ರಾಯಚೂರು | ಲಿಂಗಸುಗೂರು | 217.00 | 760.26 | 152.860 | 46.00 | 113760 | 15.000 | 46.81 | 198.67 |
| 2 | 2018–19 | ರಾಯಚೂರು | ಲಿಂಗಸುಗೂರು | 61 | 514.19 | 129.933 | 25 | 23000 | 9.903 | 7.775 | 130.836 |
| 3 | 2019–20 | ರಾಯಚೂರು | ಲಿಂಗಸುಗೂರು | 31 | 543.19 | 103.13 | 50 | 59750 | 13.94 | 23.357 | 126.49 |
| | | | ಒಟ್ಟು | 309.00 | 1,817.64 | 385.92 | 121.00 | 1,96,500.00 | 38.84 | 76.94 | 464.99 |

Principal Chief Conservator of Forests
(Development), Bengaluru

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು
ಪ್ರಾದೇಶಿಕ ಅರಣ್ಯ ವಿಭಾಗ, ರಾಯಚೂರು

ಅನುಬಂಧ - ಬಿ

## 2017-18 ರಿಂದ 2019-20 ನೇ ಸಾಲಿನವರೆಗೂ ಲಿಂಗಸುಗೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಗೆ ಮಂಜೂರಾದ ಅನುದಾನದ ವಿವರ

| ವರ್ಷ | ಯೋಜನೆ | ಅನುದಾನ (ರೂ.ಲಕ್ಷಗಳಲ್ಲಿ) | ಕೈಗೊಂಡಿರುವ ಕಾಮಗಾರಿಗಳ ವಿವರ |
|---|---|---|---|
| 2017-18 | ಸಾಮಾಜಿಕ ಅರಣ್ಯ ಯೋಜನೆ | 51.60 | ನೆಡುತೋಪು ಬೆಳೆಸುವುದು, ನೆಡುತೋಪು ಪೋಷಣೆ, ಮುಂಗಡ ಕಾಮಗಾರಿ |
| 2017-18 | 2406-01-102-1-ಕೆಎಫ್‌ಡಿಎಫ್-03-ಫ್ಲಪ್ಮಂಡ್-139-ಪ್ರಧಾನ ಕಾಮಗಾರಿಗಳು (ರಸ್ತೆಬದಿ) | 3.676 | ರಸ್ತೆಬದಿ ಮುಂಗಡ ಗುಂಡಿ ತೆಗೆಯುವ ಕಾಮಗಾರಿ |
| 2017-18 | ಆರ್.ಎಸ್.ಪಿ.ಡಿ | 0.260 | ಸಸಿಗಳ ಪೋಷಣೆ |
| 2018-19 | ಸಾಮಾಜಿಕ ಅರಣ್ಯ ಯೋಜನೆ | 67.50 | ನೆಡುತೋಪು ಬೆಳೆಸುವುದು, ನೆಡುತೋಪು ಪೋಷಣೆ, ಮುಂಗಡ ಕಾಮಗಾರಿ |
| 2018-19 | 2406-01-102-1-ಕೆಎಫ್‌ಡಿಎಫ್-03-ಫ್ಲಪ್ಮಂಡ್-139-ಪ್ರಧಾನ ಕಾಮಗಾರಿಗಳು (ರಸ್ತೆಬದಿ) | 9.537 | ರಸ್ತೆಬದಿ ನೆಡುತೋಪು ಬೆಳೆಸುವುದು |
| 2018-19 | 2406-01-102-1-ಕೆಎಫ್‌ಡಿಎಫ್-03-ಫ್ಲಪ್ಮಂಡ್-139-ಪ್ರಧಾನ ಕಾಮಗಾರಿಗಳು (ಬ್ಲಾಕ್) | 25.506 | ನೆಡುತೋಪು ಬೆಳೆಸುವುದು |
| 2018-19 | 2406-01-101-2-83-ಎಫ್‌ಎನ್‌ಎಫ್‌ಪಿ-139-ಪ್ರಧಾನ ಕಾಮಗಾರಿಗಳು (ರಸ್ತೆಬದಿ) | 4.299 | ರಸ್ತೆಬದಿ ಮುಂಗಡ ಗುಂಡಿ ತೆಗೆಯುವ ಕಾಮಗಾರಿ |
| 2018-18 | ಆರ್.ಎಸ್.ಪಿ.ಡಿ | 3.465 | ಸಸಿಗಳ ಪೋಷಣೆ ಮತ್ತು ಸಸಿಗಳನ್ನು ಬೆಳೆಸುವುದು |
| 2018-19 | ಹಸಿರು ಕರ್ನಾಟಕ | 5.414 | ಸಸಿಗಳ ಪೋಷಣೆ, ಸಸಿಗಳನ್ನು ಬೆಳೆಸುವುದು ಮತ್ತು ಮುಂಗಡ ಗುಂಡಿ ತೆಗೆಯುವುದು |
| 2019-20 | ಸಾಮಾಜಿಕ ಅರಣ್ಯ ಯೋಜನೆ | 76.30 | ನೆಡುತೋಪು ಬೆಳೆಸುವುದು, ನೆಡುತೋಪು ಪೋಷಣೆ, ಮುಂಗಡ ಕಾಮಗಾರಿ |
| 2019-20 | 2406-01-102-1-ಕೆಎಫ್‌ಡಿಎಫ್-03-ಫ್ಲಪ್ಮಂಡ್-139-ಪ್ರಧಾನ ಕಾಮಗಾರಿಗಳು (ರಸ್ತೆಬದಿ) | 4.895 | ನೆಡುತೋಪು ಪೋಷಣೆ |
| 2019-20 | 2406-01-101-2-83-ಎಫ್‌ಎನ್‌ಎಫ್‌ಪಿ-139-ಪ್ರಧಾನ ಕಾಮಗಾರಿಗಳು (ರಸ್ತೆಬದಿ) | 13.328 | ರಸ್ತೆಬದಿ ನೆಡುತೋಪು ಬೆಳೆಸುವುದು |
| 2019-20 | 2406-01-101-2-83-ಎಫ್‌ಎನ್‌ಎಫ್‌ಪಿ-139-ಪ್ರಧಾನ ಕಾಮಗಾರಿಗಳು (ಬ್ಲಾಕ್) | 8.428 | ನೆಡುತೋಪು ಪೋಷಣೆ |
| 2019-20 | ಆರ್.ಎಸ್.ಪಿ.ಡಿ | 4.156 | ಸಸಿಗಳ ಪೋಷಣೆ ಮತ್ತು ಸಸಿಗಳನ್ನು ಬೆಳೆಸುವುದು |
| 2019-20 | ಹಸಿರು ಕರ್ನಾಟಕ | 9.996 | ಸಸಿಗಳ ಪೋಷಣೆ, ಸಸಿಗಳನ್ನು ಬೆಳೆಸುವುದು ಮತ್ತು ನೆಡುತೋಪು ಬೆಳೆಸುವುದು |

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಸಾಮಾಜಿಕ ಅರಣ್ಯ ವಿಭಾಗ, ರಾಯಚೂರು.

Principal Chief Conservator of Forests
(Development), Bengaluru

ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 37 ಎಸ್.ಎಂ.ಎಂ. 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 19-3-2020.

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸಸೌಧ, ಬೆಂಗಳೂರು.

32

19/3/2020

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ:- ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1682 ಕ್ಕೆ ಉತ್ತರ ಒದಗಿಸುವ ಬಗ್ಗೆ.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1682 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

19/3/2020
(ಪದ್ಮ ವಿ.)
ಸರ್ಕಾರ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಆರೋಗ್ಯ 1 & 2)

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1682 |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) |
| ಉತ್ತರಿಸಬೇಕಾದ ದಿನಾಂಕ | 19-03-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆಗಳು | ಉತ್ತರ |
|---|---|---|
| ಅ | ಹಾಸನ ಜಿಲ್ಲೆಯ ಅರಸೀಕೆರೆ ಪಟ್ಟಣದ ಸಾರ್ವಜನಿಕ ಆಸ್ಪತ್ರೆ, ಗಂಡಸಿ ಸಮುದಾಯ ಆಸ್ಪತ್ರೆ, ಚನ್ನರಾಯಪಟ್ಟಣ ತಾಲ್ಲೂಕಿನ ಸಾತೇನಹಳ್ಳಿ ಗ್ರಾಮದ ಪ್ರಾಥಮಿಕ ಆರೋಗ್ಯ ಕೇಂದ್ರ, ಹಾಸನ ತಾಲ್ಲೂಕಿನ ಹೊನ್ನಾವರ ಪ್ರಾಥಮಿಕ ಆರೋಗ್ಯ ಕೇಂದ್ರ, ಚಿಕ್ಕಕಡಲೂರು ಪ್ರಾಥಮಿಕ ಆರೋಗ್ಯ ಕೇಂದ್ರ, ಬಸವಾಘಟ್ಟ ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಹೊಳೆನರಸೀಪುರ ತಾಲ್ಲೂಕು ಪಡುವಲಹಿಪ್ಪೆ ಸಮುದಾಯ ಆಸ್ಪತ್ರೆಗಳ ಅಭಿವೃದ್ಧಿ ಮತ್ತು ವಿಸ್ತರಣೆ ಕಾಮಗಾರಿಗಳನ್ನು 2019-20 ನೇ ಸಾಲಿನಲ್ಲಿ ನಬಾರ್ಡ್ ಆರ್.ಐ.ಡಿ.ಎಫ್. 25 ಯೋಜನೆಯಡಿಯಲ್ಲಿ ಕೈಗೊಳ್ಳಲು ಅಗತ್ಯವಿರುವ ಯೋಜನಾವರದಿಯನ್ನು ಅಂದಾಜುಪಟ್ಟಿಯೊಂದಿಗೆ ನಬಾರ್ಡ್ ಸಂಸ್ಥೆಗೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ಸಂಪೂರ್ಣ ಮಾಹಿತಿ ನೀಡುವುದು) | ಬಂದಿದೆ.<br>2019-20 ನೇ ಸಾಲಿನಲ್ಲಿ ನಬಾರ್ಡ್ ಆರ್.ಐ.ಡಿ.ಎಫ್ -25 ಯೋಜನೆ ಅಡಿಯಲ್ಲಿ ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲು ನಬಾರ್ಡ್‌ನ ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. |

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಅಂದಾಜುಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು **ಗಂಡಸಿ** ಸಮುದಾಯ ಆರೋಗ್ಯ ಕೇಂದ್ರದ ಆಸ್ಪತ್ರೆಯ ಅಭಿವೃದ್ಧಿ ಹಾಗೂ ವಿಸ್ತರಣೆ ಕಾಮಗಾರಿ | 260.00 |
| 2 | ಹಾಸನ ಜಿಲ್ಲೆ **ಅರಸೀಕೆರೆ ತಾಲ್ಲೂಕಿನ ಶ್ರೀ ಜಯಚಾಮರಾಜೇಂದ್ರ** ತಾಲ್ಲೂಕು ಮಟ್ಟದ ಆಸ್ಪತ್ರೆಯ ಅಭಿವೃದ್ಧಿ ಹಾಗೂ ವಿಸ್ತರಣೆ ಕಾಮಗಾರಿ | 100.00 |
| 3 | ಚನ್ನರಾಯಪಟ್ಟಣ ತಾಲ್ಲೂಕಿನ **ಸಾತೇನಹಳ್ಳಿ** ಗ್ರಾಮದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಅಭಿವೃದ್ಧಿ ಹಾಗೂ ವಿಸ್ತರಣೆ ಕಾಮಗಾರಿ | 218.00 |
| 4 | ಹಾಸನ ತಾಲ್ಲೂಕಿನ **ಹೊನ್ನಾವರ** ಗ್ರಾಮದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಅಭಿವೃದ್ಧಿ ಹಾಗೂ ವಿಸ್ತರಣೆ ಕಾಮಗಾರಿ | 215.00 |
| 5 | ಹಾಸನ ತಾಲ್ಲೂಕಿನ **ಬಸವಾಘಟ್ಟ** ಗ್ರಾಮದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಅಭಿವೃದ್ಧಿ ಹಾಗೂ ವಿಸ್ತರಣೆ ಕಾಮಗಾರಿ | 217.00 |

| | | | | |
|---|---|---|---|---|
| | | 6 | ಹಾಸನ ತಾಲ್ಲೂಕಿನ **ಚಿಕ್ಕಕಡಲೂರು** ಗ್ರಾಮದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಅಭಿವೃದ್ಧಿ ಹಾಗೂ ವಿಸ್ತರಣೆ ಕಾಮಗಾರಿ | 220.00 |
| | | 7 | ಹೊಳೆನರಸೀಪುರ ತಾಲ್ಲೂಕಿನ **ಪಡುವಲಹಿಪ್ಪೆ** ಗ್ರಾಮದಲ್ಲಿ ಸಮುದಾಯ ಆರೋಗ್ಯ ಕೇಂದ್ರದ ಅಭಿವೃದ್ಧಿ ಹಾಗೂ ವಿಸ್ತರಣೆ ಕಾಮಗಾರಿ | 335.00 |
| ಆ | ಈ ಮೇಲ್ಕಂಡ ಸಾರ್ವಜನಿಕ ಆಸ್ಪತ್ರೆ, ಸಮುದಾಯ ಆಸ್ಪತ್ರೆಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳ ಅಭಿವೃದ್ಧಿ ಮತ್ತು ವಿಸ್ತರಣಾ ಕಾಮಗಾರಿಗಳು ತುರ್ತು ಕಾಮಗಾರಿಗಳಾಗಿದ್ದು, ಈ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಕಾಮಗಾರಿಗಳಿಗೆ ಮಂಜೂರಾತಿ ನೀಡುವಲ್ಲಿ ಅನಗತ್ಯ ವಿಳಂಬವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಯಾವುದೇ ವಿಳಂಬವಾಗಿರುವುದಿಲ್ಲ. | | |
| ಇ | ಹಾಗಿದ್ದಲ್ಲಿ, ಈ ಮೇಲ್ಕಂಡ ಸಾರ್ವಜನಿಕ ಆಸ್ಪತ್ರೆ, ಸಮುದಾಯ ಆಸ್ಪತ್ರೆಗಳು ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಅಭಿವೃದ್ಧಿ ಮತ್ತು ವಿಸ್ತರಣಾ ಕಾಮಗಾರಿಗಳಿಗೆ ಎಷ್ಟು ದಿನದಲ್ಲಿ ಮಂಜೂರಾತಿ ನೀಡಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಸದರಿ ಕಾಮಗಾರಿಗಳ ಅಂದಾಜು ಪಟ್ಟಿಗೆ ನಬಾರ್ಡ್‌ನಿಂದ ಅನುಮೋದನೆ ದೊರೆತ ನಂತರ ಕಾಮಗಾರಿಗಳನ್ನು ಶೀಘ್ರವಾಗಿ ಪ್ರಾರಂಭಿಸಲು ನಿಯಮಾನುಸಾರ ಕ್ರಮವಹಿಸಲಾಗುವುದು. | | |

ಆಕುಕ 37 ಎಸ್.ಎಂ.ಎಂ. 2020

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

19

# ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 72 ಎಫ್‌ಡಬ್ಲ್ಯೂಎಲ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19-03-2020.

CPS 19/3/2020

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀಮತಿ ಅಂಜಲಿ ಹೇಮಂತ್ ನಿಂಬಾಳ್ಕರ್ ಡಾ॥ (ಖಾನಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:691ಕ್ಕೆ ಉತ್ತರಿಸುವ ಬಗ್ಗೆ.

*****

ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀಮತಿ ಅಂಜಲಿ ಹೇಮಂತ್ ನಿಂಬಾಳ್ಕರ್ ಡಾ॥ (ಖಾನಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:691ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

**(ಗಾಯತ್ರಿ ಎಲ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

## ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ, 6ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 691

2) ಸದಸ್ಯರ ಹೆಸರು : ಶ್ರೀಮತಿ ಅಂಜಲಿ ಹೇಮಂತ್ ನಿಂಬಾಳ್ಕರ್ ಡಾ॥ (ಖಾನಾಪುರ)

3) ಉತ್ತರಿಸುವ ದಿನಾಂಕ : 19.03.2020.

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಅರಣ್ಯದಂಚಿನ ಹೊಲಗದ್ದೆಗಳ ಬೆಳೆಗಳನ್ನು ಕಾಡು ಪ್ರಾಣಿಗಳು ನಾಶಮಾಡುವುದನ್ನು ನಿಯಂತ್ರಿಸಲು ಅರಣ್ಯ ಇಲಾಖೆ ವತಿಯಿಂದಲೇ "ಸೋಲಾರ್ ವಿದ್ಯುತ್ ತಂತಿಬೇಲಿ" ಅಳವಡಿಸುವ ಅಗತ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಹೌದು. |
| ಆ) | ಬಂದಿದ್ದಲ್ಲಿ ಇಲಾಖೆ ವತಿಯಿಂದಲೇ "ಸೋಲಾರ್ ವಿದ್ಯುತ್ ತಂತಿಬೇಲಿ" ಅಳವಡಿಸಲು ಸರ್ಕಾರವು ಕೈಗೊಂಡ ಕ್ರಮಗಳೇನು; ಇದುವರೆಗೆ "ಸೋಲಾರ್ ವಿದ್ಯುತ್ ತಂತಿಬೇಲಿ" ಅಳವಡಿಕೆಗೆ ನಿಗದಿಪಡಿಸಿದ ಮತ್ತು ಬಿಡುಗಡೆ ಮಾಡಿದ ಅನುದಾನವೆಷ್ಟು? | ಅರಣ್ಯದಂಚಿನಲ್ಲಿ ಬರುವಂತಹ ಗ್ರಾಮಗಳಲ್ಲಿ ಮಾನವ-ವನ್ಯಪ್ರಾಣಿ ಸಂಘರ್ಷ ನಿಯಂತ್ರಿಸಲು ಅರಣ್ಯ ಇಲಾಖೆಯ ವತಿಯಿಂದ ಸೋಲಾರ್ ವಿದ್ಯುತ್ ತಂತಿಬೇಲಿ ಅಳವಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಕಳೆದ ಮೂರು ವರ್ಷಗಳಲ್ಲಿ ಸೋಲಾರ್ ವಿದ್ಯುತ್ ತಂತಿಬೇಲಿ ಅಳವಡಿಸಿರುವ ಹಾಗೂ ಇದಕ್ಕೆ ಭರಿಸಿರುವ ವೆಚ್ಚದ ವಿವರ ಕೆಳಗಿನಂತೆ ಇರುತ್ತದೆ. |

(ರೂ.ಲಕ್ಷಗಳಲ್ಲಿ)

| ವರ್ಷ | ಪ್ರಮಾಣ (ಕಿ.ಮೀ) | ಮೊತ್ತ |
|---|---|---|
| 2017-18 | 537.09 | 1262.16 |
| 2018-19 | 318.91 | 749.44 |
| 2019-20 | 115.00 | 402.5 |

ಸಂಖ್ಯೆ: ಅಪಜೀ 72 ಎಫ್ ಡಬ್ಲ್ಯೂ ಎಲ್ 2020

18/03/2020

(ಆನಂದ್ ಸಿಂಗ್)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 32 ಎಫ್‌ಟಿಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19-03-2020.

9/5
19/3/2020

135

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ರಾಜೀವ್.ಪಿ (ಕುಡಚಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2549ಕ್ಕೆ ಉತ್ತರಿಸುವ ಬಗ್ಗೆ.

*****

ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ರಾಜೀವ್.ಪಿ (ಕುಡಚಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2549ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

**(ಗಾಯತ್ರಿ, ಎಲ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

**ಕರ್ನಾಟಕ ವಿಧಾನ ಸಭೆ**

15ನೇ ವಿಧಾನಸಭೆ, 6ನೇ ಅಧಿವೇಶನ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2549 |
| 2) | ಸದಸ್ಯರ ಹೆಸರು | : | ಶ್ರೀ ರಾಜೀವ್ .ಪಿ (ಕುಡಚಿ) |
| 3) | ಉತ್ತರಿಸುವ ದಿನಾಂಕ | : | 19-03-2020 |
| 4) | ಉತ್ತರಿಸುವವರು | : | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಎಷ್ಟು ಟ್ರೀ ಪಾರ್ಕ್ ನಿರ್ಮಾಣ ಮಾಡಲಾಗಿದೆ; (ವಿವರ ನೀಡುವುದು) | ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ನಿರ್ಮಾಣ ಮಾಡಲಾಗಿರುವ ಟ್ರೀ ಪಾರ್ಕ್‌ಗಳ ವಿವರ ಈ ಕೆಳಕಂಡಂತಿದೆ; (ಕೋಷ್ಟಕ 1 ನೋಡಿ) |
| ಆ) | ಬೆಳಗಾವಿ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ಯಾವ ಯಾವ ಸ್ಥಳದಲ್ಲಿ ಟ್ರೀ ಪಾರ್ಕ್ ನಿರ್ಮಾಣ ಮಾಡಲಾಗಿದೆ; | ಬೆಳಗಾವಿ ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ನಿರ್ಮಾಣ ಮಾಡಲಾಗಿರುವ ಟ್ರೀ ಪಾರ್ಕ್‌ಗಳ ವಿವರ ಈ ಕೆಳಕಂಡಂತಿದೆ; (ಕೋಷ್ಟಕ 2 ನೋಡಿ) |
| ಇ) | ಟ್ರೀ ಪಾರ್ಕ್ ನಿರ್ಮಾಣ ಮಾಡಲು ಇರುವ ಮಾನದಂಡಗಳೇನು; | ಟ್ರೀ ಪಾರ್ಕ್ ನಿರ್ಮಾಣ ಮಾಡಲು ಇರುವ ಮಾನದಂಡಗಳನ್ನು ಅನುಬಂಧದಲ್ಲಿ ಒದಗಿಸಿದೆ. |

| ಕ್ರ. ಸಂ. | ವರ್ಷ | ಸಂಖ್ಯೆ |
|---|---|---|
| 1 | 2017-18 | 49 |
| 2 | 2018-19 | 1 |
| 3 | 2019-20 | 11 |
| ಒಟ್ಟು | | 61 |

| ಕ್ರ. ಸಂ. | ವರ್ಷ | ಮತಕ್ಷೇತ್ರ | ಟ್ರೀ ಪಾರ್ಕ್ ಹೆಸರು |
|---|---|---|---|
| 1 | 2017-18 | ಖಾನಾಪುರ | ಕರಂಬಾಳ & ಕೌಂದಳ |
| 2 | | ರಾಮದುರ್ಗ | ದೊಡ್ಡಮಂಗಡಿ |
| 3 | | ಸವದತ್ತಿ | ಮುರಗೋಡ |
| 4 | | ಚಿಕ್ಕೋಡಿ | ಚಿಕ್ಕೋಡಿ |
| 5 | 2018-19 | ಕಿತ್ತೂರು | ರಾಣಿಚೆನ್ನಮ್ಮ |
| 6 | 2019-20 | ಬೈಲಹೊಂಗಲ್ | ಹೊಸೂರು |
| 7 | | ಅಥಣಿ | ಲಕ್ಷ್ಮೀದೇವಿ ದೇವಸ್ಥಾನ |

ಈ) ಘಟಪ್ರಭಾ ವಿಭಾಗದ ವ್ಯಾಪ್ತಿಯಲ್ಲಿ ಯಾವ ಯಾವ ಸ್ಥಳದಲ್ಲಿ ಟ್ರೀ ಪಾರ್ಕ್ ನಿರ್ಮಾಣ ಮಾಡಲು ಅನುದಾನ ಬಿಡುಗಡೆ ಮಾಡಿದೆ; (ಕ್ಷೇತ್ರವಾರು ವಿವರ ನೀಡುವುದು)

ಘಟಪ್ರಭಾ ವಿಭಾಗದ ವ್ಯಾಪ್ತಿಯಲ್ಲಿ ಟ್ರೀ ಪಾರ್ಕ್ ನಿರ್ಮಾಣ ಮಾಡಲು ಬಿಡುಗಡೆ ಮಾಡಲಾದ ಅನುದಾನದ ವಿವರ;

| ಕ್ರ. ಸಂ. | ವಲಯ/ಕ್ಷೇತ್ರ | ಟ್ರೀ ಪಾರ್ಕ್ ನಿರ್ಮಿಸಿದ ಸ್ಥಳ . | ಬಿಡುಗಡೆ ಮಾಡಿದ ಅನುದಾನ (ಲಕ್ಷಗಳಲ್ಲಿ) |
|---|---|---|---|
| 1 | ಗೋಕಾಕ್ | ಕಡಬಗಟ್ಟಿ | 83.000 |
| 2 | ಅಥಣಿ | ಅಥಣಿ | 71.000 |
| 3 | ರಾಮದುರ್ಗ | ದೊಡಮಾಂಗಡಿ | 98.580 |
| 4 | ಸವದತ್ತಿ | ಮುರಗೋಡ | 61.520 |
| 5 | ಚಿಕ್ಕೋಡಿ | ಚಿಕ್ಕೋಡಿ | 81.370 |
| 6 | ಸವದತ್ತಿ | ಹೊಸೂರು | 17.940 |
| 7 | ಅಥಣಿ | ಲಕ್ಷ್ಮೀ ದೇವಸ್ಥಾನ | 58.400 |
| | | ಒಟ್ಟು | 471.810 |

ಉ) ರಾಯಭಾಗ ತಾಲ್ಲೂಕು ಕುಡಚಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಟ್ರೀ ಪಾರ್ಕ್ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ;

ಊ) ಹಾಗಿದ್ದಲ್ಲಿ, ಟ್ರೀ ಪಾರ್ಕ್ ಯಾವಾಗ ನಿರ್ಮಾಣ ಮಾಡಲಾಗುವುದು?

ಯಾವುದೇ ಪ್ರಸ್ತಾವನೆ ಇರುವುದಿಲ್ಲ.

ಸಂಖ್ಯೆ: ಅಪಜೀ 32 ಎಫ್ ಟಿಎಸ್ 2020

18/02/2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಅನುಬಂಧ-1

LAQ-2549-

No: APCCF(P):A2(A):CR-1/2017-18

*Enclosed: Annexure A to D*

Office of the
Principal Chief Conservator of Forests
(Head of the Forest Force)
Aranya Bhawan, 18th Cross,
Malleswaram Bangalore 560003
Dated: 6-1-2018

## Circular

Subject: Additional guidelines for the development of Tree-Parks; regarding

Ref.
1. *GoK Order bearing No: FEE 105 FAP 2011 dtd: 05-07-2011 (1)*
2. *GoK guidelines bearing No: FEE 86 FAP 2011 Dtd 22-10-2011*
3. *GoK Order bearing No: FEE 162 FAP 2015 dtd: 24-09-2015*
4. *Guidelines bearing No: APCCF/HQ/CR-01/2014-15 dated 23-4-2016*
6. *Clarification of guidelines, bearing No: APCCF/HQ/CR-01/2016-17 dated -11-5-2016*
7. *Letter bearing No: APCCF(P)/14/A2(a)/Tree-Park/16-17 dated 15-12-2016*
8. *Circular bearing No: APCCF(P)/A2(a)/CR-1/17-18 dated 23-6-2017*
9. *Circular bearing No: APCCF(P)/A2(a)/CR-1/17-18 dated 10-7-2017*

Tree-Park is an important scheme of the government and substantial time and resources are being invested in this work. In order to help the smooth execution of the works and also to ensure uniformity, the following comprehensive guidelines are being issued.

### A. Site Selection (For new Tree-Parks)

I. **Type of lands**

Tree Park can be taken up on any public land which may include Forest Lands, lands under the control of Revenue Department and lands under local bodies.

***Note:***

*(i) Provided that for non-forest land, a suitable assurance from the custodian would be required assuring that the land in question*

*shall not be alienated for any other purpose without the approval of Forest Department.*

(ii) *When the land is forest land, the competent authority should permit the free entry of public, subject to reasonable restrictions such as timings etc.*

(iii) *No private land or lands belonging to religious trusts or school or college lands shall be taken up for creation of any facility or for creation of tree parks.*

**II. Desirable attributes of Tree-Park land**

Tree-Park should ideally be having pre-existing tree growth. However if tree growth is not present, the land should be suitable for future tree growth. The land should have sufficient soil depth to support tree growth.

The Tree-Park plot should not be excessively elongated and the maximum length should not be more than five times of maximum width.

**III. Location of Tree Park:**

i. It is intended that there should be at least one Tree-Park per Assembly Constituency.

ii. First preference should be given to the lands that are within the town limits. If such land is not in custody of forest department, a written assurance must be taken from the custodian of the land assuring that the land shall not be utilized for any other purpose without permission of Forest Department or the Government.

iii. If for some reason, no land is available within the town, then the Tree-Park should be developed on lands that are near the town. No Tree-Park should be taken up outside town-limits where the land in question is not accessible by an all-weather road.

iv. For location outside the town limits, the distance from town limits should not be more than 10 Km on National/State Highway and not more than 5 Km on other all-weather roads.

v. Tree-Parks that are intended as 'Tourist Spots', like Kavery Nisarga Dham, Jog Falls etc, can be at larger distance from the town. In case the land is suitable to be developed into eco-based tourist spots (*like Nisarga dham*), relaxation in distance from town may be given by approval of APCCF (Projects).

vi. It is desirable to have a water-body within or abutting Tree-Park. Care should however be taken to avoid polluted water bodies.

vii. Lands abutting industrial estates, cremation/burial ground and waste dumping sites should be avoided.

## B. Submission of Concept Note (For newer Tree-Parks)

After site selection conforming to guidelines issued in 'A' above, the DCFs shall submit a concept note to the office of the APCCF (Projects) containing following:

i. *Name of the city/town for which this Tree-Park is being proposed.*
ii. *Distance from the city/Town for which the Tree-Park is proposed.*
iii. *Location indicated in Google Map;*
iv. *Area being proposed (In Ha);*
v. *Latitude and Longitude*
vi. *justification for site selection*
vii. *infrastructure already available at site*
viii. *list of works with approximate costs*

## C. Detailed Project Report (Old & New Tree-Parks)

### I. New Tree Park

Development of a Tree-Park is an elaborate activity and it is natural that such endeavor spans into multi-year activity. It is thus important to keep the activities guided by an overall plan so that efforts are not wasted. After APCCF(Projects) accords 'in-principle' approval to the Concept Note, a DPR shall be made for each Tree-Park. The DPR should include

a. *A write-up containing introduction to the area, justification for site selection, objectives, infrastructure already available at site, connectivity, nearby tourist attractions, etc.*
b. *A surveyed sketch of the entire Tree-Park land.*
c. *All proposed works must be depicted on the surveyed sketch*
d. *Line-estimates of all the works that are proposed to be undertaken*
e. *Action Plan indicating the list of works with line-estimates to be taken up in different years in a tabular form as under:-*

| Sl.No | Name of the work | Unit | Quantity | Rate | Amount | | | | | Total |
|---|---|---|---|---|---|---|---|---|---|---|
| | | | | | *Year-1 | Year-2 | Year-3 | Year-4 | Year-5 | |
| | | | | | | | | | | |
| | | | | | | | | | | |
| | | | | | | | | | | |

**TABLE-1**

**Means the year in which the tree park works commenced.*

Each DPR must be sent over to the office of APCCF (Projects) for approval. APCCF (Projects) may, if necessary consult subject matter experts, before according approval to the DPR. APOs should be proposed and sanctioned only on the basis of the approved DPR.

***Note:***

*For preparation of line-estimates, current years' SSR may be taken into account. DPRs should be got prepared by qualified personnel and expenditure for the preparation of DPRs may be charged in the Budget-head under which Tree-Park is being developed.*

## II. Existing Tree-Parks and Tree-Parks already under various stages of development:

It is essential to prepare DPR even if the Tree-Park is already developed or the same is already under development. While preparing the DPR for such Tree-Parks, all the above-mentioned points should be attended to.

Additionally, the DPR must also include works that are already completed or still under development. These works must also be depicted on the Surveyed sketch of the Tree-Park. The actual or expected cost of such works must also be mentioned in tabular form as under:

## List of Completed & Ongoing Works

| Sl.No | Name of the work | Estimate Details | | | Total Exp. | Year of Completion |
|---|---|---|---|---|---|---|
| | | SO No: | Date of Sanction | Estimate Amount | | |
| | | | | | | |
| | | | | | | |

TABLE-2

## List of Proposed works (*Fresh Works*)

| Sl.No | Name of the work | Estimate cost (Line-Estimate) | Year of Implementation | | |
|---|---|---|---|---|---|
| | | | *Year-1 | Year-2 | Year-3 |
| | | | | | |
| | | | | | |

TABLE-3

*Means the year in which the tree park works commenced.

It is emphasized that from Fin-year 2018-19, the release of funds for already developed Tree-Parks or Tree-Parks that are under development, shall not be made unless DPR is submitted and approval is obtained.

**D. Utilizing grants of other departments**

The grants/funds made available by other departments can be utilized for the development and maintenance of the Tree-Parks. The works proposed out of these grants should strictly be in accordance with the DPR approved for the Tree-Park.

**E. Preparation and Approval of Annual plan of operation:**

After receipt of approval of DPR and allocation of funds, DCF shall prepare Annual Plan of Operation for the respective year activities and submit the

proposed APO to jurisdictional CCF for his approval. The CCF, while according approval shall take into account the following issues into account:

1. *That DPR is sanctioned; and*
2. *Adequate certifications, if necessary, are recorded by the CCF in view of the contents vide para G(a) and H of this communication.*

The grants/funds received from other sources must be included in the Annual Plan of Operations. If such grants/funds are received in the middle of the year, Supplementary APO may be sanctioned. However the works proposed in the APOs must conform to the items approved in the DPR.

After approval of APOs by the CCF, the works may be got executed following standard existing procedures.

## F. Scrutiny of the Civil Estimates by Competent Authorities

As per Para 69 of Karnataka Forest Code, estimates involving civil works and amounting above Rs 25,000 must be scrutinized by the competent authority in PW&IWT Department. These guidelines must be scrupulously followed. It is clarified that even if a Work-Estimate contains single item of SSR of PWD, the entire estimate must be treated as Estimate and Civil works and should be handled as has been mentioned hereinabove.

Similar procedure should be followed if the items of works involve SSR of Horticulture, Watershed, Minor-Irrigation Department etc. The expenditure incurred for scrutiny of estimates may be charged against the Budget-head under which Tree-Park is being developed.

## G. Erection of Chain-link mesh and barbed wire

Securing the area is one of the most essential activities in Tree-Park. Common methods of securing the area are Chain-link mesh and barbed wire fencing. As there are no standard rates of Chain-link mesh and barbed wire fencing, these items are included in estimates. This practice leads to multiplicity of specifications and at times leads to the wastage of resources.

In order to bring uniformity and consistency it is decided that all future works involving Chain-link and barbed wire fencing shall follow a uniform specification. These specifications are described in enclosed annexures.
For additional clarity:-

a. Chain-link mesh should be used only on front side of the Tree-Park. Other sides of Tree-Park shall be secured by Barbed-wire fencing.

   *Note: Chain-link mesh on the sides other than the front side shall be permitted only after the personal inspection and certification thereof by the jurisdictional CCF. Such certifications of the CCF shall be recorded in the sanctioning order of APO by the CCF)*

b. Chain-link mesh should be not smaller than 4"x4" size and should be made from 10 gauge 'Hot-dipped' GI Wire. The top and bottom of chain-link mesh should be secured by 8 Gauge Hot-dipped GI Plain-Wire only.

   *(Note: These specifications must be followed scrupulously.)*

c. In the chain-link/barbed wire fencing works, RCC poles of sizes as indicated in the figure in annexure should be used. Any deviations may be got approved by submitting suitable proposals with valid reasons to APCCF(Projects)

d. Barbed wire fencing can be made from 10 Gauge 'Hot-dipped' GI-Wire with barbs made from 12 Gauge 'Hot-dipped' GI-Wire.

## H. Undertaking paving works

Paving of the common area, walkways etc. by interlinked concrete blocks should be avoided. Instead it is advised that at such locations, gravel/murram should be spread followed by suitable method of compaction using roller/vibrator.

In case paving (*using interlocking cement concrete blocks*) is absolutely essential, the item may be permitted by personal inspection and certification thereon by the jurisdictional CCF. Such certifications of the CCF shall be recorded in the sanctioning order of APO by the CCF.

**I. Submission of records**

Copies of APOs, Estimates and Work Orders must be submitted to the office of APCCF (Projects) without fail. The office of APCCF (Projects) shall maintain separate file for each Tree-Park.

**J. Maintenance of exclusive FNB/MB**

Since the works of a Tree-Park involves multi-year activities, it is directed that a dedicated/exclusive FNB/MB should be opened for each Tree-Park. For the given Tree-Park, items of works undertaken in different years must be recorded in the same MB/FNB. Works that are not related to the Tree-Park should NOT be recorded in this MB/FNB.

**Principal Chief Conservator of Forests**
**Head of the Forest Force, Karnataka**
**Bangalore**

Principal Chief Conservator of Forests
(Head of Forest Force)
Aranya Bhavan, Malleswaram,
BANGALORE-3, KARNATAKA

**Copy:**

1. All Chief Conservators of Forests (Circles) for information and necessary compliance.
2. All Deputy Conservators of Forests (Territorial & Wildlife) for information and necessary compliance.

|  |  | Direction | Summary/purpose |
|---|---|---|---|
| Ref. | 1. | GoK Order bearing No: FEE 105 FAP 2011 dtd: 05-07-2011 (1) | Start of Tree-Park Development of 4 Tree-Park at Bangalore & one in each district HQ. during the year 2011-12 |
|  | 2. | GoK guidelines bearing No: FEE 86 FAP 2011 Dtd 22-10-2011 | Approval of PPP Model for creation of Tree-Park |
|  | 3. | GoK Order bearing No: FEE 162 FAP 2015 dtd: 24-09-2015 | Formation of Management Committees for maintenance of Tree Parks |
|  | 4 | Guidelines bearing No: APCCF/HQ/CR-01/2014-15 dated 23-4-2016 | Guidelines for undertaking works |
|  | 6 | Clarification of guidelines, bearing No: APCCF/HQ/CR-01/2016-17 dated -11-5-2016 | Clarification to the above-mentioned guidelines. |
|  | 7 | Letter bearing No: APCCF(P)/14/A2(a)/Tree-Park/16-17 dated 15-12-2016 | Second-guidelines for undertaking works by APCCF(P) |
|  | 8 | Circular bearing No: APCCF(P)/A2(a)/CR-1/17-18 dated 23-6-2017 | Naming the Tree-Park as Saladamara Thimakka Tree-Park |
|  | 9 | Circular bearing No: APCCF(P)/A2(a)/CR-1/17-18 dated 10-7-2017 | Third Guidelines issued by APCCF(P), based on Note of PCCF(HoFF) dated 26-6-2017 |

| | | Direction | Summary/purpose |
|---|---|---|---|
| Ref. | 1. | GoK Order bearing No: FEE 105 FAP 2011 dtd: 05-07-2011 (1) | Start of Tree-Park Development of 4 Tree-Park at Bangalore & one in each district HQ. during the year 2011-12 |
| | 2. | GoK guidelines bearing No: FEE 86 FAP 2011 Dtd 22-10-2011 | Approval of PPP Model for creation of Tree-Park |
| | 3. | GoK Order bearing No: FEE 162 FAP 2015 dtd: 24-09-2015 | Formation of Management Committees for maintenance of Tree Parks |
| | 4 | Guidelines bearing No: APCCF/HQ/CR-01/2014-15 dated 23-4-2016 | Guidelines for undertaking works |
| | 6 | Clarification of guidelines, bearing No: APCCF/HQ/CR-01/2016-17 dated -11-5-2016 | Clarification to the above-mentioned guidelines. |
| | 7 | Letter bearing No: APCCF(P)/14/A2(a)/Tree-Park/16-17 dated 15-12-2016 | Second-guidelines for undertaking works by APCCF(P) |
| | 8 | Circular bearing No: APCCF(P)/A2(a)/CR-1/17-18 dated 23-6-2017 | Naming the Tree-Park as Saladamara Thimakka Tree-Park |
| | 9 | Circular bearing No: APCCF(P)/A2(a)/CR-1/17-18 dated 10-7-2017 | Third Guidelines issued by APCCF(P), based on Note of PCCF(HoFF) dated 26-6-2017 |

**ANNEXURE-A**

## Chain Link Mesh fencing to Tree Parks




A.K. GARG, IFS.,
PCCF (HOFF)
KARNATAKA

ANNEXURE-B

# Barbed wire fencing to Tree Parks



ANNEXURE-C

# Chain Link Mesh fencing to Tree Park




A.K. GARG, IFS.,
PCCF (HOFF)
KARNATAKA

ANNEXURE-D

# Barbed wire fencing to Tree Parks




Principal Chief Conservator of Forests (Head of Forest Force)

ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 28 ಎಫ್‌ಟಿಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:19-03-2020.

49

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ದೊಡ್ಡಗೌಡರ ಮಹಂತೇಶ ಬಸವಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1676ಕ್ಕೆ ಉತ್ತರಿಸುವ ಬಗ್ಗೆ.

*****

ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ದೊಡ್ಡಗೌಡರ ಮಹಂತೇಶ ಬಸವಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1676ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

**(ಗಾಯತ್ರಿ, ಎಲ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

## ಕರ್ನಾಟಕ ವಿಧಾನ ಸಭೆ
15ನೇ ವಿಧಾನಸಭೆ, 6ನೇ ಅಧಿವೇಶನ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1676 |
| 2) | ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| 3) | ಉತ್ತರಿಸುವ ದಿನಾಂಕ | : | 19-03-2020 |
| 4) | ಉತ್ತರಿಸುವವರು | : | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ವಿಧಾನ ಸಭಾಕ್ಷೇತ್ರ ವ್ಯಾಪ್ತಿಯಲ್ಲಿ "ಟ್ರೀ ಪಾರ್ಕ್ ನಿರ್ಮಾಣ" ಪ್ರಸ್ತಾವನೆ ಸರ್ಕಾರದ ಯಾವ ಹಂತದಲ್ಲಿದೆ; | ಸರ್ಕಾರದ ಯೋಜನೆಯಂತೆ ಪ್ರತಿ ವಿಧಾನಸಭಾ ಕ್ಷೇತ್ರದಲ್ಲಿ ಒಂದು ಸಾಲುಮರದ ತಿಮ್ಮಕ್ಕ ವೃಕ್ಷೋದ್ಯಾನ (ಟ್ರಿ ಪಾರ್ಕ್) ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ.<br><br>ಅದರನ್ವಯ, ಬೆಳಗಾವಿ ಜಿಲ್ಲಾ ಕಿತ್ತೂರು ವಿಧಾನಸಭಾ ಕ್ಷೇತ್ರದಲ್ಲಿಯೂ ಸಹ "ಟ್ರೀ ಪಾರ್ಕ್" ನಿರ್ಮಾಣ ಮಾಡಲು ಉದ್ದೇಶಿಸಿದ್ದು, ಮುಂದಿನ ಸಾಲುಗಳಲ್ಲಿ ಸೂಕ್ತ ಸ್ಥಳವನ್ನು ಗುರುತಿಸಿ "ಟ್ರೀ ಪಾರ್ಕ್" ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದು. |
| ಆ) | ಸದರಿ ಪ್ರಸ್ತಾವನೆ ಕುರಿತು ಸರ್ಕಾರದ ಕ್ರಮವೇನು; | ಈವರೆಗೂ ಯಾವುದೇ ಪ್ರಸ್ತಾವನೆಯು ಬಂದಿರುವುದಿಲ್ಲ. |
| ಇ) | ಯಾವ ಕಾಲಮಿತಿಯಲ್ಲಿ ಟ್ರೀ ಪಾರ್ಕ್ ನಿರ್ಮಾಣ ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಅನ್ವಯಿಸುವುದಿಲ್ಲ. |

ಸಂಖ್ಯೆ: ಅಪಜೀ 28 ಎಫ್ ಟಿಎಸ್ 2020

16/03/2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಅಪಜೀ 71 ಎಫ್‌ಡಬ್ಲೂಎಲ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19-03-2020.

36

19/3/2020

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2527ಕ್ಕೆ ಉತ್ತರಿಸುವ ಬಗ್ಗೆ.

*****

ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2527ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

**(ಗಾಯತ್ರಿ. ಎಲ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ, 6ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2527

2) ಸದಸ್ಯರ ಹೆಸರು : ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ)

3) ಉತ್ತರಿಸುವ ದಿನಾಂಕ : 19.03.2020.

4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜಿಂಕೆಗಳು ವಾಸಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಜಿಂಕೆಗಳು ವಾಸಿಸುತ್ತಿರುವ ನಿರ್ದಿಷ್ಟ ಪ್ರದೇಶಗಳನ್ನು ಗುರುತಿಸಲಾಗಿದೆಯೇ; | ಜಿಂಕೆಗಳು ಕಾಲ ಕಾಲಕ್ಕೆ ಹುಲ್ಲು ಜಾಸ್ತಿ ಇರುವ ಪ್ರದೇಶಗಳಲ್ಲಿ ವಲಸೆ ಹೋಗುತ್ತವೆ. ಆದ್ದರಿಂದ, ಜಿಂಕೆಗಳು ಇರುವ ನಿರ್ದಿಷ್ಟ ಪ್ರದೇಶಗಳನ್ನು ಗುರುತಿಸಿರುವುದಿಲ್ಲ. |
| ಇ) | ಬೇಸಿಗೆ ಕಾಲದಲ್ಲಿ ಈ ನಿರ್ದಿಷ್ಟ ಪ್ರದೇಶಗಳಲ್ಲಿ ಜಿಂಕೆಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ಬೇಸಿಗೆ ಕಾಲದಲ್ಲಿ ಜಿಂಕೆಗಳು ಹೆಚ್ಚಾಗಿ ಕಾಣಿಸುವ ಅರಣ್ಯ ಪ್ರದೇಶಗಳಲ್ಲಿ ನೀರಿನ ತೊಟ್ಟಿ (Water Pond) ನಿರ್ಮಾಣ ಮಾಡಿ, ಸದರಿ ನೀರಿನ ತೊಟ್ಟಿಗಳಿಗೆ ಟ್ಯಾಂಕರ್‌ನಿಂದ ನೀರು ಸಂಗ್ರಹಿಸಿ ಜಿಂಕೆಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಲಾಗುತ್ತಿದೆ. ನೀರಿನ ತೊಟ್ಟಿ ನಿರ್ಮಿಸಿದ ಸ್ಥಳಗಳ ವಿವರ ಈ ಕೆಳಗಿನಂತಿದೆ: |

| ಕ್ರ.ಸಂ | ವಲಯ | ತೊಟ್ಟಿ ನಿರ್ಮಿಸಿದ ಅರಣ್ಯ ಪ್ರದೇಶದ ಹೆಸರು |
|---|---|---|
| 1 | ಔರಾದ | ಗಡಿಕುಶನೂರು |
| 2 | ಔರಾದ | ಚಟ್ನಾಳ |
| 3 | ಔರಾದ | ಬಾಳೂರು |
| 4 | ಭಾಲ್ಕಿ | ಖಾನಾಪುರ |
| 5 | ಭಾಲ್ಕಿ | ತೇಗಂಪೂರ |
| 6 | ಭಾಲ್ಕಿ | ಕೊನಮೆಳಕುಂದಾ |
| 7 | ಬೀದರ್ | ಹೊನ್ನಿಕೇರಿ |
| 8 | ಬೀದರ್ | ಜಮಿಸ್ತಾನಪೂರ |

| ಈ) | ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜಿಂಕೆಗಳಿರುವ ನಿರ್ದಿಷ್ಟ ಪ್ರದೇಶಗಳನ್ನು ಪ್ರವಾಸಿ ತಾಣಗಳನ್ನಾಗಿ ಅಭಿವೃದ್ಧಿಪಡಿಸಿ, ಜಿಲ್ಲೆಯಲ್ಲಿ ಪ್ರವಾಸೋದ್ಯಮವನ್ನು ಉತ್ತೇಜಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳಾವುವು? | ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಪ್ರಕಾರ ಜಿಂಕೆಗಳ ಸಂರಕ್ಷಣೆಯನ್ನು ಮಾಡಲಾಗುತ್ತಿದೆ. ಪ್ರಸ್ತುತ ಪರಿಸರ ಪ್ರವಾಸೋದ್ಯಮ ಕಾರ್ಯಕ್ರಮವನ್ನು ಉತ್ತೇಜಿಸುವ ನಿಟ್ಟಿನಲ್ಲಿ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
|---|---|---|

ಸಂಖ್ಯೆ: ಅಪಜೀ 71 ಎಫ್ ಡಬ್ಲ್ಯೂ ಎಲ್ 2020

18/02/2020

(ಆನಂದ್ ಸಿಂಗ್)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ:ಇಡಿ 80 ಎಸ್‌ಟಿಬಿ 2020

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ:19.03.2020.

122 US
19/3/2020

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ,
ಬೆಂಗಳೂರು.

**ಇವರಿಗೆ:**
ಮಾನ್ಯ ಸಭಾಧ್ಯಕ್ಷರು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ನಿಸರ್ಗ ನಾರಾಯಣ ಸ್ವಾಮಿ (ದೇವನಹಳ್ಳಿ) ಇವರು ಪ್ರಸ್ತಾಪಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:693ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಕಳುಹಿಸಿಕೊಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ನಿಸರ್ಗ ನಾರಾಯಣ ಸ್ವಾಮಿ (ದೇವನಹಳ್ಳಿ) ಇವರು ಪ್ರಸ್ತಾಪಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:963ಕ್ಕೆ ಸಂಬಂಧಿಸಿದ ಉತ್ತರದ ಒಟ್ಟು 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

19/3/2020
(ಆರ್. ಉಮಾದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ(ಸಾಮಾನ್ಯ)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 693

ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್ (ದೇವನಹಳ್ಳಿ)

ಉತ್ತರಿಸುವ ದಿನಾಂಕ : 19.03.2020

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಹಾಗೂ ಮೈಸೂರು ವಿಭಾಗದಲ್ಲಿ ದ್ವಿತೀಯ ದರ್ಜೆ ಸಹಾಯಕ ನೌಕರರಿಗೆ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವಾಗಿನಿಂದ ಬಡ್ತಿ ಪ್ರಕ್ರಿಯೆ ಸ್ಥಗಿತವಾಗಿದೆ; (ಪೂರ್ಣ ಮಾಹಿತಿ ನೀಡುವುದು). | ಬೆಂಗಳೂರು ಹಾಗೂ ಮೈಸೂರು ವಿಭಾಗದಲ್ಲಿ ಈಗಾಗಲೇ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಮುಂಬಡ್ತಿ ಕೋಟಾ ಮಿತಿಗಿಂತಲೂ 304 ಹೆಚ್ಚುವರಿ ಮುಂಬಡ್ತಿ ನೀಡಲಾಗಿರುತ್ತದೆ. ಆದ್ದರಿಂದ ಸಧ್ಯಕ್ಕೆ ಬಡ್ತಿ ನೀಡಲು ಸಾಧ್ಯವಾಗುತ್ತಿಲ್ಲ. |
| ಆ) | ಹಾಗಾದರೆ ಎಷ್ಟು ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು ಖಾಲಿಯಿವೆ, ಪ್ರಸ್ತುತ ಎಷ್ಟು ನೌಕರರಿಗೆ ಬಡ್ತಿ ನೀಡುವ ಪ್ರಕ್ರಿಯೆ ಚಾಲ್ತಿಯಲ್ಲಿದೆ ಮತ್ತು ಯಾವ ಕಾಲಮಿತಿಯಲ್ಲಿ ಈ ಬಡ್ತಿ ಪ್ರಕ್ರಿಯೆ ಪೂರ್ಣಗೊಳಿಸಲಾಗುವುದು. (ಪೂರ್ಣ ಮಾಹಿತಿ ನೀಡುವುದು). | ಪ್ರಸ್ತುತ ನೇರ ನೇಮಕಾತಿ ಕೋಟಾದಡಿ ನಿಗಧಿಪಡಿಸಿದ 203 ಪ್ರಥಮ ದರ್ಜೆ ಸಹಾಯಕ ಹುದ್ದೆಗಳು ಖಾಲಿ ಇವೆ.<br><br>ಬಡ್ತಿ ಕೋಟಾದಡಿ ನಿಗದಿಪಡಿಸಲಾದ ಹುದ್ದೆಗಳನ್ನು ಮುಂದೆ ಲಭ್ಯವಾಗುವ ಹುದ್ದೆಗಳಲ್ಲಿ, ಅಂತಿಮವಾಗಿ ಹೊರಡಿಸಲಾದ ಜೇಷ್ಠತಾ ಪಟ್ಟಿಯಲ್ಲಿನ ಅರ್ಹ ಸಿಬ್ಬಂದಿಗಳಿಗೆ ನಿಯಮಾನುಸಾರ ಮುಂಬಡ್ತಿ ನೀಡಲಾಗುವುದು. |
| ಇ) | ಹಾಗಾದರೆ, ಪ್ರಸ್ತುತ ಚಾಲ್ತಿಯಲ್ಲಿರುವ 25/75 ಬಡ್ತಿ ನಿಯಮದಿಂದ ಅಧಿಕ ಸಂಖ್ಯೆಯಲ್ಲಿರುವ ದ್ವಿತೀಯ ದರ್ಜೆ ಸಹಾಯಕ ನೌಕರರಿಗೆ ಬಡ್ತಿ ಗಗನ ಕುಸುಮವಾಗಿದ್ದು, ಈ ನಿಯಮ ಬದಲಾಯಿಸಿ 50:50 ಅನುಪಾತದಲ್ಲಿ ಬಡ್ತಿ ನೀಡುವ ಬಗ್ಗೆ ಸರ್ಕಾರದ ನಿಲುವೇನು; (ಪೂರ್ಣ ಮಾಹಿತಿ ನೀಡುವುದು). | ಪ್ರಸ್ತುತ Karnataka Education Department Services(Department Of Public Instruction) (Recruitment) Rules, 1967, ಈ ವೃಂದ ಮತ್ತು ನೇಮಕಾತಿ ನಿಯಮಗಳು ಜಾರಿಯಲ್ಲಿದ್ದು, ಈ ನಿಯಮದನ್ವಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನೇರ ನೇಮಕಾತಿ / ಬಡ್ತಿಗೆ ಈಗಾಗಲೇ 50:50ರ ಅನುಪಾತವಿರುತ್ತದೆ. |
| ಈ) | ಹಾಗಾದರೆ ಯಾವ ಕಾಲಮಿತಿಯಲ್ಲಿ ಸರ್ಕಾರ ಈ ಬಗ್ಗೆ ಕ್ರಮವಹಿಸುವುದು ಮತ್ತು ಬಡ್ತಿ ನಿಯಮಗಳ ಬದಲಾವಣೆ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವೇನು ? (ಮಾಹಿತಿ ನೀಡುವುದು). | ಉದ್ಭವಿಸುವುದಿಲ್ಲ. |

**ಸಂಖ್ಯೆ: ಇಡಿ 80 ಎಸ್‌ಟಿಬಿ 2020**

S. S—

**(ಎಸ್. ಸುರೇಶ್ ಕುಮಾರ್)**

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

136

**ಕರ್ನಾಟಕ ಸರ್ಕಾರ**

ಸಂಖ್ಯೆ: ಅಪಜೀ 77 ಇಪಿಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:18.03.2020.

19/3/2020

ಇಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ:- ಕರ್ನಾಟಕ ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಜ್‌ಕುಮಾರ್ ಪಾಟೀಲ್ (ಸೇಡಂ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1926 ಕ್ಕೆ ಉತ್ತರವನ್ನು ನೀಡುವ ಬಗ್ಗೆ.

ಉಲ್ಲೇಖ:- ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1926/2020, ದಿನಾಂಕ: 05.03.2020.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ರಾಜ್‌ಕುಮಾರ್ ಪಾಟೀಲ್ (ಸೇಡಂ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1926 ಕ್ಕೆ ಉತ್ತರದ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

18/3/2020
(ಮುರಳೀಧರ ಎಸ್. ತಳ್ಳಿಕೇರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ
(ಜೀವಿಪರಿಸ್ಥಿತಿ ಮತ್ತು ಪರಿಸರ)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1926
ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ರಾಜ್‌ಕುಮಾರ್ ಪಾಟೀಲ್ (ಸೇಡಂ)
ಉತ್ತರಿಸಬೇಕಾದ ದಿನಾಂಕ : 19.03.2020
ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2019-20ನೇ ಸಾಲಿನಲ್ಲಿ ಕಲಬುರಗಿ ಜಿಲ್ಲೆಯ ಸೇಡಂ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ವಿವಿಧ ಸಿಮೆಂಟ್ ಕಂಪನಿಗಳಿದ್ದು, ಈ ಕಂಪನಿಯವರುಗಳು ಪರಿಸರ ಮಾಲಿನ್ಯ ಉಲ್ಲಂಘನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br><br>2019-20ರ ಸಾಲಿನಲ್ಲಿ ಕಲಬುರ್ಗಿ ಜಿಲ್ಲೆಯ ಸೇಡಂ ವಿಧಾನ ಸಭಾ ಕ್ಷೇತ್ರದಲ್ಲಿ ಮೆ. ಶ್ರೀ ಬಾಲಾಜಿ ಸಿಮೆಂಟ್ಸ್ ಮತ್ತು ಪವರ್ ಲಿಮಿಟೆಡ್ (ಹಿಂದಿನ ಸೌತ್ ಇಂಡಿಯಾ ಸಿಮೆಂಟ್ಸ್) ಕಾರ್ಖಾನೆಯು ಪರಿಸರ ಉಲ್ಲಂಘನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| (ಆ) | ಬಂದಿದ್ದಲ್ಲಿ, ಯಾವ ಯಾವ ಸಿಮೆಂಟ್ ಕಂಪನಿಗಳ ಮೇಲೆ ಪರಿಸರ ಮಾಲಿನ್ಯ ಉಲ್ಲಂಘನೆ ಪ್ರಕರಣಗಳು ದಾಖಲಾಗಿವೆ ಹಾಗೂ ಇವರುಗಳಿಂದ ಇಲ್ಲಿಯವರೆಗೂ ಎಷ್ಟು ದಂಡವನ್ನು ವಸೂಲು ಮಾಡಲಾಗಿದೆ; (ವಿವರ ನೀಡುವುದು) | ಮೆ. ಶ್ರೀ ಬಾಲಾಜಿ ಸಿಮೆಂಟ್ಸ್ ಮತ್ತು ಪವರ್ ಲಿಮಿಟೆಡ್ (ಹಿಂದಿನ ಸೌತ್‌ಇಂಡಿಯಾ ಸಿಮೆಂಟ್ಸ್) ಕಾರ್ಖಾನೆಗೆ ದಿನಾಂಕ: 15.5.2019 ಮತ್ತು 30.11.2019 ರಂದು ಸಮ್ಮತಿ ಪತ್ರದ ಉಲ್ಲಂಘನೆಗಾಗಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ವತಿಯಿಂದ ನೋಟೀಸ್ ಜಾರಿಗೊಳಿಸಲಾಗಿದೆ. ಆದರೆ ಯಾವುದೇ ಪ್ರಕರಣದಲ್ಲಿ ದಂಡ ವಸೂಲಿ ಮಾಡಿರುವುದಿಲ್ಲ. |
| (ಇ) | ಪರಿಸರ ಮಾಲಿನ್ಯ ತಡೆಗಟ್ಟಲು ಸರ್ಕಾರವು ತೆಗೆದುಕೊಂಡ ದಿಟ್ಟ ಕ್ರಮವೇನು? | ಕಲಬುರಗಿ ಜಿಲ್ಲೆಯ ಸೇಡಂ ವಿಧಾನ ಸಭಾ ಕ್ಷೇತ್ರದಲ್ಲಿ ಈ ಕೆಳಕಂಡ ನಾಲ್ಕು ಸಿಮೆಂಟ್ ಉತ್ಪಾದನಾ ಕೈಗಾರಿಕೆಗಳು ಕಾರ್ಯಾಚರಣೆಯಲ್ಲಿದ್ದು, ಇವುಗಳ ಸಾಮರ್ಥ್ಯ ಈ ಕೆಳಕಂಡಂತಿರುತ್ತದೆ. |

| ಉದ್ದಿಮೆಯ ಹೆಸರು | ಕ್ಲಿಂಕರ್( MTPA) | ಸಿಮೆಂಟ್ (MTPA) | ಸಹ ವಿದು (MW) |
|---|---|---|---|
| ಮೆ. ಅಲ್ಟ್ರಾಟೆಕ್ ಲಿಮಿಟೆಡ್ (ರಾಜಶ್ರೀ ಸಿಮೆಂಟ್ಸ್), ಆದಿತ್ಯ ನಗರ, ಮಳ್ಕೇಡ್‌ರಸ್ತೆ, ಸೇಡಂ ತಾಲ್ಲೂಕು, ಕಲಬುರ್ಗಿಜಿಲ್ಲೆ. | 9.0 | 8.70 | 102.4 |
| ಮೆ. ವಾಸವದತ್ತ ಸಿಮೆಂಟ್ಸ್, ಸೇಡಂ ತಾಲ್ಲೂಕು, ಕಲಬುರ್ಗಿಜಿಲ್ಲೆ. | 6.0 | 9.0 | 79.2 |

| ಮೆ. ಶ್ರೀ ಸಿಮೆಂಟ್ಸ್, ಸೇಡಂ ತಾಲ್ಲೂಕು, ಕಲಬುರ್ಗಿಜಿಲ್ಲೆ. | 2.4 | 4.0 | 30.0 |
|---|---|---|---|
| ಮೆ. ಶ್ರೀ ಬಾಲಾಜಿ ಸಿಮೆಂಟ್ಸ್ ಮತ್ತು ಪವರ್ ಲಿಮಿಟೆಡ್ (ಹಿಂದಿನ ಸೌತ್‌ಇಂಡಿಯಾ ಸಿಮೆಂಟ್ಸ್), ಸೇಡಂ ತಾಲ್ಲೂಕು, ಕಲಬುರ್ಗಿಜಿಲ್ಲೆ. | 1.0 | | --- |

ಈ ನಾಲ್ಕು ಘಟಕಗಳು ಜಲ (ಮಾಲಿನ್ಯ ತಡೆಗಟ್ಟುವಿಕೆ ಮತ್ತು ನಿಯಂತ್ರಣ) ಕಾಯ್ದೆ, 1974 ಮತ್ತು ವಾಯು (ಮಾಲಿನ್ಯ ತಡೆಗಟ್ಟುವಿಕೆ ಮತ್ತು ನಿಯಂತ್ರಣ) ಕಾಯ್ದೆ, 1981 ಅಡಿಯಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಚಾಲನಾ ಸಮ್ಮತಿ ಪತ್ರ ಪಡೆದಿರುತ್ತವೆ. ಈ ನಾಲ್ಕು ಕೈಗಾರಿಕೆಗಳು ಮಂಡಳಿಯು ನಿಗದಿಪಡಿಸಿದ ಮಾಲಿನ್ಯ ನಿಯಂತ್ರಣ ಘಟಕಗಳನ್ನು ಅಳವಡಿಸಿ ಮಾಲಿನ್ಯವನ್ನು ನಿಯಂತ್ರಿಸುತ್ತಿವೆ.

ಕೇಂದ್ರ ಅರಣ್ಯ, ಪರಿಸರ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯದಿಂದ ಪರಿಸರ ವಿಮೋಚನಾ ಪತ್ರ ಹಾಗೂ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಜಲ ಹಾಗೂ ವಾಯು ಕಾಯ್ದೆಯಡಿ ಸ್ಥಾಪನಾ ಸಮ್ಮತಿ ನೀಡುವಾಗ ಕಾರ್ಖಾನೆಗಳಿಂದ ಹೊರ ಹೊಮ್ಮುವ ಹೊಗೆ ಹಾಗೂ ಧೂಳಿನಿಂದ ಪರಿಸರದ ಮೇಲೆ ಆಗಬಹುದಾದಂತಹ ದುಷ್ಪರಿಣಾಮಗಳನ್ನು ತಡೆಗಟ್ಟಲು ವಾಯು ಮಾಲಿನ್ಯ ಮೂಲಗಳಿಗೆ ಸಮರ್ಪಕವಾದ ಹೊಗೆ ಕೊಳವೆಗಳನ್ನು ಮತ್ತು ವಾಯು ಮಾಲಿನ್ಯ ನಿಯಂತ್ರಣ ಉಪಕರಣಗಳನ್ನು ಅಳವಡಿಸಲು ಹಾಗೂ ವಾಯು ಮಾಲಿನ್ಯ ಮಾನಕಗಳನ್ನು ಮಂಡಳಿ ನಿಗದಿ ಪಡಿಸಿದ ಮಿತಿಯೊಳಗೆ ಇರುವಂತೆ ನಿಯಂತ್ರಿಸಲು ನಿಬಂಧನೆಗಳನ್ನು ವಿಧಿಸಲಾಗುತ್ತಿದೆ.

ಕಾರ್ಖಾನೆಗಳು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು 2003 ರಲ್ಲಿ ಪರಿಸರ ಗುಣಮಟ್ಟವನ್ನು ಉತ್ತಮಪಡಿಸುವ ಸಲುವಾಗ ಹೊರಡಿಸಿರುವ ಕ್ರೆಪ್ ಮಾರ್ಗಸೂಚಿಗಳನ್ನು (CREP – Corporate Responsibility on Environment Protection) ಕಟ್ಟುನಿಟ್ಟಾಗಿ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗಿದೆ.

ಮಂಡಳಿಯ ಪ್ರಾದೇಶಿಕ ಕಛೇರಿ, ಕಲಬುರಗಿಯ ಸೇಡಂ ವಿಧಾನ ಸಭಾ ಕ್ಷೇತ್ರದಲ್ಲಿನ ಸಿಮೆಂಟ್ ಕೈಗಾರಿಕೆಗಳ ಆವರಣದಲ್ಲಿ ಪರಿವೇಷ್ಟಕ ವಾಯು ಗುಣಮಟ್ಟವನ್ನು ಮಾಪನ ಮಾಡಿದ್ದು,

| | | |
|---|---|---|
| | | ಮಾಪನದ ವರದಿಯಂತೆ, $PM_{10}$ (ಹತ್ತು ಮೈಕ್ರಾನ್‌ಗಿಂತ ಕಡಿಮೆ ಇರುವ ಧೂಳು) ನ ಪ್ರಮಾಣವು, ಅರಣ್ಯ, ಪರಿಸರ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯ, ಭಾರತ ಸರ್ಕಾರ ದಿನಾಂಕ 18.09.2009 ರಲ್ಲಿ ನಿಗದಿಪಡಿಸಿದ ಪ್ರಮಾಣಕ್ಕಿಂತ ಕಡಿಮೆ ಇರುತ್ತದೆ.<br><br>ಈ ಸಿಮೆಂಟ್ ಘಟಕಗಳಲ್ಲಿನ ಪ್ರಮುಖ ವಾಯು ಮಾಲಿನ್ಯದ ಮೂಲವಾದ ಕಿಲ್ನ್, ಸಿಮೆಂಟ್ ಮಿಲ್, ಕೋಲ್ ಮಿಲ್ ಹಾಗೂ ಸಹ ವಿದ್ಯುತ್ ಘಟಕಗಳ ವಾಯು ಉಗಮಗಳಿಗೆ ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯ ನಿರ್ದೇಶನದಂತೆ ನಿರಂತರ ವಾಯು ಮಾಲಿನ್ಯ ಮಾಪನ ವ್ಯವಸ್ಥೆ (Continuous Online Emission Monitoring System)ಯನ್ನು ಅಳವಡಿಸಲಾಗಿದ್ದು, ಇದರ ಮಾಹಿತಿಯನ್ನು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯ ಸರ್ವರ್‌ನಲ್ಲಿ ನಿರಂತರವಾಗಿ ದಾಖಲಾಗುತ್ತಿದೆ. ಮಂಡಳಿಯಿಂದ ಈ ಮಾಹಿತಿಯನ್ನು ಪ್ರತಿದಿನ ಅವಲೋಕಿಸುತ್ತಿದ್ದು, ಧೂಳಿನ ಪ್ರಮಾಣದಲ್ಲಿ ಆಕಸ್ಮಾತ್ ಆಗಿ ಕ್ಷಿಪ್ರ ಬದಲಾವಣೆ ಕಂಡುಬಂದಲ್ಲಿ ಎಸ್.ಎಂ.ಎಸ್ ಅಥವಾ ಇ-ಮೇಲ್ ಮೂಲಕ ಎಚ್ಚರಿಕೆಯನ್ನು ನೀಡಲಾಗುತ್ತಿದ್ದು, ಆಗ್ಗಿಂದಾಗ್ಗೆ ಮಂಡಳಿಯ ಪ್ರಾದೇಶಿಕ ಅಧಿಕಾರಿಗಳು ಕೈಗಾರಿಕೆಗಳ ಪರಿವೀಕ್ಷಣೆ ಮತ್ತು ಮಾಪನ ಮಾಡುತ್ತಿದ್ದು, ಉಲ್ಲಂಘನೆ ಕಂಡುಬಂದಲ್ಲಿ ನೋಟೀಸ್ ಜಾರಿ ಮಾಡಲಾಗುತ್ತಿದೆ. |

**ಸಂಖ್ಯೆ: ಅಪಜೀ 77 ಇಪಿಸಿ 2020**

18/03/2020

**(ಆನಂದ್ ಸಿಂಗ್)**

**ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.**

# ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 97 ಯೋಆಶಕ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 19.03.2020

(16)
148
19/3/20

ಇವರಿಂದ:-
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಶಿಕ್ಷಣ ಇಲಾಖೆ, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)

ಇವರಿಗೆ:-
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
**ಬೆಂಗಳೂರು.**

**ಮಾನ್ಯರೇ,**

**ವಿಷಯ** :- ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1248 ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ :1248 ಕ್ಕೆ ಉತ್ತರವನ್ನು 100/350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿ ಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಎಸ್.ಆರ್.ಎಸ್.ನಾಧನ್)
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ (ಪ್ರಾಥಮಿಕ ಹಾಗೂ ಪ್ರೌಢ)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿ ಪ್ರಶ್ನೆ ಸಂಖ್ಯೆ | : | 1248 |
| ಸದಸ್ಯರ ಹೆಸರು | : | ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) |
| ಉತ್ತರಿಸಬೇಕಾದ ದಿನಾಂಕ | : | 19-03-2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

<table>
<tr><th colspan="2">ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಹೆಗ್ಗಡದೇವನಕೋಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಮಗ್ಗೆ ಹಾಗೂ ಅಂತರಸಂತೆ ಗ್ರಾಮಗಳಲ್ಲಿ ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ (ಆರ್.ಎಂ.ಎಸ್.ಎ) ಯೋಜನೆಯಡಿ ಹೊಸ ಪ್ರೌಢ ಶಾಲಾ ಕೊಠಡಿಗಳ ನಿರ್ಮಾಣ ಕಾಮಗಾರಿಗಳು ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಸ್ಥಗಿತಗೊಳ್ಳಲು ಕಾರಣವೇನು (ವಿವರ ನೀಡುವುದು)</td><td>ಬಂದಿದೆ.<br>ಹೆಗ್ಗಡದೇವನಕೋಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ (ಆರ್.ಎಂ.ಎಸ್.ಎ) ಯೋಜನೆಯಡಿ ಕೈಗೊಂಡ ಸರ್ಕಾರಿ ಪ್ರೌಢಶಾಲೆ ಮಗ್ಗೆ ಕಾಮಗಾರಿಯು (G+1) ನೆಲ ಮಹಡಿಯ ಛಾವಣಿ ಹಂತದಲ್ಲಿ ಸ್ಥಗಿತಗೊಂಡಿರುತ್ತದೆ.<br>ಸರ್ಕಾರಿ ಪ್ರೌಢಶಾಲೆ ಅಂತರಸಂತೆ ಮೊದಲನೆ ಅಂತಸ್ತಿನ ಗೋಡೆಗಳ ನಿರ್ಮಾಣದ ಹಂತದಲ್ಲಿ ಸ್ಥಗಿತಗೊಂಡಿರುತ್ತದೆ.<br>ಕಾಮಗಾರಿಯಲ್ಲಿ ಉಂಟಾದ ವಿಳಂಬಕ್ಕೆ ಇಲಾಖೆಯಿಂದ ವಿಧಿಸಲಾದ ದಂಡ (ಲಿಕ್ವಿಡೇಟೆಡ್ ಡ್ಯಾಮೇಜಸ್), ತಡೆಹಿಡಿದ ಬಿಲ್ ಮೊತ್ತ, ಕಾಲಾವಧಿ ವಿಸ್ತರಣೆ ನೀಡುವಲ್ಲಿ ಸಮಸ್ಯೆಗಳು, ಮುಂತಾದ ಕಾರಣಗಳೊಂದಿಗೆ ಆರ್.ಎಂ.ಎಸ್.ಎ ಮತ್ತು ಗುತ್ತಿಗೆದಾರರ ಮಧ್ಯ ಸಮಸ್ಯೆಗಳ ಕಾರಣ ನೀಡಿ ಕಾಮಗಾರಿಗಳನ್ನು ಸ್ಥಗಿತಗೊಳಿಸಿರುತ್ತಾರೆ. ಈ ಸಂಬಂಧ ಗುತ್ತಿಗೆದಾರರು ನ್ಯಾಯಾಲಯದಲ್ಲಿ ದಾವೆಯನ್ನು ಹೂಡಿರುತ್ತಾರೆ.</td></tr>
<tr><td>(ಆ)</td><td>ನಿರ್ಮಾಣ ಹಂತದಲ್ಲಿ ಸ್ಥಗಿತಗೊಂಡಿರುವ ಶಾಲಾ ಕಟ್ಟಡ ನಿರ್ಮಾಣ ಅಂದಾಜು ಮೊತ್ತವೆಷ್ಟು; ನಿರ್ಮಾಣ ಹೊಣೆಯನ್ನು ಯಾವ ಸಂಸ್ಥೆಗೆ ವಹಿಸಲಾಗಿದೆ;ಪ್ರಸ್ತುತ ಆಗಿರುವ ವೆಚ್ಚವೆಷ್ಟು(ಸಂಪೂರ್ಣ ವಿವರ ನೀಡುವುದು);</td><td>ಈ ಕಾಮಗಾರಿಗಳ ನಿರ್ಮಾಣದ ಪರಿಷ್ಕೃತ ಅಂದಾಜು ಮೊತ್ತ ಹಾಗೂ ಫೆಬ್ರವರಿ ಅಂತ್ಯದವರೆಗಿನ ವೆಚ್ಚ ಕೆಳಕಂಡಂತಿದೆ.<br><table><tr><th>ಕ್ರ.ಸಂ</th><th>ಶಾಲೆಯ ಹೆಸರು</th><th>ಅಂದಾಜು ಮೊತ್ತ(ರೂ. ಲಕ್ಷಗಳಲ್ಲಿ)</th><th>ವೆಚ್ಚ (ರೂ. ಲಕ್ಷಗಳಲ್ಲಿ)</th></tr><tr><td>1</td><td>ಸರ್ಕಾರಿ ಪ್ರೌಢಶಾಲೆ ಮಗ್ಗೆ</td><td>47.30</td><td>21.80</td></tr><tr><td>2</td><td>ಸರ್ಕಾರಿ ಪ್ರೌಢಶಾಲೆ ಅಂತರಸಂತೆ</td><td>95.22</td><td>57.70</td></tr></table><br>ಈ ಕಾಮಗಾರಿಗಳ ನಿರ್ಮಾಣ ಹೊಣೆಯನ್ನು ಮೆ॥ ಎನ್.ಸಿ.ಸಿ ಪ್ರೈ.ಲಿ. ಬೆಂಗಳೂರು ಸಂಸ್ಥೆಗೆ ವಹಿಸಿಕೊಡಲಾಗಿದೆ.</td></tr>
</table>

| (ಇ) | ಅಪೂರ್ಣ ಕಟ್ಟಡ ಪೂರ್ಣಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು)? | ಕಾಮಗಾರಿಗಳನ್ನು ಮುಕ್ತಾಯಗೊಳಿಸಲು ಗುತ್ತಿಗೆದಾರರಿಗೆ ಹಲವಾರು ಬಾರಿ ಪ್ರಗತಿ ಪರಿಶೀಲನಾ ಸಭೆಗಳಲ್ಲಿ ತಿಳಿಸಲಾಗಿದೆ.<br>ದಿನಾಂಕ:04.01.2020ರಂದು ಪ್ರಧಾನ ಕಾರ್ಯದರ್ಶಿ ಜಲ ಸಂಪನ್ಮೂಲ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಗುತ್ತಿಗೆದಾರರೊಂದಿಗೆ ನಡೆದ ಆರ್.ಎಂ.ಎಸ್.ಎ ಕಾಮಗಾರಿಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ತೀರ್ಮಾನಿಸಿದಂತೆ ಬಾಕಿ ಇರುವ ಕಾಮಗಾರಿಗಳನ್ನು ಜೂನ್ 2020ರೊಳಗೆ ಪೂರ್ಣಗೊಳಿಸಲು ಗುತ್ತಿಗೆದಾರರಿಗೆ ಅಗತ್ಯ ಕ್ರಮ ವಹಿಸಲು ಅಂತಿಮವಾಗಿ ಸೂಚಿಸಲಾಗಿದೆ.<br>ಉಳಿದಂತೆ ಆರ್.ಎಂ.ಎಸ್.ಎ ಮತ್ತು ಗುತ್ತಿಗೆದಾರರ ಮಧ್ಯೆ ಇರುವ ಸಮಸ್ಯೆಗಳಿಗೆ ಸಕ್ಷಮ ಪ್ರಾಧಿಕಾರದಿಂದ ಇತ್ಯರ್ಥಗೊಳಿಸಿ ಯೋಜನೆ ಪೂರ್ಣಗೊಳಿಸಲು ಕ್ರಮ ವಹಿಸಲಾಗಿದೆ. |
|---|---|---|

**ಇಪಿ 97 ಯೋಸಕ 2020**

(ಎಸ್. ಸುರೇಶ್ ಕುಮಾರ್)
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

**ಕರ್ನಾಟಕ ಸರ್ಕಾರ**

ಸಂಖ್ಯೆ: ಇಡಿ54ಹೆಚ್‌ಪಿಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 18.03.2020

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಉನ್ನತ ಶಿಕ್ಷಣ ಇಲಾಖೆ,

**ಇವರಿಗೆ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ
ಬೆಂಗಳೂರು

ಮಾನ್ಯರೆ

**ವಿಷಯ**: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ವೆಂಕಟರಾವ್ ನಾಡಗೌಡ (ಸಿಂಧನೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2585 ಕ್ಕೆ ಉತ್ತರ ಒದಗಿಸುತ್ತಿರುವ ಬಗ್ಗೆ.

**ಉಲ್ಲೇಖ**:ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.2585/2020,
ದಿನಾಂಕ: 6/3/2020

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ವೆಂಕಟರಾವ್ ನಾಡಗೌಡ (ಸಿಂಧನೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2585ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

**ತಮ್ಮ ನಂಬುಗೆಯ**

**(ಎನ್.ಆರ್ ಎರೆಕುಪ್ಪಿ)**
ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ಆಂತರಿಕ ಆರ್ಥಿಕ ಸಲಹೆಗಾರರು,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2509 |
| ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸಬೇಕಾದ ದಿನಾಂಕ | : | 19.03.2020 |
| ಉತ್ತರಿಸುವವರು | : | ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು |

*****

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅರಣ್ಯ ಇಲಾಖೆಯ ಗ್ರೂಪ್– ಎ, ಗ್ರೂಪ್ – ಬಿ ಮತ್ತು ಗ್ರೂಪ್ – ಸಿ ವೃಂದದ ಹುದ್ದೆಗಳಿಗೆ ಯಾವಯಾವ ವಿದ್ಯಾರ್ಹತೆಯನ್ನು ನಿಗದಿ ಮಾಡಲಾಗಿದೆ; (ವೃಂದವಾರು ವಿವರ ನೀಡುವುದು) | ಅರಣ್ಯ ಇಲಾಖೆಯ ವಿವಿಧ ವೃಂದಗಳ ಹುದ್ದೆಗಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಈ ಕೆಳಕಂಡಂತೆ ವಿದ್ಯಾರ್ಹತೆಯನ್ನು ನಿಗದಿಮಾಡಲಾಗಿದೆ.<br><br>ಗ್ರೂಪ್– ಎ<br>**ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ** ವೃಂದಕ್ಕೆ ಅರಣ್ಯಶಾಸ್ತ್ರ ಅಥವ ವಿಜ್ಞಾನ ಅಥವಾ ಇಂಜಿನಿಯರಿಂಗ್ ವಿಷಯದಲ್ಲಿ ಸ್ನಾತಕ ಪದವಿಯ ವಿದ್ಯಾರ್ಹತೆಯನ್ನು ನಿಗದಿಗೊಳಿಸಲಾಗಿದೆ.<br><br>ಗ್ರೂಪ್–ಬಿ<br>**ವಲಯ ಅರಣ್ಯಾಧಿಕಾರಿ** ವೃಂದಕ್ಕೆ ಅರಣ್ಯಶಾಸ್ತ್ರ ಅಥವಾ ವಿಜ್ಞಾನ ಅಥವಾ ಇಂಜಿನಿಯರಿಂಗ್ ವಿಷಯದಲ್ಲಿ ಸ್ನಾತಕ ಪದವಿಯ ವಿದ್ಯಾರ್ಹತೆಯನ್ನು ನಿಗದಿಗೊಳಿಸಲಾಗಿದೆ.<br><br>ಗ್ರೂಪ್–ಸಿ<br>• **ಉಪ ವಲಯ ಅರಣ್ಯಾಧಿಕಾರಿ ಹಾಗೂ ಮೋಜಣಿದಾರ** ವೃಂದಕ್ಕೆ ಅರಣ್ಯಶಾಸ್ತ್ರ ಅಥವಾ ವಿಜ್ಞಾನ ವಿಷಯಗಳಲ್ಲಿ ಸ್ನಾತಕ ಪದವಿಯ ವಿದ್ಯಾರ್ಹತೆಯನ್ನು ನಿಗದಿಗೊಳಿಸಲಾಗಿದೆ.<br>• **ಅರಣ್ಯ ರಕ್ಷಕ** ವೃಂದಕ್ಕೆ ದ್ವಿತೀಯ ಪಿ.ಯು.ಸಿ. / ತತ್ಸಮಾನ ವಿದ್ಯಾರ್ಹತೆಯನ್ನು ನಿಗದಿಗೊಳಿಸಲಾಗಿದೆ.<br>• **ಪ್ರಥಮ ದರ್ಜೆ ಸಹಾಯಕ** ವೃಂದಕ್ಕೆ ಅಂಗೀಕೃತ ವಿಶ್ವವಿದ್ಯಾನಿಲಯಗಳಿಂದ ಯಾವುದೇ ವಿಷಯದಲ್ಲಿ ಸ್ನಾತಕ ಪದವಿಯ ವಿದ್ಯಾರ್ಹತೆಯನ್ನು ನಿಗದಿಗೊಳಿಸಲಾಗಿದೆ.<br>• **ದ್ವಿತೀಯ ದರ್ಜೆ ಸಹಾಯಕ** ವೃಂದಕ್ಕೆ ದ್ವಿತೀಯ ಪಿ.ಯು.ಸಿ. / ತತ್ಸಮಾನ ವಿದ್ಯಾರ್ಹತೆಯನ್ನು ನಿಗದಿಗೊಳಿಸಲಾಗಿದೆ. |

...2...

| | | |
|---|---|---|
| ಆ) | ಕರ್ನಾಟಕ ರಾಜ್ಯ ಪತ್ರದ ವರದಿ ಪ್ರಕಾರ ವಲಯ ಅರಣ್ಯಾಧಿಕಾರಿಗಳ ಹುದ್ದೆಯ ನೇರ ನೇಮಕಾತಿಯಲ್ಲಿ ಅರಣ್ಯ ಪದವೀಧರರಿಗೆ ಮೊದಲು ನೀಡಲಾಗಿದ್ದ ಮೀಸಲಾತಿಯನ್ನು ಶೇ.75% ರಿಂದ ಶೇ. 50% ಗೆ ಕಡಿತಗೊಳಿಸಿರುವುದು ನಿಜವೇ; | ಹೌದು<br>ಕರ್ನಾಟಕ ಅರಣ್ಯ ಇಲಾಖೆ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು, 2018ಕ್ಕೆ ಸಂಬಂಧಿಸಿದಂತೆ ದಿನಾಂಕ: 11.12.2019ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 72 ಅಪಸೇ 2017 (ಭಾಗ-1)ರನ್ವಯ ಕರಡು ನಿಯಮಗಳನ್ನು ದಿನಾಂಕ: 20.02.2020 ರಂದು ಇ-ಗೆಜೆಟ್ ನಲ್ಲಿ ಪ್ರಕಟಿಸಲಾಗಿರುತ್ತದೆ. ಈ ಬಗ್ಗೆ ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಪರಿಶೀಲನೆ ಹಂತದಲ್ಲಿರುತ್ತದೆ. |
| ಇ) | ಹಾಗಿದ್ದಲ್ಲಿ, ಈ ಮೀಸಲಾತಿಯನ್ನು ಕಡಿತಗೊಳಿಸಲು ಕಾರಣಗಳೇನು; (ವಿವರ ನೀಡುವುದು) | ಅರಣ್ಯ ಶಾಸ್ತ್ರ ಸ್ನಾತಕ ಪದವೀಧರರಿಗೆ ಮೀಸಲಾತಿಯನ್ನು ಈ ಕೆಳಗೆ ನಮೂದಿಸಲಾದ ಕಾರಣಗಳಿಗಾಗಿ ಕಡಿತಗೊಳಿಸಲಾಗಿದೆ.<br>1. ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ ಒಟ್ಟು 2 ಅರಣ್ಯಶಾಸ್ತ್ರ ಪದವಿ ಕಾಲೇಜುಗಳಿದ್ದು, ವಾರ್ಷಿಕ 100 ರಿಂದ 120 ಪದವೀಧರರು ಮಾತ್ರ ಉತ್ತೀರ್ಣರಾಗುತ್ತಿರುತ್ತಾರೆ. ಪ್ರಸ್ತುತ ಅರಣ್ಯ ಇಲಾಖೆಯ ನೇಮಕಾತಿ ಪ್ರಕ್ರಿಯೆಗಳಲ್ಲಿ ಅರಣ್ಯ ಶಾಸ್ತ್ರ ಪದವೀಧರರಿಗೆ ಮೀಸಲಿಡಲಾದ ಹುದ್ದೆಗಳಲ್ಲಿ ಕೆಲವು ಪ್ರವರ್ಗಗಳಲ್ಲಿ ಅರ್ಹ ಅಭ್ಯರ್ಥಿಗಳ ಕೊರತೆಯಿಂದಾಗಿ ಹುದ್ದೆಗಳು ಭರ್ತಿಯಾಗದೆ ಬ್ಯಾಕ್‌ಲಾಗ್ ಉಳಿಯುತ್ತಿರುತ್ತದೆ.<br>2. ವಲಯ ಅರಣ್ಯಾಧಿಕಾರಿ ಹಾಗೂ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗಳ ನೇಮಕಾತಿಯಲ್ಲಿ ಅರಣ್ಯಶಾಸ್ತ್ರ ಕೋಟಾದಡಿ ಮೀಸಲಿರಿಸಲಾದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳ ಸಂಖ್ಯೆ ಕಡಿಮೆ ಇದ್ದು, ಯಾವುದೇ ಸ್ಪರ್ಧಾತ್ಮಕತೆ ಇಲ್ಲದೆ ನೇಮಕಾತಿ ಹೊಂದುವುದರ ಜೊತೆಗೆ ಅಭ್ಯರ್ಥಿಗಳ ಕೊರತೆಯಿಂದಾಗಿ ಕೆಲವು ವರ್ಗಗಳಲ್ಲಿ ಹುದ್ದೆಗಳು ಬ್ಯಾಕ್‌ಲಾಗ್ ಉಳಿದಿರುತ್ತದೆ.<br>3. ಅರಣ್ಯಶಾಸ್ತ್ರ ಪದವೀಧರರು ಉಪ ವಲಯಅರಣ್ಯಾಧಿಕಾರಿ, ವಲಯ ಅರಣ್ಯಾಧಿಕಾರಿ ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗಳಿಗೆ ಏಕಕಾಲದಲ್ಲಿ ಅರ್ಜಿ ಸಲ್ಲಿಸುವರು. ವಲಯ ಅರಣ್ಯಾಧಿಕಾರಿ ಅಥವಾ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ಸಲ್ಲಿಸುವರು. ಇದರಿಂದಾಗಿ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗಳು ಖಾಲಿ ಉಳಿದು, ಮತ್ತೊಮ್ಮೆ ನೇಮಕಾತಿ ಪ್ರಕ್ರಿಯೆ ಕೈಗೊಳ್ಳುವ ಅನಿವಾರ್ಯತೆ ಇಲಾಖೆಗೆ ಉಂಟಾಗುತ್ತದೆ. |

...3...

| ಈ) | ಮೀಸಲಾತಿಯನ್ನು ಕಡಿತ ಮಾಡಿರುವುದರಿಂದ ಅರಣ್ಯ ಶಾಸ್ತ್ರ ಪದವೀಧರರಿಗೆ ಅನ್ಯಾಯವಾಗಲಿದ್ದು, ಸರ್ಕಾರವು ಕೂಡಲೇ ಮೀಸಲಾತಿಯನ್ನು ಈ ಮೊದಲಿನಂತೆಯೇ ಮುಂದುವರೆಸಲು ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು) | ಕರ್ನಾಟಕ ಅರಣ್ಯ ಇಲಾಖೆ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು, 2018ಕ್ಕೆ ಸಂಬಂಧಿಸಿದಂತೆ ದಿನಾಂಕ: 11.12.2019ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 72 ಅಪಸೇ 2017 (ಭಾಗ-1)ರನ್ವಯ ಕರಡು ನಿಯಮಗಳನ್ನು ದಿನಾಂಕ: 20.02.2020 ರಂದು ಇ-ಗೆಜೆಟ್ ನಲ್ಲಿ ಪ್ರಕಟಿಸಲಾಗಿರುತ್ತದೆ. ಈ ಬಗ್ಗೆ ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಪರಿಶೀಲನೆ ಹಂತದಲ್ಲಿರುತ್ತದೆ. |
|---|---|---|

**ಕಡತ ಸಂಖ್ಯೆ: ಅಪಜೀ 75 ಅಪಸೇ 2020**

18/03/20

(ಆನಂದ್ ಸಿಂಗ್)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: ಎಂಇಡಿ/ 56/Kvm /2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19.03.2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಶಿವಲಿಂಗೇಗೌಡ ಕೆ.ಎಂ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2561 ಕ್ಕೆ ಉತ್ತರ.

>><<

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಲಿಂಗೇಗೌಡ ಕೆ.ಎಂ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2561 ಕ್ಕೆ ಉತ್ತರವನ್ನು ಸಿದ್ಧಪಡಿಸಿ ಇದರೊಂದಿಗೆ 50/100 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,

**(ಎಂ. ಜ್ಯೋತಿಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.

# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2561 |
| 2. | ಮಾನ್ಯ ಸದಸ್ಯರ ಹೆಸರು | : | ಶ್ರೀ ಶಿವಲಿಂಗೇಗೌಡ ಕೆ.ಎಂ (ಅರಸೀಕೆರೆ) |
| 3. | ಉತ್ತರಿಸಬೇಕಾದ ದಿನಾಂಕ | : | 19.03.2020 |
| 4. | ಉತ್ತರಿಸುವ ಸಚಿವರು | : | ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಾಸನ ವೈದ್ಯಕೀಯ ಕಾಲೇಜಿನಲ್ಲಿ ವೈದ್ಯಕೀಯ ಸ್ನಾತಕೋತ್ತರ ಕೋರ್ಸುಗಳಿಗೆ ಯಾವ ಯಾವ ಕೋರ್ಸುಗಳಿಗೆ ಎಷ್ಟು ಅಭ್ಯರ್ಥಿಗಳು ದಾಖಲಾತಿ ಪಡೆದಿರುತ್ತಾರೆ; | ಹಾಸನ ವೈದ್ಯಕೀಯ ಕಾಲೇಜಿನಲ್ಲಿ ಸ್ನಾತಕೋತ್ತರ ವೈದ್ಯಕೀಯ ಕೋರ್ಸುಗಳಿಗೆ ದಾಖಲಾತಿ ಪಡೆದಿರುವ ಅಭ್ಯರ್ಥಿಗಳ ಸಂಖ್ಯೆ ಈ ಕೆಳಕಂಡಂತಿರುತ್ತದೆ. |

| ಕ್ರ. ಸಂ | ವೈದ್ಯಕೀಯ ಸ್ನಾತಕೋತ್ತರ ಕೋರ್ಸಿನ ವಿವರ | ಎಂಸಿಐ ನಿಂದ ಅನುಮತಿ ದೊರೆತ ವರ್ಷ | ಎಂಸಿಐ ನಿಂದ ಮಂಜೂರಾಗಿರುವ ಸೀಟುಗಳ ಸಂಖ್ಯೆ | 2019-20ನೇ ಸಾಲಿನಲ್ಲಿ ದಾಖಲಾತಿಯಾಗಿರುವ ಸಂಖ್ಯೆ |
|---|---|---|---|---|
| 1 | MD ANATOMY | 2011 | 02 | 00 |
| 2 | MD PHYSILOGY | 2014 | 02 | 00 |
| 3 | MD MICROBIOLOGY | 2014 | 02 | 00 |
| 4 | MD PHARMACOLOGY | 2014 | 03 | 01 |
| 5 | MD COMMUNITY MEDICNE | 2014 | 02 | 00 |
| 6 | MD DERMATOLOGY, VENEREOLOGY AND LEPROSY | 2014 | 04 | 04 |
| 7 | MS OPHTHALMOLOGY | 2014<br>2019 | 02<br>01 | 02<br>2019-20ಕ್ಕೆ ಅನ್ವಯಿಸುವುದಿಲ್ಲ |
| 8 | MS OTORTHINOLARYNGOLOGY | 2018 | 02 | 02 |
| 9 | MD PATHOLOGY | 2019 | 02 | 2019-20 ಕ್ಕೆ ಅನ್ವಯಿಸುವುದಿಲ್ಲ |
| 10 | MD FORENSIC MEDICINE | 2019 | 02 | 2019-20 ಕ್ಕೆ ಅನ್ವಯಿಸುವುದಿಲ್ಲ |
| 11 | MS GENERAL MEDICINE | 2019 | 08 | 2019-20 ಕ್ಕೆ ಅನ್ವಯಿಸುವುದಿಲ್ಲ |
| 12 | MS GENERAL SURGERY | 2019 | 05 | 2019-20 ಕ್ಕೆ ಅನ್ವಯಿಸುವುದಿಲ್ಲ |
| 13 | MS ORTHOPAEDICS | 2019 | 02 | 2019-20 ಕ್ಕೆ ಅನ್ವಯಿಸುವುದಿಲ್ಲ |
| 14 | MD PAEDIATRICS | 2019 | 02 | 2019-20 ಕ್ಕೆ ಅನ್ವಯಿಸುವುದಿಲ್ಲ |

<table>
<tr>
<td>ಆ)</td>
<td>ಮೆಡಿಕಲ್ ಕೌನ್ಸಿಲ್ ಆಫ್ ಇಂಡಿಯಾ ನಿಯಮಗಳನ್ವಯ ಎಷ್ಟು ವಿದ್ಯಾರ್ಥಿಗಳು ದಾಖಲಾತಿ ಪಡೆಯಲು ಅವಕಾಶವಿರುತ್ತದೆ; ಮತ್ತು ಯಾವ ಕೋರ್ಸುಗಳಿಗೆ ಮೆಡಿಕಲ್ ಕೌನ್ಸಿಲ್ ಆಫ್ ಇಂಡಿಯಾ ಅನುಮತಿ ನೀಡಿರುವುದಿಲ್ಲ; ನೀಡದಿದ್ದಲ್ಲಿ ಕಾರಣಗಳೇನು;</td>
<td>
<table>
<tr><th>ಕ್ರ ಸಂ</th><th>ವೈದ್ಯಕೀಯ ಸ್ನಾತಕೋತ್ತರ ಕೋರ್ಸಿನ ವಿವರ</th></tr>
<tr><td>01</td><td>MS OBSTETRICS AND GYNAECOLOGY</td></tr>
<tr><td>02</td><td>MD ANAESTHESIOLOGY</td></tr>
<tr><td>03</td><td>MD PSYCHIATRY</td></tr>
<tr><td>04</td><td>MD RADIODIAGNOSIS</td></tr>
<tr><td>05</td><td>MD RESPIRATORY MEDICINE</td></tr>
<tr><td>06</td><td>MD BIOCHEMISTRY</td></tr>
</table>
ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಎಮ್.ಸಿ.ಐ. ವಿಧಿಸಿರುವ ಮಾನದಂಡಗಳ ಪ್ರಕಾರ ಕಟ್ಟಡಗಳು ಹಾಗೂ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳು ಹಾಗೂ ಮೂಲಭೂತ ಸೌಕರ್ಯಗಳ ಕೊರತೆಯ ಹಿನ್ನೆಲೆಯಲ್ಲಿ ಅನುಮತಿ ನೀಡಲಾಗಿರುವುದಿಲ್ಲ.
</td>
</tr>
<tr>
<td>ಇ)</td>
<td>ಹಾಗಿದ್ದಲ್ಲಿ ಸರ್ಕಾರ ಈ ಬಗ್ಗೆ ಕೈಗೊಂಡಿರುವ ಕ್ರಮಗಳೇನು<br><br>(ಸಂಪೂರ್ಣ ಮಾಹಿತಿ ನೀಡುವುದು)?</td>
<td>ಎಂ.ಸಿ.ಐ ಮಾನದಂಡಗಳನ್ವಯ ಸಂಸ್ಥೆಯ ಅಗತ್ಯಕ್ಕೆ ತಕ್ಕಂತೆ ಮೂಲ ಭೂತ ಸೌಕರ್ಯಗಳನ್ನು ಒದಗಿಸುವ ಸಂಬಂಧ ಅನುದಾನ ಬಿಡುಗಡೆ ಮಾಡುವಂತೆ ಕೋರಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಈ ಸಂಬಂಧ ಆರ್ಥಿಕ ಇಲಾಖೆಯು ಕೆಲವೊಂದು ಅಂಶಗಳಿಗೆ ಸ್ಪಷ್ಟೀಕರಣ ಕೋರಿದ್ದು, ಸದರಿ ಅಂಶಗಳಿಗೆ ಸ್ಪಷ್ಟೀಕರಣ ಒದಗಿಸಲು ಕ್ರಮವಹಿಸಲಾಗುತ್ತಿದೆ.<br>ಮುಂದುವರೆದು, ಸಂಸ್ಥೆಯು ಸಲ್ಲಿಸಿರುವ ಪ್ರಸ್ತಾವನೆಯಂತೆ 25 ಬೋಧಕ ಮತ್ತು 99 ಬೋಧಕೇತರ ಹುದ್ದೆಗಳನ್ನು ಸೃಜಿಸುವಂತೆ ಕೋರಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಅನುಮೋದನೆ ನಿರೀಕ್ಷಿಸಲಾಗುತ್ತಿದೆ.</td>
</tr>
</table>

**ಸಂಖ್ಯೆ:** ಎಂಇಡಿ 56 ಕೆಯುಎಂ 2020

(ಡಾ: ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: ಎಂಇಡಿ/ 55/KVM /2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19 .03.2020

(ಶಿ) ಬಿ/ 19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಅಭಯ್ ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1706 ಕ್ಕೆ ಉತ್ತರ.

>><<

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಅಭಯ್. ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1706. ಕ್ಕೆ ಉತ್ತರವನ್ನು ಸಿದ್ಧಪಡಿಸಿ ಇದರೊಂದಿಗೆ 50/100 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,

M. Jyothi Prakash

(ಎಂ. ಜ್ಯೋತಿಪ್ರಕಾಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.

ಕರ್ನಾಟಕ ವಿಧಾನ ಸಭೆ

| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1706 |
|---|---|---|
| 2 | ಸದಸ್ಯರ ಹೆಸರು | ಶ್ರೀ ಅಭಯ್ ಪಾಟೀಲ್ |
| 3 | ಉತ್ತರಿಸಬೇಕಾದ ದಿನಾಂಕ | 19/03/2020 |
| 4 | ಉತ್ತರಿಸಬೇಕಾದ ಸಚಿವರು | ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| 1. | ಸರ್ಕಾರಿ ಬೆಳಗಾವಿ ವೈದ್ಯಕೀಯ ಶಿಕ್ಷಣ ಸಂಸ್ಥೆ ಅಸ್ತಿತ್ವಕ್ಕೆ ಬಂದಿರುವುದು ಯಾವಾಗ; ಅಂದಿನಿಂದ ಸಂಸ್ಥೆಯ ಕಟ್ಟಡ, ವಸತಿ ಗೃಹ / ಹಾಸ್ಟೆಲ್‌ಗಳಿಗೆ ಸುಣ್ಣಬಣ್ಣ, ನಿರ್ವಹಣೆ, ದುರಸ್ತಿಗಾಗಿ ಹಾಗೂ ಇತರ ಅಭಿವೃದ್ಧಿಗಳಿಗೆ ಅನುದಾನ ಬಿಡುಗಡೆಯಾಗಿದೆಯೇ; ಬಿಡುಗಡೆಯಾಗಿದ್ದಲ್ಲಿ, ಯಾವ ಯಾವ ಕಾಮಗಾರಿಗಳನ್ನು ನಿರ್ವಹಿಸಲಾಗಿದೆ; ವರ್ಷವಾರು ಹಾಗೂ ಲೆಕ್ಕ ಶೀರ್ಷಿಕೆವಾರು ವಿವರಗಳನ್ನು ಒದಗಿಸುವುದು; (ಸಂಪೂರ್ಣ ವಿವರ ನೀಡುವುದು) | ಬೆಳಗಾವಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ 2005-06 ನೇ ಸಾಲಿನಿಂದ 100 ಎಂಬಿಬಿಎಸ್ ವಿದ್ಯಾರ್ಥಿಗಳ ಪ್ರವೇಶ ಮಿತಿಯೊಂದಿಗೆ ಪ್ರಾರಂಭಿಸಲಾಗಿದೆ.<br>ಅಂದಿನಿಂದ ಸಂಸ್ಥೆಯ ಕಟ್ಟಡ, ವಸತಿ ಗೃಹ / ಹಾಸ್ಟೆಲ್‌ಗಳಿಗೆ ಸುಣ್ಣಬಣ್ಣ, ನಿರ್ವಹಣೆ, ದುರಸ್ತಿಗಾಗಿ ಹಾಗೂ ಇತರ ಅಭಿವೃದ್ಧಿ ಕಾಮಗಾರಿಗಳಿಗೆ ಸರ್ಕಾರದಿಂದ ಬಿಡುಗಡೆಯಾದ ಅನುದಾನದ ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| 2. | ಕಟ್ಟಡ, ವಸತಿ ಗೃಹ / ಹಾಸ್ಟೆಲ್‌ಗಳಿಗೆ ಸುಣ್ಣಬಣ್ಣ ನಿರ್ವಹಣೆ ಕಾಮಗಾರಿಯನ್ನು ನಿರ್ವಹಿಸದಿರಲು ಕಾರಣವೇನು? (ವಿವರ ನೀಡುವುದು) | 1. ಬೆಳಗಾವಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಕಟ್ಟಡಕ್ಕೆ ಸುಣ್ಣ ಬಣ್ಣದ ಕಾರ್ಯ ಒದಗಿಸಿಕೊಳ್ಳಲು ದಿನಾಂಕ 11-12-2018 ರಂದು ಜರುಗಿದ ಸಂಸ್ಥೆಯ ಆರ್ಥಿಕ/ಆಡಳಿತ ಮಂಡಳಿಯ ಸಭೆಯಲ್ಲಿ ಅನುಮೋದನೆ ದೊರೆತಿದ್ದು, ಈ ಕುರಿತು ರೂ. 190.00 ಲಕ್ಷಗಳ ಮೊತ್ತಕ್ಕೆ ಅಂದಾಜು ಪತ್ರಿಕೆಯನ್ನು ಮತ್ತು ನೀಲಿನಕ್ಷೆಯನ್ನು ಸಂಸ್ಥೆಯ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಸಲ್ಲಿಸಿದ್ದಾರೆ. ಸದರಿ ವೆಚ್ಚವನ್ನು ವಿದ್ಯಾರ್ಥಿಗಳ ವಸತಿ ನಿಲಯದ ಉಳಿತಾಯ ಖಾತೆಯಿಂದ ಭರಿಸಲು ತೀರ್ಮಾನಿಸಿದ್ದು, ಈ ವಿಷಯವನ್ನು ಮುಂಬರುವ ಆರ್ಥಿಕ / ಆಡಳಿತ ಮಂಡಳಿ ಸಮಿತಿಯ ಅನುಮೋದನೆ ಪಡೆದ ನಂತರ ಸಂಸ್ಥೆಯಿಂದ ಪ್ರಸ್ತಾವನೆ ಪಡೆದು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. |

| | | |
|---|---|---|
| | | 2. ಸಂಸ್ಥೆಯ ಎರಡು ವಸತಿ ನಿಲಯಗಳಿಗೆ ಸುಣ್ಣ, ಬಣ್ಣ, ಹಾಗೂ ವಾರ್ಡರೋಬ್ ಕಾರ್ಯ ಮುಕ್ತಾಯಗೊಂಡಿದೆ. ಸದರಿ ಕಾರ್ಯವನ್ನು ವಸತಿ ಗೃಹಗಳ ಬಾಡಿಗೆ ಆಕರಣೆಯಿಂದ ಲಭ್ಯವಾಗುವ ಮೊತ್ತದಲ್ಲಿ ಸಂಸ್ಥೆಯಿಂದ ಭರಿಸಲಾಗಿದೆ.<br>3. ಬೋಧಕರ ಶ್ರದ್ಧಾ ರೆಸಿಡೆನ್ಸಿಯ ವಸತಿ ನಿಲಯಗಳಿಗೆ ಸುಣ್ಣ ಬಣ್ಣ ಒದಗಿಸಿಕೊಳ್ಳುವ ಕಾರ್ಯ ಮುಕ್ತಾಯಗೊಂಡಿದೆ.<br>4. ಸಂಸ್ಥೆಯ ಎ. ಸಿ ಮತ್ತು ಡಿ ವೃಂದದ ವಸತಿ ಗೃಹಗಳಿಗೆ ಸುಣ್ಣ ಬಣ್ಣ ಹಾಗೂ ರಿಪೇರಿ ಕಾರ್ಯಗಳಿಗೆ ಸಂಸ್ಥೆಯ ಆರ್ಥಿಕ ಸಮಿತಿಯು ಅನುಮೋದಿಸಿದ್ದು, ಈ ಕುರಿತು ಒಟ್ಟು ರೂ. 92.00 ಲಕ್ಷಗಳ ಮೊತ್ತದ ಟೆಂಡರ ಪ್ರಕ್ರಿಯೆಯನ್ನು ಸಂಸ್ಥೆಯ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಮುಖಾಂತರ ಪೂರ್ಣಗೊಳಿಸಲಾಗಿದೆ. ಇದರಲ್ಲಿ ಗ್ರೂಪ್ 'ಡಿ' ವಸತಿ ಗೃಹಗಳ ರಿಪೇರಿ ಕಾರ್ಯ ಮುಕ್ತಾಯಗೊಂಡಿದೆ. 'ಎ' ಮತ್ತು 'ಸಿ' ಸಮೂಹದ ವಸತಿ ಗೃಹಗಳ ರಿಪೇರಿ ಹಾಗೂ ಸುಣ್ಣ ಬಣ್ಣದ ಕಾರ್ಯ ಪ್ರಗತಿಯಲ್ಲಿದೆ. ಸದರಿ ಮೊತ್ತವನ್ನು ವಸತಿ ಗೃಹಗಳ ಬಾಡಿಗೆಯಿಂದ ಆಕರಣೆಯಾಗುವ ಮೊತ್ತದ ಉಳಿತಾಯ ಖಾತೆಯಿಂದ ಸಂಸ್ಥೆಯಿಂದ ಭರಿಸಲಾಗುವುದು. |
| 3. | ಬಿಮ್ಸ್ ಆವರಣದಲ್ಲಿ ನಿರ್ಮಾಣಗೊಳ್ಳುತ್ತಿರುವ ಆಸ್ಪತ್ರೆಗಳು ಎಷ್ಟು; ಯಾವ ಯಾವ ವಿಶೇಷತೆಗಳನ್ನು ಹೊಂದಿದೆ; ಎಷ್ಟು ಹಾಸಿಗೆಗಳ ಸೌಲಭ್ಯವನ್ನು ಹೊಂದಿದೆ; ಎಷ್ಟು ಮೊತ್ತದ ಅನುದಾನದಲ್ಲಿ ನಿರ್ಮಾಣವಾಗುತ್ತಿದೆ; (ಪೂರ್ಣ ವಿವರಗಳನ್ನು ನೀಡುವುದು) | ಬೆಳಗಾವಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಆವರಣದಲ್ಲಿ 250 ಹಾಸಿಗೆಗಳ ಸೂಪ ರ್ ಸ್ಪೆಷಾಲಿಟಿ ಆಸ್ಪತ್ರೆಯನ್ನು ರೂ. 14,000.00 ಲಕ್ಷ ಮೊತ್ತದಲ್ಲಿ ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಟೆಂಡರ್ ಕಾರ್ಯ ಮುಕ್ತಾಯಗೊಂಡಿದ್ದು ನಿರ್ಮಾಣ ಕಾರ್ಯ ಪ್ರಗತಿಯಲ್ಲಿದೆ.<br>ಸದರಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯು ಕೆಳಕಂಡ ವಿಶೇಷತೆಗಳು ಹಾಗೂ ಸೇವೆಗಳನ್ನು ಹೊಂದಿರುತ್ತದೆ.<br>**<u>ವಿಶೇಷತೆಗಳು:</u>**<br>1) ನ್ಯೂರಾಲಜಿ 2) ನ್ಯೂರೋ ಸರ್ಜರಿ 3) ಪ್ಲಾಸ್ಟಿಕ್ ಸರ್ಜರಿ 4) ಎಂಡ್ರೋಕ್ರೋನಾಲಜಿ 5) ಮೇಡಿಕಲ್ ಗ್ಯಾಸ್ಟ್ರೋಎಂಟ್ರಾಲಾಜಿ, 6) ಸರ್ಜಿಕಲ್ ಗ್ಯಾಸ್ಟ್ರೋಎಂಟ್ರಾಲಾಜಿ 7) ನೆಫ್ರಾಲಜಿ 8) ಯುರಾಲಜಿ 9) ಕಾರ್ಡಿಯಾಲಜಿ 10) ಕಾರ್ಡಿಯೋಥೋರ್ಯಾಸಿಕ್ 11) ಪಿಡಿಯಾಟ್ರಿಕ್ ಸರ್ಜರಿ<br>**<u>ಸೇವೆಗಳು :</u>**<br>1) ಡಯಾಲಿಸಿಸ್ ಯುನಿಟ್‌ಗಳು 2) ಕ್ಯಾಥ್‌ಲ್ಯಾಬ್ 3) ಅನಸ್ತೇಶಿಯಾಲಾಜಿ ವಿಭಾಗ, 4) ರೇಡಿಯಾಲಾಜಿ ವಿಭಾಗ. |

| | | |
|---|---|---|
| | | 2) ಸ್ತ್ರೀ ರೋಗ ವಿಭಾಗ ನವೀಕರಣ ಹಾಗೂ 90 ಹಾಸಿಗೆ ಸಾಮರ್ಥ್ಯದ ಪಿಡಿಯಾಟ್ರಿಕ್ ವಾರ್ಡ್‌ನ್ನು ರೂ. 750.00 ಲಕ್ಷಗಳ ಮೊತ್ತದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನ ನೀಡಲಾಗಿದೆ. ಸದರಿ ಕಾಮಗಾರಿಯು ಮುಕ್ತಾಯ ಹಂತದಲ್ಲಿದೆ.<br><br>3) ಹೊರರೋಗಿ ವಿಭಾಗದಲ್ಲಿ 200 ಹಾಸಿಗೆ ಸಾಮರ್ಥ್ಯದ ವಾರ್ಡ್‌ನ್ನು ರೂ. 925.00 ಲಕ್ಷಗಳ ಮೊತ್ತದಲ್ಲಿ ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಸದರಿ ಕಾಮಗಾರಿಯು ಅಂತಿಮ ಹಂತದಲ್ಲಿದೆ. |
| 4. | ಬೆಳಗಾವಿ ವೈದ್ಯಕೀಯ ಶಿಕ್ಷಣ ಸಂಸ್ಥೆಯಲ್ಲಿ ಎಂ.ಬಿ.ಬಿಎಸ್. ಪ್ರವೇಶ ಮಿತಿಯನ್ನು 100 ರಿಂದ 150 ಕ್ಕೆ ಸ್ನಾತಕೋತ್ತರ ಪದವಿಯೊಂದಿಗೆ ಹೆಚ್ಚಿಸಿ ಮೇಲ್ದರ್ಜೆಗೇರಿಸುವುದರೊಂದಿಗೆ ಬೋಧಕ ಸಿಬ್ಬಂದಿಗಳ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡುವ ಪ್ರಸ್ತಾವನೆ ಸರ್ಕಾರಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಕೈಗೊಳ್ಳುವ ಕ್ರಮಗಳೇನು? | ಬೆಳಗಾವಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ 2017-18 ನೇ ಸಾಲಿನಿಂದ ಎಂಬಿಬಿಎಸ್ ಪ್ರವೇಶ ಮಿತಿಯನ್ನು 100 ರಿಂದ 150 ಕ್ಕೆ ಹೆಚ್ಚಿಸಲಾಗಿದೆ. ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಆಕುಕ 148 ಕೆವಿಎಂ 2017 ದಿನಾಂಕ: 28-10-2017 ರಲ್ಲಿ ವಿವಿಧ ವಿಭಾಗಗಳ 05 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಹಾಗೂ ಸರ್ಕಾರದ ಆದೇಶ ಸಂಖ್ಯೆ: ಆಕುಕ 148 ಕೆವಿಎಂ 2017 ದಿನಾಂಕ: 11-01-2019 ರಲ್ಲಿ ವಿವಿಧ ವಿಭಾಗಗಳ 05 ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿರುತ್ತದೆ.<br><br>ಪ್ರಸ್ತುತ ಮೇಲ್ಕಂಡ ಹುದ್ದೆಗಳನ್ನು ಹೊರತುಪಡಿಸಿ ಎಂ.ಸಿ.ಐ. ನಿಯಮಾನುಸಾರ ಅವಶ್ಯಕವಿರುವ 43 ವಿವಿಧ ಬೋಧಕರ ಹುದ್ದೆಗಳ ಸೃಜನೆಗಾಗಿ ಸಂಸ್ಥೆಯು ಪ್ರಸ್ತಾವನೆ ಸಲ್ಲಿಸಿದ್ದು, ಮಂಜೂರಾತಿ ಪ್ರಕ್ರಿಯೆ ಪರಿಶೀಲನೆಯಲ್ಲಿದೆ. |

ಸಂಖ್ಯೆ: ಎಂಇಡಿ 55 ಕೆವಿಎಂ 2020

(ಡಾ|| ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು

ಅನುಬಂಧ-1

## ಬೆಳಗಾವಿ ವೈದ್ಯಕೀಯ ವಿಜ್ಞಾನ ಸಂಸ್ಥೆ, ಬೆಳಗಾವಿ

ಸರಕಾರವು ಕಟ್ಟಡ ಕಾಮಗಾರಿಗಳಿಗಾಗಿ ಒದಗಿಸಲಾದ ಅನುದಾನದಲ್ಲಿ ಕೈಗೊಂಡ ಕಾಮಗಾರಿಗಳ ವಿವರ

| ಕ್ರ ಸಂ | ಕಾಮಗಾರಿ ವಿವರ | ಸರ್ಕಾರದ ಆದೇಶ ಕ್ರಮಾಂಕ | ಲೆಕ್ಕ ಶೀರ್ಷಿಕೆ | ಬಿಡುಗಡೆಯಾದ ಮೊತ್ತ ರೂ ಲಕ್ಷಗಳಲ್ಲಿ | ಷರಾ |
|---|---|---|---|---|---|
| 1) | ಮೊದಲನೇಯ ಹಂತದ ಕಾಮಗಾರಿ (ವರ್ಷ 2005 ರಿಂದ 2008 ರ ವರೆಗೆ<br>1 ವೈದ್ಯಕೀಯ ಮಹಾವಿದ್ಯಾಲಯದ ಕಟ್ಟಡ (ಬೇಸ್‌ಮೆಂಟ್ ನೆಲಮಹಡಿ ಮೊದಲನೇ ಮಹಡಿ.<br>2 ಗಂಡು ಮಕ್ಕಳ ವಸತಿ ನಿಲಯ (ನೆಲ ಮಹಡಿ ಮೊದಲನೇ ಮಹಡಿ)<br>3 ಹೆಣ್ಣು ಮಕ್ಕಳ ವಸತಿ ನಿಲಯ (ನೆಲ ಮಹಡಿ ಹಾಗೂ ಮೊದಲನೇ ಮಹ) | ಕ್ರ. ಆಕುಕ 200 ಎಂಪಿಎಸ್ 2005, ದಿನಾಂಕ: 30-08-2005 ಮತ್ತು ಆಕುಕ 39 ಎಂಪಿಎಸ್ 2006, ದಿನಾಂಕ: 16-03-2006 | 4210-03-105-1-02-386<br>&<br>2210-05-105-1-40-101 | 1,743.00 | |
| 2) | ಎರಡನೇ ಹಂತ ಏಪ್ರಿಲ್ 2007 ರಿಂದ ಮೇ 2012 ರ ವರೆಗೆ<br>1) ವೈದ್ಯಕೀಯ ಮಹಾವಿದ್ಯಾಲಯದ ಕಟ್ಟಡ 2ನೇ, 3ನೇ ಹಾಗೂ 4ನೇ ಮಹಡಿ ನಿರ್ಮಾಣ<br>2) ಆಡಿಟೋರಿಯಂ (ಬೇಸ್‌ಮೆಂಟ್, ನೆಲಮಹಡಿ ಗ್ಯಾಲರಿ ಮೊದಲನೇ ಮಹಡಿ ಹಾಗೂ ಎರಡನೇ ಮಹಡಿ.<br>3) ಗಂಡು ಮಕ್ಕಳ ವಸತಿ ನಿಲಯ ( 2 ರಿಂದ 5ನೇ ಮಹಡಿಯ ವರೆಗೆ<br>4) ಹೆಣ್ಣು ಮಕ್ಕಳ ವಸತಿ ನಿಲಯ ( 2 ರಿಂದ 5ನೇ ಮಹಡಿಯ ವರೆಗೆ<br>5) 1 ವೈದ್ಯರ ವಸತಿ ನಿಲಯ ( ನೆಲಮಹಡಿ 4 ಮಹಡಿಗಳು | ಕ್ರ. ಆಕುಕ 266 ಎಂಪಿಎಸ್ 2006 ದಿನಾಂಕ: 07-09-2006 | 4210-03-105-1-02-386 | 4,330.00 | |

| ಕ್ರ ಸಂ | ಕಾಮಗಾರಿ ವಿವರ | ಸರ್ಕಾರದ ಆದೇಶ ಕ್ರಮಾಂಕ | ಲೆಕ್ಕ ಶೀರ್ಷಿಕೆ | ಬಿಡುಗಡೆಯಾದ ಮೊತ್ತ ರೂ ಲಕ್ಷಗಳಲ್ಲಿ | ಷರಾ |
|---|---|---|---|---|---|
| | 2 ಸಿ ದರ್ಜೆ ವಸತಿ ಗೃಹ ನೆಲ ಮಹಡಿ + 7 ಮಹಡಿಗಳು | | | | |
| | 3 ಡಿ ದರ್ಜೆ ವಸತಿ ಗೃಹ ನೆಲ ಮಹಡಿ + 7 ಮಹಡಿಗಳು | | | | |
| | ಒಟ್ಟು ವೆಚ್ಚ | | | 6,073.00 | |
| 3) | 20 ವಸತಿ ಗೃಹಗಳನ್ನು ಶ್ರದ್ಧಾ ರೇಸಿಡೆನ್ಸಿಯಲ್ಲಿ ಒದಗಿಸಿಕೊಳ್ಳಲಾಗಿದೆ. | ಸರ್ಕಾರದ ಆದೇಶ ಸಂಖ್ಯೆ ಆಕುಕ 386 ಎಂಪಿಎಸ್ 2006ಬೆಂಗಳೂರು ದಿನಾಂಕ 29/12/2006 | 4210-03-105-1-02-386 | 400.00 | |
| | ಒಟ್ಟು ವೆಚ್ಚ | | | 6473.00 | |
| 4) | ಎಸ್.ಸಿ.ಪಿ/ ಟಿ ಎಸ್ ಪಿ ಯೋಜನೆ ಅಡಿಯಲ್ಲಿ ಎರಡು ವಸತಿ ಗೃಹ ನಿರ್ಮಾಣ 2016 ರಿಂದ 2018. ಹಾಗೂ ಆಕುಕ 50 ಕೆಪಿಎಂ 2015 ಬೆಂ 26/03/2015 | ಸರ್ಕಾರದ ಆದೇಶ ಸಂಖ್ಯೆ ಆಕುಕ 63 ಕೆಪಿಎಂ 2015 ಬೆಂ 26/03/2015 | 4210-03-105-1-02-422/423 | 589.79 | ಕಾಮಗಾರಿ ಪೂರ್ಣಗೊಂಡಿದೆ |
| 5) | 250 ಹಾಸಿಗೆ ಸಾಮರ್ಥ್ಯದ ಬೆಳಗಾವಿ ನಗರಕ್ಕೆ ಸೂಪರ ಸ್ಪೇಷಾಲಿಟಿ ಆಸ್ಪತ್ರೆ ನಿರ್ಮಾಣಕ್ಕೆ ಮಂಜೂರಾತಿ ನೀಡಿದೆ. | ಸರ್ಕಾರದ ಆದೇಶ ಸಂಖ್ಯೆ ಆಕುಕ 150 150 ಎಂಎಸ್ಎಫ್ 2014 ಬೆಂ ದಿನಾಂಕ 12/09/2017 | 4210-01-110-1-17-139 ಅನುಮೋದಿತ ಮೊತ್ತ ರೂ. 14000.00 | 6977.43 | ಕಾಮಗಾರಿ ಪ್ರಗತಿಯಲ್ಲಿದೆ |
| 6) | ಜಲತ್ಯಾಜ ಸಂಸ್ಕರಣ ಘಟಕ ನಿರ್ಮಾಣ | ಕ್ರ. ಆಕುಕ 146 ಕೆಪ್ಪಿಎಂ 2013 (1). ದಿನಾಂಕ: 12-08-2013 | 4210-03-105-1-02-386 | 193.00 | ಕಾಮಗಾರಿ ಪೂರ್ಣಗೊಂಡಿದೆ |
| 7) | ಒಳಚರಂಡಿ ಕಾರ್ಯವ್ಯವಸ್ಥೆ ಸಂಸ್ಥೆಯ ಉಳಿತಾಯದ ಮೊತ್ತದಲ್ಲಿ ಸರ್ಕಾರದ ಆದೇಶ ಕ್ರಮಾಂಕ | ಕ್ರ. ಆಕುಕ 151 ಕೆಪ್ಪಿಎಂ 2015 ಬೆಂಗಳೂರು ದಿನಾಂಕ: 05-08-2015 | ಸಂಸ್ಥೆಯಲ್ಲಿ ಲಭ್ಯವಿರುವ ಅನುದಾನದಿಂದ | 415.00 | ಕಾಮಗಾರಿ ಅಂತಿಮ ಹಂತದಲ್ಲಿದೆ. |
| 8) | 10 ಹಾಸಿಗೆಗಳ ವಯೋ ವೃದ್ಧರಿಗೆ ವಾರ್ಡ ನಿರ್ಮಾಣ ( ಆ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ನಿರ್ಮಿತ) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ನಿರ್ಮಿಸಲಾಗಿದೆ. | ರಾಷ್ಟ್ರೀಯ ವಯೋವೃದ್ಧ ಕ್ಷೇಮಾಭಿವೃದ್ಧಿ ಕಾರ್ಯಕ್ರಮದಡಿ | 80.00 | ಕಾಮಗಾರಿ ಪೂರ್ಣಗೊಂಡಿದೆ. |

..3

| ಕ್ರ ಸಂ | ಕಾಮಗಾರಿ ವಿವರ | ಸರ್ಕಾರದ ಆದೇಶ ಕ್ರಮಾಂಕ | ಲೆಕ್ಕ ಶೀರ್ಷಿಕೆ | ಬಿಡುಗಡೆಯಾದ ಮೊತ್ತ ರೂ ಲಕ್ಷಗಳಲ್ಲಿ | ಷರಾ |
|---|---|---|---|---|---|
| 18) | ಯಂತ್ರೋಪಕರಣಗಳನ್ನು ಒದಗಿಸಿಕೊಳ್ಳುವ ಕುರಿತು | ಆಕುಕ 47 ಕೆಪ್ಟಿಎಂ 2018 (2) ಬೆಂ. ದಿನಾಂಕ: 07-03-2019 | 4210-03-105-1-02-386 | 313.00 | ಖರೀದಿ ಸಮಿತಿ ಅನುಮೋದಿಸಿದ್ದು ಸರಬರಾಜು ಆದೇಶ ನೀಡಲಾಗಿದೆ |
| 19) | ಹೊಸ ಕಟ್ಟಡಗಳಿಗೆ ಪಿಠೋಪಕರಣ, ಸಾಧನ ಸಲಕರಣೆ ಇತ್ಯಾದಿ ಒದಗಿಸಿಕೊಳ್ಳುವ ಕುರಿತು | ಆಕುಕ 42 ಕೆಪ್ಟಿಎಂ 2019 ಬೆಂ. ದಿನಾಂಕ: 14-03-2019 | 4210-03-105-1-02-386 | 587.35 | ಸದರಿ ವಿಷಯವನ್ನು ಮುಂಬರುವ ಆರ್ಥಿಕ ಸಮಿತಿಯಲ್ಲಿ ಮಂಡಿಸಿ ಟೆಂಡರ ಪ್ರಕ್ರಿಯೆ ಪ್ರಾರಂಭಿಸಲಾಗುವದು. |
| 20) | ಬಾಲಕಿಯರ ಹಾಗೂ ಬಾಲಕರ ವಸತಿ ನಿಲಯಗಳಿಗೆ ವಾರ್ಡರೋಬ್ಸ್ ಅಳವಡಿಸುವದು ಹಾಗೂ ಸುಣ್ಣ ಬಣ್ಣ | ಆಕುಕ 227 ಕೆಪ್ಟಿಎಂ 2015 ಬೆಂ ದಿನಾಂಕ 22/12/2016 | ಸಂಸ್ಥೆಯಲ್ಲಿ ಲಭ್ಯವಿರುವ ಅನುದಾನದಿಂದ | 147.06 | ಕಾಮಗಾರಿ ಪೂರ್ತಿಗೊಂಡಿದೆ. |
| 21) | ಪ್ರಧ್ಯಾ ರೇಸಿಡೆನ್ಸಿಯ ಬೋಧಕರ 20 ವಸತಿ ಗೃಹಗಳಿಗೆ ಸುಣ್ಣ ಬಣ್ಣ | ಆರ್ಥಿಕ ಸಮಿತಿ ಮತ್ತು ಆಡಳಿತ ಮಂಡಳಿಯ ಅನುಮೋದನೆಯೊಂದಿಗೆ | ಸಂಸ್ಥೆಯಲ್ಲಿ ಲಭ್ಯವಿರುವ ಅನುದಾನದಿಂದ | 2.52 | ಕಾಮಗಾರಿ ಪೂರ್ತಿಗೊಂಡಿದೆ. |

ನಿರ್ದೇಶಕರು,
ಬೆಳಗಾವಿ ವೈದ್ಯಕೀಯ ವಿಜ್ಞಾನ ಸಂಸ್ಥೆ,
ಬೆಳಗಾವಿ.

ಕರ್ನಾಟಕ ಸರ್ಕಾರ

ಸಂಖ್ಯೆ: ಎಂಇಡಿ/ 92 /ಎಂಇಎಫ್/ /2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19 .03.2020

19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಆನ್ವೀರ್ ಸೇಠ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2553 ಕ್ಕೆ ಉತ್ತರ.

>><<

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಆನ್ವೀರ್ ಸೇಠ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2553. ಕ್ಕೆ ಉತ್ತರವನ್ನು ಸಿದ್ಧಪಡಿಸಿ ಇದರೊಂದಿಗೆ 50/100 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,

M. Jyothiprakash

(ಎಂ. ಜ್ಯೋತಿಪ್ರಕಾಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2553 |
| ವಿಧಾನ ಸಭೆಯ ಸದಸ್ಯರು | ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) |
| ಉತ್ತರಿಸಬೇಕಾದ ದಿನಾಂಕ | 19/03/2020 |
| ಉತ್ತರಿಸುವ ಸಚಿವರು | ಸನ್ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಶ್ರೀ ಜಯದೇವ ಹೃದ್ರೋಗ ಹಾಗೂ ಸಂಶೋಧನಾ ಸಂಸ್ಥೆ, ಮೈಸೂರು ಇಲ್ಲಿಗೆ ಮಂಜೂರಾಗಿರುವ ಹುದ್ದೆಗಳ ಸಂಖ್ಯೆ ಎಷ್ಟು; ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ ಎಷ್ಟು ವಿವರ ನೀಡುವುದು; | ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಶಾಖೆಗೆ ಒಟ್ಟು 448 ಹುದ್ದೆಗಳು ಮಂಜೂರಾಗಿದ್ದು, ಹಾಲಿ 448 ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದಾರೆ . |
| ಆ) | ಸಂಸ್ಥೆಯಲ್ಲಿ ಸಿಬ್ಬಂದಿ ನೇಮಕಾತಿ ಮಾಡಿಕೊಳ್ಳಲು (ಖಾಯಂ/ಗುತ್ತಿಗೆ) ಸರ್ಕಾರ ನಿಯಮಾವಳಿಯನ್ನು ರೂಪಿಸಿದೆಯೇ; ರೂಪಿಸಿದ್ದಲ್ಲಿ, ವಿವರ ನೀಡುವುದು; | ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಖಾಯಂ ಹುದ್ದೆಗಳ ನೇಮಕಾತಿಯನ್ನು ಸಂಸ್ಥೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಮಾಡಿಕೊಳ್ಳಲಾಗುವುದು. |
| ಇ) | ಪ್ರಸ್ತುತ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಾಯಂ ಹಾಗೂ ಗುತ್ತಿಗೆ ಸಿಬ್ಬಂದಿಗಳ ಸಂಖ್ಯೆ ಹುದ್ದೆವಾರು ಸಂಪೂರ್ಣ ವಿವರ ನೀಡುವುದು | ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಶಾಖೆಯಲ್ಲಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಖಾಯಂ ಹಾಗೂ ಗುತ್ತಿಗೆ ಸಿಬ್ಬಂದಿಗಳ ವಿವರಗಳು ಈ ಕೆಳಗಿನಂತಿವೆ. |
| ಈ) | ಹೊರ ಗುತ್ತಿಗೆ ಸಿಬ್ಬಂದಿ ನೇಮಕಾತಿ ಮಾಡಿಕೊಳ್ಳಲು ಮೀಸಲಾತಿ ನಿಯಮವನ್ನು ಪಾಲಿಸಲಾಗುತ್ತಿದೆಯೇ; ಮೀಸಲಾತಿ ನಿಯಮವನ್ನು ಪಾಲಿಸದಿರಲು ಕಾರಣವೇನು? (ವಿವರ ನೀಡುವುದು) | ಶ್ರೀ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಹೊರ ಗುತ್ತಿಗೆ ಆಧಾರದ ಮೇಲೆ ಸಿಬ್ಬಂದಿಯನ್ನು ನೇಮಕಾತಿ ಮಾಡಿಕೊಂಡಿರುವುದಿಲ್ಲ. |

(ಇ) ಉತ್ತರದ ಕೋಷ್ಟಕ:

| ಹುದ್ದೆ | ಖಾಯಂ | ಗುತ್ತಿಗೆ |
|---|---|---|
| ವೈದ್ಯರುಗಳು | 26 | 29 |
| ಶುಶ್ರೂಷಕರು | 8 | 170 |
| ತಂತ್ರಜ್ಞರು | 18 | 47 |
| ಆಡಳಿತ ಸಿಬ್ಬಂದಿಗಳು | 3 | 54 |
| ನಾಲ್ಕನೇ ದರ್ಜೆ ನೌಕರರು | 7 | 86 |
| ಒಟ್ಟು | 62 | 386 |

ಕಡತ ಸಂ: ಎಂಇಡಿ 92 ಎಂಎಸ್‌ಎಫ್ 2020

(ಡಾ: ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಎಂಇಡಿ/ 181/ ಎಂಎಂಸಿ /2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19.03.2020

129
4/5
19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2535 ಕ್ಕೆ ಉತ್ತರ.

>><<

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2535 ಕ್ಕೆ ಉತ್ತರವನ್ನು ಸಿದ್ಧಪಡಿಸಿ ಇದರೊಂದಿಗೆ 50/100 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,

(ಎಂ. ಜ್ಯೋತಿಪ್ರಕಾಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2535
2. ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ.
3. ಉತ್ತರಿಸಬೇಕಾದ ದಿನಾಂಕ : 19.03.2020
4. ಉತ್ತರಿಸಬೇಕಾದ ಸಚಿವರು : ವೈದ್ಯಕೀಯ ಶಿಕ್ಷಣ ಸಚಿವರು

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಉಡುಪಿ ಜಿಲ್ಲೆಯಲ್ಲಿ ಸರ್ಕಾರಿ ಮೆಡಿಕಲ್ ಕಾಲೇಜು ಸ್ಥಾಪನೆ ಮಾಡುವ ಬಗ್ಗೆ ಪ್ರಸ್ತಾವನೆ ಸಲ್ಲಿಸಲಾಗಿದೆಯೇ ; | ಕೇಂದ್ರ ಸರ್ಕಾರದ ಯೋಜನೆಯನ್ವಯ ಸರ್ಕಾರಿ / ಖಾಸಗಿ ವೈದ್ಯಕೀಯ ಕಾಲೇಜುಗಳಿರದ ಜಿಲ್ಲೆಗಳಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲು ಅವಕಾಶವಿರುತ್ತದೆ. ಈ ಯೋಜನೆ ಅಡಿ ಕೇಂದ್ರ ಹಾಗೂ ರಾಜ್ಯ ಸರ್ಕಾರದ ಪಾಲು ಶೇ.60:40 ರ ಅನುಪಾತದಲ್ಲಿ ಒಟ್ಟು ರೂ.325.00 ಕೋಟಿಗಳ ಅನುದಾನ ಲಭ್ಯವಾಗಲಿದೆ.<br><br>ಸದರಿ ಯೋಜನೆಯನ್ವಯ ಖಾಸಗಿ / ಸರ್ಕಾರಿ ವೈದ್ಯಕೀಯ ಕಾಲೇಜುಗಳಿರದ ಜಿಲ್ಲೆಗಳಾದ ಹಾವೇರಿ, ಯಾದಗಿರಿ, ಚಿಕ್ಕಮಗಳೂರು ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳನ್ನು ಪ್ರಾರಂಭಿಸಲು ಈಗಾಗಲೇ ಕ್ರಮವಹಿಸಲಾಗಿದೆ.<br><br>ತುಮಕೂರು, ದಾವಣಗೆರೆ, ಚಿತ್ರದುರ್ಗ, ಬಾಗಲಕೋಟೆ, ಕೋಲಾರ, ದಕ್ಷಿಣ ಕನ್ನಡ, ಉಡುಪಿ, ಬೆಂಗಳೂರು ಗ್ರಾಮಾಂತರ ಮತ್ತು ವಿಜಯಪುರ ಇಲ್ಲಿ ಈಗಾಗಲೇ ಖಾಸಗಿ ವೈದ್ಯಕೀಯ ಕಾಲೇಜುಗಳು ಕಾರ್ಯ ನಿರ್ವಹಿಸುತ್ತಿರುವುದರಿಂದ, ಈ ಜಿಲ್ಲೆಗಳಲ್ಲಿ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸುವುದು ಕೇಂದ್ರ ಸರ್ಕಾರದ ಯೋಜನೆಯ ವ್ಯಾಪ್ತಿಗೆ ಒಳಪಡುವುದಿಲ್ಲ.<br><br>ರಾಜ್ಯ ಸರ್ಕಾರದ ವತಿಯಿಂದ ಹೊಸ ಸರ್ಕಾರಿ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲು ಅಂದಾಜು ರೂ.525.00 ಕೋಟಿಗಳ ಅನಾವರ್ತಕ ವೆಚ್ಚ ಹಾಗೂ |
| ಆ) | ಹಾಗಿದ್ದಲ್ಲಿ, ಯಾವಾಗ ಪ್ರಾರಂಭ ಮಾಡಲಾಗುವುದು. | |

| | | ರೂ.42.75 ಕೋಟಿಗಳ ಆವರ್ತಕ ವೆಚ್ಚದ ಅವಶ್ಯಕತೆ ಇರುತ್ತದೆ.<br><br>ಪ್ರಸ್ತುತ ಅನುದಾನದ ಕೊರತೆಯ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರದ ವತಿಯಿಂದಲೇ ಪೂರ್ಣ ವೆಚ್ಚ ಭರಿಸಿ, ಹೊಸ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸುವ ಯಾವುದೇ ಪ್ರಸ್ತಾವನೆಗಳು ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |
|---|---|---|

ಸಂಖ್ಯೆ: ಎಂಇಡಿ 181 ಎಂಎಂಸಿ 2020

(ಡಾ.ಕೆ.ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಎಂಇಡಿ/ 48/Rgu/ /2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19 .03.2020

196 ಓ/ಸ 19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ. ಎಸ್. ಎನ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2514 ಕ್ಕೆ ಉತ್ತರ.

>><<

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ. ಎಸ್. ಎನ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2514 ಕ್ಕೆ ಉತ್ತರವನ್ನು ಸಿದ್ಧಪಡಿಸಿ ಇದರೊಂದಿಗೆ 50/100 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,
M. Jyothiprakash
(ಎಂ. ಜ್ಯೋತಿಪ್ರಕಾಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2514
2. ಮಾನ್ಯ ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ.ಎಸ್.ಎನ್. (ಬಾಗೇಪಲ್ಲಿ)
3. ಉತ್ತರಿಸಬೇಕಾದ ದಿನಾಂಕ : 19.03.2020
4. ಉತ್ತರಿಸುವ ಸಚಿವರು : ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಎಂ.ಬಿ.ಬಿ.ಎಸ್. ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಯಾವುದಾದರೂ ಒಂದು ವಿಷಯದಲ್ಲಿ ಅನುತ್ತೀರ್ಣವಾದಲ್ಲಿ ಮುಂದಿನ ವರ್ಷದ ವ್ಯಾಸಂಗಕ್ಕೆ ಅವಕಾಶ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ. |
| ಆ) | ಬಂದಿದ್ದಲ್ಲಿ, ಇತರೆ ಎಲ್ಲಾ ವಿಭಾಗಗಳ ಶಿಕ್ಷಣದಲ್ಲಿ 4 ವಿಷಯಗಳು ಅನುತ್ತೀರ್ಣರಾದರೂ ಮುಂದಿನ ವರ್ಷದ ವ್ಯಾಸಂಗಕ್ಕೆ ಅವಕಾಶ ಇದ್ದು ವೈದ್ಯಕೀಯ ಶಿಕ್ಷಣದಲ್ಲಿ ಅವಕಾಶ ಇಲ್ಲದೇ ಇರಲು ಕಾರಣವೇನು? | ವೈದ್ಯಕೀಯ ಶಿಕ್ಷಣಕ್ಕೆ ಸಂಬಂಧಿಸಿದಂತೆ, ಭಾರತೀಯ ವೈದ್ಯಕೀಯ ಪರಿಷತ್ತು (ಎಂ.ಸಿ.ಐ) ರೂಪಿಸುವ ನಿಯಮಗಳು ಎಲ್ಲಾ ವೈದ್ಯಕೀಯ ಕಾಲೇಜುಗಳಿಗೆ ಏಕ ರೂಪವಾಗಿ ಅನ್ವಯವಾಗುತ್ತವೆ. ಅದರಂತೆ, ಎಂಸಿಐ ನಿಗದಿಪಡಿಸಿರುವ ಮಾನದಂಡಗಳನ್ವಯ ಕ್ಯಾರಿ ಓವರ್ ಪದ್ಧತಿಯನ್ನು ಕಡ್ಡಾಯವಾಗಿ ಪಾಲಿಸಬೇಕಾಗುತ್ತದೆ.<br>ಎಂ.ಬಿ.ಬಿ.ಎಸ್ ಮೊದಲನೆ ವರ್ಷಕ್ಕೆ ಮಾತ್ರ ಕ್ಯಾರಿ ಓವರ್ ಇರುವುದಿಲ್ಲ. ತದನಂತರ 2ನೇ, 3ನೇ ಮತ್ತು 4ನೇ ವರ್ಷಗಳ ಪರೀಕ್ಷೆಗಳಿಗೆ ಎಂ.ಸಿ.ಐ ನಿಯಮಾವಳಿಗಳ ಪ್ರಕಾರ ಕ್ಯಾರಿ ಓವರ್ ಪದ್ಧತಿ ಅನ್ವಯವಾಗುತ್ತದೆ. |
| ಇ) | ಇತರೆ ಶಿಕ್ಷಣಗಳಂತೆ ವೈದ್ಯಕೀಯ ಶಿಕ್ಷಣದಲ್ಲಿ ಕ್ಯಾರಿ ಓವರ್ ನಿಯಮ ನೀಡಿದರೆ ವಿದ್ಯಾರ್ಥಿಗಳಿಗೆ ಅನುಕೂಲವಾಗುವುದು ನಿಜವಲ್ಲವೇ? | |
| ಈ) | ಈ ಕ್ಯಾರಿ ಓವರ್ ಸಿಸ್ಟಂ ಅನ್ನು ವೈದ್ಯಕೀಯ ಶಿಕ್ಷಣಕ್ಕೆ ಅಳವಡಿಸಲು ಸರ್ಕಾರ ಏನು ಕ್ರಮ ಕೈಗೊಳ್ಳುವುದು? (ವಿವರ ನೀಡುವುದು) | ಮೇಲಿನ ಉತ್ತರದ ಹಿನ್ನೆಲೆಯಲ್ಲಿ ಕ್ಯಾರಿ ಓವರ್ ಪದ್ಧತಿಯನ್ನು ಅಳವಡಿಸಿಕೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. |

**ಸಂಖ್ಯೆ:** ಎಂಇಡಿ 42 ಆರ್‌ಜಿಯು 2020

(ಡಾ: ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಎಂಇಡಿ/ 57/ಎಂಪಿಎಸ್ /2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 19 .03.2020

189 u/s
19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಶ್ರೀನಿವಾಸ ಎಂ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2415 ಕ್ಕೆ ಉತ್ತರ.

>><<

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಶ್ರೀನಿವಾಸ ಎಂ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2415 ಕ್ಕೆ ಉತ್ತರವನ್ನು ಸಿದ್ಧಪಡಿಸಿ ಇದರೊಂದಿಗೆ 50/100 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,

(ಎಂ. ಜ್ಯೋತಿಪ್ರಕಾಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2415
2. ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ.
3. ಉತ್ತರಿಸಬೇಕಾದ ದಿನಾಂಕ : 19.03.2020
4. ಉತ್ತರಿಸಬೇಕಾದ ಸಚಿವರು : ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ (MIMS) ಬೋಧಕ ಆಸ್ಪತ್ರೆಯನ್ನು 550 ರಿಂದ 800 ಹಾಸಿಗೆ ಸಾಮರ್ಥ್ಯಕ್ಕೆ ಮೇಲ್ದರ್ಜೆಗೇರಿಸಲು 2018–19ನೇ ಸಾಲಿನ ಆಯವ್ಯಯದಲ್ಲಿ 30.00 ಕೋಟಿ ರೂ.ಗಳನ್ನು ಘೋಷಿಸಿದ್ದು, ಆ ಸಾಲಿನಲ್ಲಿಯೇ ಅನುಮೋದನೆಯಾಗಿದ್ದು, ಹಣ ಬಿಡುಗಡೆ ಪ್ರಕ್ರಿಯೆಯೂ ಪ್ರಾರಂಭವಾಗಿದ್ದರೂ ಸಹ ಇದೂವರೆಗೂ ಯಾವುದೇ ಕ್ರಮ ಕೈಗೊಳ್ಳದಿರಲು ಕಾರಣವೇನು? | 2018–19ನೇ ಸಾಲಿನ ಆಯವ್ಯಯ ಘೋಷಣೆಯನ್ವಯ ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ (MIMS) ಬೋಧಕ ಆಸ್ಪತ್ರೆಯನ್ನು 550 ರಿಂದ 800 ಹಾಸಿಗೆಯ ಸಾಮರ್ಥ್ಯಕ್ಕೆ ಮೇಲ್ದರ್ಜೆಗೇರಿಸುವ ಸಂಬಂಧ ರೂ.20.00 ಕೋಟಿಗಳ ವೆಚ್ಚದಲ್ಲಿ ಸಿವಿಲ್ ಕಾಮಗಾರಿಯನ್ನು ಕೈಗೊಳ್ಳಲು ಹಾಗೂ ರೂ.10.00 ಕೋಟಿಗಳ ವೆಚ್ಚದಲ್ಲಿ ಉಪಕರಣಗಳನ್ನು ಖರೀದಿಸಲು ಸರ್ಕಾರದ ಆದೇಶ ಸಂಖ್ಯೆ:ಆಕುಕ 318 ಎಂಪಿಎಸ್ 2019(1) ದಿನಾಂಕ:28.02.2019 ರಲ್ಲಿ ಅನುಮೋದನೆ ನೀಡಲಾಗಿದ್ದು, ಸಿವಿಲ್ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರದ ಆದೇಶ ಸಂಖ್ಯೆ:ಆಕುಕ 318 ಎಂಪಿಎಸ್ 2019(2) ದಿನಾಂಕ:28.02.2019 ರಂದು ರೂ.10.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. |
| ಆ) | ಕ್ರಮಕೈಗೊಂಡಿದ್ದಲ್ಲಿ ಯಾವ ಹಂತದಲ್ಲಿದೆ? | ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಬೋಧಕ ಆಸ್ಪತ್ರೆಯನ್ನು ಮೇಲ್ದರ್ಜೆಗೇರಿಸುವ ಸಂಬಂಧ ಮಿಮ್ಸ್, ಮಂಡ್ಯ ಸಂಸ್ಥೆಯ ವಿವಿಧ ವಿಭಾಗಗಳ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರುಗಳ ತಂಡವು ಮೈಸೂರು ಮತ್ತು ಬೆಂಗಳೂರಿನಲ್ಲಿರುವ ಟ್ರಾಮಾಕೇರ್ ಸೆಂಟರ್‌ಗಳಿಗೆ ಭೇಟಿ ನೀಡಿ, ಅಲ್ಲಿಯ ಮೂಲಭೂತ ಸೌಕರ್ಯ ಮತ್ತು ವಿವಿಧ ಸೌಲಭ್ಯಗಳ ಬಗ್ಗೆ ಅಧ್ಯಯನ ನಡೆಸಿರುತ್ತಾರೆ.<br>ಮುಖ್ಯ ಅಭಿಯಂತರರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ಇವರಿಂದ ರೂ. 20.00 ಕೋಟಿಗಳ ಮೊತ್ತದ ಅಂದಾಜು ಪಟ್ಟಿಯನ್ನು ಪಡೆಯಲಾಗಿದೆ. ಸದರಿ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿ, ಈ ಮೊತ್ತವನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿದ್ದು, ಆರ್ಥಿಕ ಇಲಾಖೆಯ ಸಹಮತಿಯನ್ನು ನಿರೀಕ್ಷಿಸಲಾಗಿದೆ.<br>ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಸೇರಿದ ಜಾಗವನ್ನು ಸ್ಲಂ ನಿವಾಸಿಗಳು ಅತಿಕ್ರಮಣ ಮಾಡಿದ್ದು, ಸದರಿ ನಿವಾಸಿಗಳಿಗೆ ಪರ್ಯಾಯ ವ್ಯವಸ್ಥೆ ಮಾಡಿ, ಅತಿಕ್ರಮಣಗೊಂಡಿರುವ ಜಾಗವನ್ನು ಮಿಮ್ಸ್ ಸಂಸ್ಥೆಗೆ |

| | | |
|---|---|---|
| | | ಹಸ್ತಾಂತರಿಸಬೇಕೆಂದು ಕೋರಿ ಶ್ರೀ ಜಿ.ಟಿ. ರವೀಂದ್ರಕುಮಾರ್ ಇವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟಿಷನ್ ಸಂಖ್ಯೆ:14537/2010ನ್ನು ದಾಖಲಿಸಿರುತ್ತಾರೆ.<br><br>ಈ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ಕಾಲಮಿತಿಯನ್ನು ನಿಗದಿಪಡಿಸಿರುವುದರಿಂದ ಅತಿಕ್ರಮಣಗೊಂಡಿರುವ ಜಾಗವನ್ನು ತೆರವುಗೊಳಿಸಿ ಮಿಮ್ಸ್ ಸಂಸ್ಥೆಗೆ ಹಸ್ತಾಂತರಿಸಲು ಕಾನೂನು ರೀತ್ಯಾ ತುರ್ತು ಕ್ರಮವಹಿಸುವಂತೆ ಹಾಗೂ ಕೈಗೊಂಡ ಕ್ರಮದ ವರದಿಯನ್ನು ಸಲ್ಲಿಸುವಂತೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಮತ್ತು ಕಾರ್ಯನಿರ್ವಾಹಕ ಅಭಿಯಂತರರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರಿಗೆ ಸೂಚಿಸಲಾಗಿರುತ್ತದೆ.<br><br>ಅತಿಕ್ರಮಣಗೊಂಡ ಜಾಗವು ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ವರ್ಗಾವಣೆಗೊಂಡ ನಂತರ ಮಿಮ್ಸ್ ಬೋಧಕ ಆಸ್ಪತ್ರೆಯನ್ನು ಮೇಲ್ದರ್ಜೆಗೇರಿಸುವ ಸಿವಿಲ್ ಕಾಮಗಾರಿಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಇಂಜಿನಿಯರಿಂಗ್ ವಿಭಾಗದ ವತಿಯಿಂದ ಕೈಗೊಳ್ಳಲು ಕ್ರಮವಹಿಸಲಾಗುವುದು ಹಾಗೂ ಪೀಠೋಪಕರಣ / ಉಪಕರಣಗಳ ಖರೀದಿಗೆ ಟೆಂಡರ್ ಪ್ರಕ್ರಿಯೆಯನ್ನು ಪ್ರಾರಂಭಿಸಲಾಗುವುದು. |
| ಇ) | ಈ ಮೇಲ್ಕಂಡ ಕಾರ್ಯವು ಯಾರ ನಿರ್ಲಕ್ಷದಿಂದ ಕಾರ್ಯ ಸಾಧನೆಯಾಗದೇ ಉಳಿದಿದೆ; ನಿರ್ಲಕ್ಷ ಮಾಡಿದ ಅಧಿಕಾರಿಯ ವಿರುದ್ಧ ಸರ್ಕಾರದ ಕ್ರಮವೇನು; | ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ (MIMS) ಬೋಧಕ ಆಸ್ಪತ್ರೆಯನ್ನು 550 ರಿಂದ 800 ಹಾಸಿಗೆಯ ಸಾಮರ್ಥ್ಯಕ್ಕೆ ಮೇಲ್ದರ್ಜೆಗೇರಿಸಲು ಅಗತ್ಯ ತುರ್ತು ಕ್ರಮಗಳನ್ನು ಕೈಗೊಳ್ಳಲಾಗುತ್ತಿದ್ದು, ಈ ಕಾರ್ಯದಲ್ಲಿ ಯಾವುದೇ ಅಧಿಕಾರಿ/ ಸಿಬ್ಬಂದಿಗಳು ನಿರ್ಲಕ್ಷ್ಯವನ್ನು ತೋರಿರುವುದಿಲ್ಲ. |
| ಈ) | ಮೇಲ್ಕಂಡ ವಿಷಯದ ಬಗ್ಗೆ ದಿನ ಪತ್ರಿಕೆಗಳು, ಮಾಧ್ಯಮಗಳು ಸರ್ಕಾರದ ನಿರ್ಲಕ್ಷತೆಯ ಬಗ್ಗೆ ತಿಳಿಸಿದ್ದು, ಸರ್ಕಾರ ಯಾವುದೇ ಕ್ರಮ ಕೈಗೊಳ್ಳದಿರಲು ಕಾರಣವೇನು? | ಉದ್ಭವಿಸುವುದಿಲ್ಲ. |

**ಸಂಖ್ಯೆ: ಎಂಇಡಿ 57 ಎಂಪಿಎಸ್ 2020**

(ಡಾ.ಕೆ.ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 74 ಅಪಸೇ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 18-03-2020

ಇವರಿಂದ

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಭೀಮ ನಾಯ್ಕ ಎಲ್.ಬಿ.ಪಿ. (ಹಗರಿಬೊಮ್ಮನಹಳ್ಳಿ) ರವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ: 2401 ಕ್ಕೆ ಉತ್ತರ ಒದಗಿಸುವ ಬಗ್ಗೆ.

:-:-:

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಭೀಮ ನಾಯ್ಕ ಎಲ್.ಬಿ.ಪಿ. (ಹಗರಿಬೊಮ್ಮನಹಳ್ಳಿ) ರವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ: 2401ಕ್ಕೆ ಸಂಬಂಧಿಸಿದ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ನಿಮ್ಮ ನಂಬುಗೆಯ,

(ಪಿ.ವಿ. ಶ್ರೀನಿವಾಸನ್)
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ.

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2401 |
| ಸದಸ್ಯರ ಹೆಸರು | : | ಶ್ರೀ ಭೀಮಾ ನಾಯ್ಕ ಎಲ್.ಬಿ.ಪಿ. (ಹಗರಿಬೊಮ್ಮನಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | : | 19.03.2020 |
| ಉತ್ತರಿಸುವವರು | : | ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು |

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಈಗಾಗಲೇ ಬೇರೆ ಬೇರೆ ಇಲಾಖೆಗಳ ನೇಮಕಾತಿ ಪ್ರಕ್ರಿಯೆಯಲ್ಲಿ ಆಯಾ ಇಲಾಖೆಗಳಿಗೆ ಸಂಬಂಧಿಸಿದಂತೆ ಪದವಿಯನ್ನೇ ಕನಿಷ್ಠ ವಿದ್ಯಾರ್ಹತೆ ಕಡ್ಡಾಯಗೊಳಿಸಿದ್ದು, ಅದೇ ರೀತಿ ಅರಣ್ಯ ಇಲಾಖೆಯಲ್ಲಿ ಅರಣ್ಯ ಶಾಸ್ತ್ರ ಪದವಿಯನ್ನೇ ಕನಿಷ್ಠ ವಿದ್ಯಾರ್ಹತೆ ಕಡ್ಡಾಯಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ |
| ಆ) | ಇದ್ದಲ್ಲಿ ಯಾವಾಗ ಜಾರಿಗೊಳಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ಪ್ರಶ್ನೆ ಉದ್ಭವಿಸುವುದಿಲ್ಲ. |

**ಕಡತ ಸಂಖ್ಯೆ: ಅಪಜೀ 74 ಅಪಸೇ 2020**

18/03/2020

(ಆನಂದ್ ಸಿಂಗ್)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

121

**ಕರ್ನಾಟಕ ಸರ್ಕಾರ**

**ಸಂಖ್ಯೆ:ಇಡಿ** **2020**

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 19/03/2020

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು
ಕರ್ನಾಟಕ ವಿಧಾನ ಸಭೆ / ಪರಿಷತ್ತ್,
ವಿಧಾನಸೌಧ,
ಬೆಂಗಳೂರು.

121
Q/S
19/3/2020

**ಮಾನ್ಯರೇ,**

**ವಿಷಯ:** ಮಾನ್ಯ ಕರ್ನಾಟಕ ಕರ್ನಾಟಕ ವಿಧಾನ ಸಭೆ / ~~ಪರಿಷತ್ತ್~~
ಇವರು ಪ್ರಸ್ತಾಪಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2399 ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಕಳುಹಿಸಿಕೊಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಕರ್ನಾಟಕ ಕರ್ನಾಟಕ ವಿಧಾನ ಸಭೆ / ~~ಪರಿಷತ್ತ್~~, ______ ಇವರು ಪ್ರಸ್ತಾಪಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2399 ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

19/3/2020

**(ಆರ್. ಉಮಾದೇವಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ(ಸಾಮಾನ್ಯ)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2399 |
| ಸದಸ್ಯರ ಹೆಸರು | : | ಶ್ರೀ ನಿರಂಜನ್ ಕುಮಾರ್ ಸಿ.ಎಸ್.(ಗುಂಡ್ಲುಪೇಟೆ) |
| ಉತ್ತರಿಸಬೇಕಾದ ದಿನಾಂಕ | : | 19/03/2020 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು. |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವೃತ್ತಿ ಶಿಕ್ಷಣ ಇಲಾಖೆಯನ್ನು (ಜೆ.ಓ.ಸಿ) ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಯಾವಾಗ ವಿಲೀನಗೊಳಿಸಲಾಗಿದೆ; | ವೃತ್ತಿ ಶಿಕ್ಷಣ ಇಲಾಖೆಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಗೆ ವಿಲೀನಗೊಳಿಸಿರುವುದಿಲ್ಲ. |
| ಆ) | ವಿಲೀನಗೊಳಿಸಿದ್ದರೆ,ಕಾರ್ಯನಿರ್ವಹಿಸುತ್ತಿದ್ದ ಸರ್ಕಾರದ ಹಾಗೂ ಅನುದಾನಿತ ಕಾಲೇಜು ಉಪನ್ಯಾಸಕರುಗಳಿಗೆ ಯಾವ ಮಾನದಂಡಗಳ ಆಧಾರದ ಮೇಲೆ ಉಪನ್ಯಾಸಕರ ಹುದ್ದೆ ನೀಡಿ ಸ್ಥಳನಿಯುಕ್ತಿಗೊಳಿಸಿ ಆದೇಶ ಹೊರಡಿಸಲಾಗಿದೆ;(ಆದೇಶ ಪ್ರತಿ ಒದಗಿಸುವುದು) | ವೃತ್ತಿ ಶಿಕ್ಷಣ ಇಲಾಖೆಯಲ್ಲಿ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಕೆಲವರನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಉಪನ್ಯಾಸಕರನ್ನಾಗಿ ವಿಲೀನಗೊಳಿಸಲಾಗಿದೆ. ಸ್ನಾತಕ್ಕೋತ್ತರ ಪದವಿಯಲ್ಲಿ ಕನಿಷ್ಠ ಶೇ:50ರಷ್ಟು ಅಂಕಗಳನ್ನು ಪಡೆದಿರಬೇಕು ಮತ್ತು ಬಿ.ಎಡ್ ಶಿಕ್ಷಣ ಪಡೆಯದವರು, ಮುಂದಿನ ಎರಡು ವರ್ಷಗಳಲ್ಲಿ ಬಿ.ಎಡ್ ಶಿಕ್ಷಣವನ್ನು ಸ್ವಂತ ಖರ್ಚಿನಲ್ಲಿ ಪಡಯಬೇಕು ಎಂಬ ಷರತ್ತು ವಿಧಿಸಲಾಗಿತ್ತು. |
| ಇ) | ವಿಲೀನಗೊಂಡ ವೃತ್ತಿ ಶಿಕ್ಷಣ ಇಲಾಖೆಯ ಎಷ್ಟು (ಜೆ.ಓ.ಸಿ) ಉಪನ್ಯಾಸಕರುಗಳಿಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ ಮತ್ತು ಬಾಕಿ ಉಳಿದಿರುವ ಉಪನ್ಯಾಸಕರುಗಳ ಸಂಖ್ಯೆ ಎಷ್ಟು; | ವೃತ್ತಿ ಶಿಕ್ಷಣ ಇಲಾಖೆಯಿಂದ ಪದವಿ ಪೂರ್ವ ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಪೂರ್ವ ಕಾಲೇಜು ಗಳಿಗೆ 141 ಮತ್ತು ಅನುದಾನಿತ ಪದವಿ ಪೂರ್ವ ಕಾಲೇಜುಗಳಿಗೆ 133 ಉಪನ್ಯಾಸಕರನ್ನು(ಒಟ್ಟು274) ಉಪನ್ಯಾಸಕರನ್ನು) ಸ್ಥಳನಿಯುಕ್ತಿಗೊಳಿಸಲಾಗಿದೆ. ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿ 12 ಉಪನ್ಯಾಸಕರನ್ನು ಸ್ಥಳ ನಿಯುಕ್ತಿಗೊಳಿಸಲು ಬಾಕಿ ಇರುತ್ತದೆ. |
| ಈ) | ಬಾಕಿ ಉಳಿದಿರುವ ಜೆ.ಓ.ಸಿ ಉಪನ್ಯಾಸಕರುಗಳ ಸಂಖ್ಯೆ ಎಷ್ಟು; ಈ ಉಪನ್ಯಾಸಕರುಗಳಿಗೆ ಉಪನ್ಯಾಸಕರ ಹುದ್ದೆ ನೀಡುವ ಬಗ್ಗೆ ಸರ್ಕಾರದ ನಿಲುವೇನು; | ಖಾಸಗಿ ಅನುದಾನಿತ ಪದವಿಪೂರ್ವ ಕಾಲೇಜುಗಳಲ್ಲಿ 12 ಉಪನ್ಯಾಸಕರನ್ನು ವಿಲೀನಗೊಳಿಸಲು ಬಾಕಿ ಇರುತ್ತದೆ. ಇವರ ಸೇವೆಯನ್ನು ವಿಲೀನಗೊಳಿಸುವ ಮುಂಚೆ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತಂದು ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪನ್ಯಾಸಕರುಗಳಿಗೆ ಡಿ.ಎಡ್ ಉತ್ತೀರ್ಣರಾಗಿರಬೇಕೆಂದು ಕಡ್ಡಾಯಗೊಳಿಸಲಾಗಿದೆ. |

| | | |
|---|---|---|
| ಉ). | ನಿವೃತ್ತಿ ಅಂಚಿನಲ್ಲಿರುವ 12 ಜನ ಜೆ.ಓ.ಸಿ ಉಪನ್ಯಾಸಕರುಗಳಿಗೆ ಆರ್ಥಿಕ ಇಲಾಖೆಯಿಂದ ಅನುಮೋದನೆಗೊಂಡು ಸ್ಥಳ ನಿಯುಕ್ತಿಗೊಳಿಸಿದ್ದರೂ ಸಹ ಕಳೆದ ನಾಲ್ಕು ವರ್ಷಗಳಿಂದ ಉಪನ್ಯಾಸಕರ ಹುದ್ದೆಗೆ ಆದೇಶ ನೀಡದೇ ತಡೆ ಹಿಡಿದಿರಲು ಕಾರಣವೇನು; | ಪದವಿ ಪೂರ್ವ ಶಿಕ್ಷಣ ಇಲಾಖೆಯ ಈಗಿನ ನಿಯಮಗಳ ಪ್ರಕಾರ ಸ್ನಾತಕೋತ್ತರ ಪದವಿಯಲ್ಲಿ ಕನಿಷ್ಠ ಶೇ:55ರಷ್ಟು ಅಂಕಗಳನ್ನು ಗಳಿಸಿರ ಬೇಕು ಹಾಗೂ ಬಿ.ಎಡ್ ಶಿಕ್ಷಣವನ್ನು ಕಡ್ಡಾಯವಾಗಿ ಪಡೆದಿರಬೇಕು ಎಂಬ ನಿಯಮಗಳಿರುತ್ತವೆ 12 ಜನ ಜೆ.ಓ.ಸಿ ಉಪನ್ಯಾಸಕರಲ್ಲಿ 10 ಜನ ಶೇ:55ರಷ್ಟು ಅಂಕಗಳಿಸಿರುತ್ತಾರೆ ಹಾಗೂ ಒಬ್ಬರು ಮಾತ್ರ ಬಿ.ಎಡ್ ಶಿಕ್ಷಣ ಪಡೆದಿರುವುದರಿಂದ ಸ್ಥಳ ನಿಯುಕ್ತಿಗೊಳಿಸುವ ಸಂಬಂಧ ಬಿ.ಎಡ್. ವಿನಾಯಿತಿ ನೀಡುವ ಬಗ್ಗೆ ಪರಿಶೀಲಿಸಲಾಗುತ್ತಿದೆ. |
| ಊ) | ಯಾವ ಕಾಲಮಿತಿಯೊಳಗೆ ಸರ್ಕಾರದಿಂದ ಆದೇಶ ನೀಡಲಾಗುವುದು? (ವಿವರಗಳನ್ನು ನೀಡುವುದು) | ಬಿ.ಎಡ್ ವಿನಾಯಿತಿ ನೀಡುವ ಸಂಬಂಧ ಪರಿಶೀಲಿಸಿ ಅಂತಿಮ ತೀರ್ಮಾನ ಕೈಗೊಂಡ ನಂತರ ಕ್ರಮವಹಿಸಲಾಗುವುದು |

ಸಂಖ್ಯೆ : ಇಡಿ 2167 ಇಪಿ 2020

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 27 ಎಚ್‌ಎಸ್‌ಡಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು, ದಿನಾಂಕ:18.03.2020

23

415
19/3/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಶ್ರೀ ಅಶೋಕ್ ನಾಯಕ್ ಕೆ.ಬಿ(ಶಿವಮೊಗ್ಗ ಗ್ರಾಮಾಂತರ), ಮಾನ್ಯ ವಿಧಾನ ಸಭಾ ಸದಸ್ಯರು ಇವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2421ಕ್ಕೆ ಉತ್ತರಿಸುವ ಬಗ್ಗೆ.

-*-*-*-

ಮಾನ್ಯ ಕರ್ನಾಟಕ ವಿಧಾನ ಸಭಾ ಶ್ರೀ ಅಶೋಕ್ ನಾಯಕ್ ಕೆ.ಬಿ(ಶಿವಮೊಗ್ಗ ಗ್ರಾಮಾಂತರ), ಮಾನ್ಯ ವಿಧಾನ ಸಭಾ ಸದಸ್ಯರು ಇವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2421ಕ್ಕೆ ಸಂಬಂಧಿಸಿದ ಉತ್ತರದ 100 ಪ್ರತಿಗಳನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

18/3/2020
(ಯ.ಶಿವಶಂಕರ)
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

ಕರ್ನಾಟಕ ವಿಧಾನಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2421 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ.ಅಶೋಕ್ ನಾಯಕ್ ಕೆ.ಬಿ. (ಶಿವಮೊಗ್ಗ ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | 19-03-2020 |
| ಉತ್ತರಿಸುವ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರದಲ್ಲಿರುವ ಸಮುದಾಯ/ಪ್ರಾಥಮಿಕ ಆರೋಗ್ಯ ಕೇಂದ್ರಗಳೆಷ್ಟು; | ಸಮುದಾಯ ಆರೋಗ್ಯ ಕೇಂದ್ರಗಳು-03<br>ಪ್ರಾಥಮಿಕ ಆರೋಗ್ಯ ಕೇಂದ್ರಗಳು-14 |
| ಆ | ಈ ಆರೋಗ್ಯ ಕೇಂದ್ರಗಳಲ್ಲಿ ಮಂಜೂರಾದ ವೈದ್ಯರು/ತಜ್ಞ ವೈದ್ಯರು /ಟೆಕ್ನಿಷಿಯನ್ ಹುದ್ದೆಗಳು ಮಂಜೂರು, ಭರ್ತಿ ಹಾಗೂ ಖಾಲಿಯಿರುವ ಹುದ್ದೆಗಳೆಷ್ಟು; (ವಿವರ ನೀಡುವುದು) | ವೈದ್ಯರು ಮತ್ತು ತಜ್ಞ ವೈದ್ಯರ ಹುದ್ದೆಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ.<br><br>ಟೆಕ್ನಿಷಿಯನ್ ಹುದ್ದೆಗಳ ವಿವರಗಳನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಇ | ಖಾಲಿಯಿರುವ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು? | 1. ಖಾಲಿ ಇರುವ ತಜ್ಞರು/ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ವಿಶೇಷ ನೇಮಕಾತಿ ಸಮಿತಿ ಮೂಲಕ ಭರ್ತಿ ಮಾಡಲು ಕರಡು ನಿಯಮಗಳನ್ನು ಪ್ರಕಟಿಸಿದ್ದು, ಅಂತಿಮ ನಿಯಮಗಳನ್ನು ಪ್ರಕಟಿಸುವ ಪ್ರಕ್ರಿಯೇ ಚಾಲ್ತಿಯಲ್ಲಿದೆ. ತದನಂತರ ಭರ್ತಿ ಮಾಡಲಾಗುವುದು. |

| | | |
|---|---|---|
| | | 2. ಕ್ಷ-ಕಿರಣ ತಂತ್ರಜ್ಞರು-08 ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರ-150 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿಮಾಡಲು ಕರಡು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸುವ ಪ್ರಕ್ರಿಯೆ ಚಾಲ್ತಿಯಲ್ಲಿದೆ.<br><br>ಇನ್ನುಳಿದಂತೆ ಹೊರಗುತ್ತಿಗೆ ಆಧಾರದ ಮೇಲೆ ಕಿರಿಯ ವೈದ್ಯಕೀಯ ಪ್ರಯೋಗಶಾಲಾ ತಂತ್ರಜ್ಞರು-150 ಹುದ್ದೆಗಳನ್ನು ಭರ್ತಿಮಾಡಲು ಅನುಮತಿ ನೀಡಿದ್ದು, ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಿಯಮಾನುಸಾರ ಟೆಂಡರ್ ಕರೆದು ಕ್ರಮ ಕೈಗೊಳ್ಳಲು ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಿಗೆ ಸೂಚಿಸಲಾಗಿದೆ. |

**ಆಕುಕ 27 ಹೆಚ್‌ಎಸ್‌ಡಿ 2020**

(ಬಿ. ಶ್ರೀರಾಮುಲು)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**

## ಅನುಬಂಧ -1

### ಪ್ರಶ್ನೆ ಸಂಖ್ಯೆ:2421

### ಶಿವಮೊಗ್ಗ ಗ್ರಾಮಾಂತರ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯ ಸಮುದಾಯ/ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿರುವ ತಜ್ಞರು/ವೈದ್ಯರ ಮಂಜೂರು, ಕಾರ್ಯನಿರತ ಮತ್ತು ಖಾಲಿ ಹುದ್ದೆಗಳ ಮಾಹಿತಿ

| ಕ್ರಸ | ಸ.ಆ.ಕೇಂದ್ರ/ಪ್ರಾ.ಆ.ಕೇಂದ್ರ | ಮಂಜೂರು | ಕಾರ್ಯನಿರತ | ಗುತ್ತಿಗೆ | ಖಾಲಿ |
|---|---|---|---|---|---|
| 1 | ಸ.ಆ.ಕೇಂದ್ರ ಆಯನೂರು | 5 | 3 | 1 | 1 |
| 2 | ಸ.ಆ.ಕೇಂದ್ರ ಹೊಳಲೂರು | 5 | 3 | 1 | 1 |
| 3 | ಸ.ಆ.ಕೇಂದ್ರ ಹೊಳೆಹೊನ್ನೂರು | 5 | 5 | 0 | 0 |
| | **ಒಟ್ಟು** | **15** | **11** | **2** | **2** |
| 1 | ಪ್ರಾ.ಆ.ಕೇಂದ್ರ ಹಾರನಹಳ್ಳಿ | 2 | 1 | 1 | 0 |
| 2 | ಪ್ರಾ.ಆ.ಕೇಂದ್ರ ಕುಂಸಿ | 1 | 1 | 0 | 0 |
| 3 | ಪ್ರಾ.ಆ.ಕೇಂದ್ರ ಅರೆಬಿಳಚಿ | 2 | 1 | 1 | 0 |
| 4 | ಪ್ರಾ.ಆ.ಕೇಂದ್ರ ಅಗರದಹಳ್ಳಿ | 1 | 1 | 0 | 0 |
| 5 | ಪ್ರಾ.ಆ.ಕೇಂದ್ರ ಹರಮಘಟ್ಟ | 1 | 1 | 0 | 0 |
| 6 | ಪ್ರಾ.ಆ.ಕೇಂದ್ರ ಗೊಂದಿಚಟ್ನಹಳ್ಳಿ | 1 | 1 | 0 | 0 |
| 7 | ಪ್ರಾ.ಆ.ಕೇಂದ್ರ ಮಂಡಗಟ್ಟ | 1 | 1 | 0 | 0 |
| 8 | ಪ್ರಾ.ಆ.ಕೇಂದ್ರ ಆಲದಹಳ್ಳಿ | 1 | 1 | 0 | 0 |
| 9 | ಪ್ರಾ.ಆ.ಕೇಂದ್ರ ಚೋರಡಿ | 1 | 1 | 0 | 0 |
| 10 | ಪ್ರಾ.ಆ.ಕೇಂದ್ರ ಯಡೇಹಳ್ಳಿ | 1 | 0 | 1 | 0 |
| 11 | ಪ್ರಾ.ಆ.ಕೇಂದ್ರ ದೊಣಬಘಟ್ಟ | 1 | 1 | 0 | 0 |
| 12 | ಪ್ರಾ.ಆ.ಕೇಂದ್ರ ಎಸ್.ಕೆ ಮಗ್ಗೆ | 1 | 1 | 0 | 0 |
| 13 | ಪ್ರಾ.ಆ.ಕೇಂದ್ರ ಮಾರಿಶೆಟ್ಟಿಹಳ್ಳಿ | 1 | 1 | 0 | 0 |
| 14 | ಪ್ರಾ.ಆ.ಕೇಂದ್ರ ಮೈದೊಳಲು | 1 | 1 | 0 | 0 |
| | **ಒಟ್ಟು** | **16** | **13** | **3** | **0** |

ಅನುಬಂಧ-2

ಶಿವಮೊಗ್ಗ ಗ್ರಾಮಾಂತರ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯ ಆರೋಗ್ಯ ಸಂಸ್ಥೆಗಳಲ್ಲಿನ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞರ ಹುದ್ದೆಯ ವಿವರ

| ಕ್ರ.ಸ | ಜಿಲ್ಲೆ | ವಿಧಾನ ಸಭಾ ಕ್ಷೇತ್ರ | ಆರೋಗ್ಯ ಸಂಸ್ಥೆಗಳು | ಮಂಜೂರು | ಭರ್ತಿ | ಖಾಲಿ | ಗುತ್ತಿಗೆ ಆಧಾರ |
|---|---|---|---|---|---|---|---|
| 1 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸ.ಆ.ಕೇಂದ್ರ, ಹೊಳೆಹೊನ್ನೂರು | 1 | 1 | 0 | |
| 2 | | | ಪ್ರಾ.ಆ.ಕೇಂದ್ರ, ಹಾರನಹಳ್ಳಿ | 1 | 1 | 0 | |
| 3 | | | ಪ್ರಾ.ಆ.ಕೇಂದ್ರ, ಕುಂಸಿ | 1 | 1 | 0 | |
| 4 | | | ಪ್ರಾ.ಆ.ಕೇಂದ್ರ, ಅರೆಬಿಳಚಿ | 1 | 1 | 0 | |
| 5 | | | ಪ್ರಾ.ಆ.ಕೇಂದ್ರ, ಅಗರದಹಳ್ಳಿ | 1 | 1 | 0 | |
| 6 | | | ಪ್ರಾ.ಆ.ಕೇಂದ್ರ, ಹರಮಗಟ್ಟ | 1 | 1 | 0 | |
| 7 | | | ಪ್ರಾ.ಆ.ಕೇಂದ್ರ, ಗೊಂದಿಚಟ್ನಹಳ್ಳಿ | 1 | 1 | 0 | |
| 8 | | | ಪ್ರಾ.ಆ.ಕೇಂದ್ರ, ಮಂಡಗಟ್ಟ | 0 | 0 | 0 | |
| 9 | | | ಪ್ರಾ.ಆ.ಕೇಂದ್ರ, ಆಲದಹಳ್ಳಿ | 0 | 0 | 0 | |
| 10 | | | ಪ್ರಾ.ಆ.ಕೇಂದ್ರ, ಚೋರಡಿ | 0 | 0 | 0 | |
| 11 | | | ಪ್ರಾ.ಆ.ಕೇಂದ್ರ, ಯಡೇಹಳ್ಳಿ | 0 | 0 | 0 | |
| 12 | | | ಪ್ರಾ.ಆ.ಕೇಂದ್ರ, ದೊಣಬಗಟ್ಟ | 1 | 1 | 0 | |
| 13 | | | ಪ್ರಾ.ಆ.ಕೇಂದ್ರ, ಎಸ್.ಕೆ.ಮಗ್ಗೆ | 1 | 1 | 0 | |
| 14 | | | ಪ್ರಾ.ಆ.ಕೇಂದ್ರ, ಮಾರಿಶೆಟ್ಟಿಹಳ್ಳಿ | 0 | 0 | 0 | |
| 15 | | | ಪ್ರಾ.ಆ.ಕೇಂದ್ರ, ಮೈದೊಳಲು | 1 | 1 | 0 | |
| 16 | | | ಸ.ಆ.ಕೇಂದ್ರ, ಆಯನೂರು | 1 | 1 | 0 | |
| 17 | | | ಸ.ಆ.ಕೇಂದ್ರ, ಹೊಳಲೂರು | 2 | 2 | 0 | |
| | | | ಒಟ್ಟು | 13 | 13 | 0 | |

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 044 ಟಿಪಿಇ 2020.

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, 2ನೇ ಗೇಟ್, 6ನೇ ಮಹಡಿ,
ಬೆಂಗಳೂರು, ದಿನಾಂಕ:19-03-2020

(142) u/s 19/3/2020

ಇವರಿಗೆ:-

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ- ಮಾನ್ಯ ವಿಧಾನಸಭೆ ಸದಸ್ಯರಾದ **ಶ್ರೀ ರಾಮದಾಸ್ ಎಸ್.ಎ (ಕೃಷ್ಣರಾಜ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1805ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ: ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1805/2020, ದಿನಾಂಕ:05-03-2020.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ **ಶ್ರೀ ರಾಮದಾಸ್ ಎಸ್.ಎ (ಕೃಷ್ಣರಾಜ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1805ಕ್ಕೆ ಸಂಬಂಧಿಸಿದ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

19/03/2020
(ಎಂ.ಜಿ.ವೆಂಕಟೇಶಯ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1805 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ರಾಮದಾಸ್ ಎಸ್.ಎ (ಕೃಷ್ಣರಾಜ) |
| ಉತ್ತರಿಸುವ ದಿನಾಂಕ | : | 19-03-2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ) |

| | ಪ್ರಶ್ನೆ | ಉತ್ತರ |
|---|---|---|
| ಅ) | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವಂತಹ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರಿಗೆ ಎ.ಐ.ಸಿ.ಟಿ.ಇ ವೇತನವನ್ನು ನೀಡಲಾಗುತ್ತಿದೆಯೇ; | ಹೌದು |
| ಆ) | ಸರ್ಕಾರಿ ಆದೇಶ ಸಂಖ್ಯೆ: ಇಡಿ/79/ಡಿಟಿಇ/91, ದಿನಾಂಕ:18-07-1994ರಲ್ಲಿ ತಿಳಿಸಿರುವಂತೆ ಎ.ಐ.ಸಿ.ಟಿ.ಇ ವೇತನವನ್ನು ಅಧ್ಯಾಪಕರುಗಳಿಗೆ ವಿಸ್ತರಿಸುವಾಗ ವಿದ್ಯಾರ್ಹತೆಗೆ ಸಂಬಂಧಿಸಿದಂತೆ ಪಾಲಿಸಬೇಕಾದ ಮಾನದಂಡವೇನು; | ➢ ಸರ್ಕಾರದ ಆದೇಶ ಸಂಖ್ಯೆ: ಇಡಿ 79 ಡಿಟಿಇ 91, ದಿನಾಂಕ: 18.07.1994 ರಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಹಾಗೂ ಅನುದಾನಿತ ಪಾಲಿಟೆಕ್ನಿಕ್‌ಗಳಲ್ಲಿನ ಇಂಜಿನಿಯರಿಂಗ್, ಮಾನವಶಾಸ್ತ್ರ ಮತ್ತು ವಿಜ್ಞಾನ ವಿಷಯಗಳ ಅಧ್ಯಾಪಕರುಗಳಿಗೆ 1986ರ ಪರಿಷ್ಕೃತ ಎಐಸಿಟಿಇ ವೇತನ ಶ್ರೇಣಿಯನ್ನು ದಿನಾಂಕ: 01.04.1993 ರಿಂದ ಜಾರಿಗೆ ಬರುವಂತೆ ವಿಸ್ತರಿಸಲಾಗಿದೆ.<br>➢ ದಿನಾಂಕ: 18.07.1994 ರ ಸರ್ಕಾರದ ಆದೇಶದ ಕಂಡಿಕೆ(4) ರಲ್ಲಿ ಎಐಸಿಇಟಿ ವೇತನ ಶ್ರೇಣಿಗಳನ್ನು ಎಐಸಿಟಿಇ ಯೋಜನೆಯಲ್ಲಿ ಒಳಗೊಳ್ಳುವ ಇಂಜಿನಿಯರಿಂಗ್, ಮಾನವಶಾಸ್ತ್ರ ಹಾಗೂ ವಿಜ್ಞಾನ ವಿಷಯಗಳಲ್ಲಿ ಅಧ್ಯಾಪಕರಾಗಿರುವ ಮತ್ತು 1987 ರ ರಾಜ್ಯ ವೇತನ ಶ್ರೇಣಿಯನ್ನು ಪಡೆಯುತ್ತಿರುವ ಉಪನ್ಯಾಸಕರು, ವಿಭಾಗಾಧಿಕಾರಿಗಳು, ಪ್ರಾಂಶುಪಾಲರುಗಳು ಮತ್ತು ಹಿರಿಯ ಪ್ರಾಂಶುಪಾಲರುಗಳಿಗೆ ವಿಸ್ತರಿಸಲು ತಿಳಿಸಲಾಗಿದೆ. ಅಲ್ಲದೆ, ಇಂಜಿನಿಯರಿಂಗ್ ವಿಷಯಗಳಲ್ಲಿನ ಅಧ್ಯಾಪಕರುಗಳು |

ಇಂಜಿನಿಯರಿಂಗ್ ಸಮುಚಿತ ವಿಷಯದಲ್ಲಿ ಕನಿಷ್ಠ 2ನೇ ದರ್ಜೆಯಲ್ಲಿ ಸ್ನಾತಕ ಪದವಿಯನ್ನು ಮತ್ತು ಮಾನವಶಾಸ್ತ್ರ ಹಾಗೂ ವಿಜ್ಞಾನ ವಿಷಯಗಳಲ್ಲಿನ ಅಧ್ಯಾಪಕರುಗಳು ಸಮುಚಿತ ವಿಷಯದಲ್ಲಿ ಕನಿಷ್ಠ 2ನೇ ದರ್ಜೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಹೊಂದಿರತಕ್ಕದ್ದು. ತದನಂತರದಲ್ಲಿನ ನೇರ ನೇಮಕಾತಿಯ ಅಭ್ಯರ್ಥಿಗಳು ಎಐಸಿಟಿಇ ನಿಗಧಿಪಡಿಸುವ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು.

- ದಿನಾಂಕ: 18.07.1994ರ ಸರ್ಕಾರದ ಆದೇಶದ ಕಂಡಿಕೆ(6) ರಲ್ಲಿ ಹೊಸದಾಗಿ ಸೇವೆಗೆ ಸೇರುವವರಿಗೆ ಸಂಬಂಧಿಸಿದ ನೇಮಕಾತಿ ಮತ್ತು ಅರ್ಹತೆಯನ್ನು ಕೆಳಕಂಡಂತೆ ನಿಗದಿಪಡಿಸಲಾಗಿದೆ.

| ಪದನಾಮ | ಅರ್ಹತೆ ಮತ್ತು ಅನುಭವ |
|---|---|
| ಉಪನ್ಯಾಸಕರು | 1) ಇಂಜಿನಿಯರಿಂಗ್ ತಂತ್ರಜ್ಞಾನದ ಸಂಬಂಧಪಟ್ಟ ವಿಷಯದಲ್ಲಿ 1ನೇ ದರ್ಜೆಯಲ್ಲಿ ಸ್ನಾತಕ ಪದವಿ<br>ಅಥವಾ<br>ಮಾನವಶಾಸ್ತ್ರ ಮತ್ತು ವಿಜ್ಞಾನ ವಿಷಯದಲ್ಲಿ ಬೋಧನಾ ಹುದ್ದೆಗಳಿಗೆ ಸಂಬಂಧಪಟ್ಟ ಅಧ್ಯಯನ ವಿಷಯದಲ್ಲಿ 1ನೇ ದರ್ಜೆಯಲ್ಲಿ ಎಂ.ಎಸ್ಸಿ.,<br>2) ಅಖಿಲ ಭಾರತ ಪರೀಕ್ಷೆಗಳಲ್ಲಿ (ಜಿಎಟಿಇ ಅಥವಾ ತತ್ಸಮಾನ ಪರೀಕ್ಷೆಗಳು) ಅರ್ಹತೆ ಪಡೆದಿರಬೇಕು.<br>3) ನಿರ್ದಿಷ್ಟಪಡಿಸಿದ ಆಯ್ಕೆ ವಿಧಾನದ ಮೂಲಕ ಆಯ್ಕೆಯಾಗಿರಬೇಕು. |

- ಸರ್ಕಾರದ ಆದೇಶ ಸಂಖ್ಯೆ: ಇಡಿ 25 ಡಿಟಿಇ 2002, ದಿನಾಂಕ: 29.11.2002 ರಲ್ಲಿ ದಿನಾಂಕ: 01.04.1993 ರಿಂದ

ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ 1986ರ ಎಐಸಿಟಿಇ ಸ್ಕೀಮ್ ವ್ಯಾಪ್ತಿಯಲ್ಲಿ ಬರುವ ತಾಂತ್ರಿಕ ವಿಷಯಗಳಲ್ಲಿ ನೇಮಕ ಹೊಂದಿ 01.04.1993 ರಂದು ಸೇವೆಯಲ್ಲಿದ್ದ ಡಿಪ್ಲೋಮಾ ವಿದ್ಯಾರ್ಹತೆ ಪಡೆದಿರುವ ಸರ್ಕಾರಿ ಮತ್ತು ಅನುದಾನಿತ ಪಾಲಿಟೆಕ್ನಿಕ್‌ಗಳ ಉಪನ್ಯಾಸಕರುಗಳಿಗೆ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

- ಎ.ಐ.ಸಿ.ಟಿ.ಇ. ಸಂಖ್ಯೆ: F.No. FD/PSSC/Clarif./2003/1, ದಿನಾಂಕ: 10.9.2003 ರಂದು ಪದವಿ / ಡಿಪ್ಲೋಮಾ ಸಂಸ್ಥೆಗಳಲ್ಲಿನ ಶಿಕ್ಷಕರಿಗೆ ವೇತನ ಶ್ರೇಣಿ ಮತ್ತು ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ಕೆಳಕಂಡಂತೆ ಸ್ಪಷ್ಟೀಕರಣ ನೀಡಲಾಗಿರುತ್ತದೆ.

| **Item No. 10: Anomaly in AICTE recommended pay scaled for teachers of diploma level technical institution (polytechnics)** |
| --- |
| **Decision taken:**<br>The committee had discussed the issue at length and it was decided that the teachers who have been recruited prior to 1.1.1996, should be governed by the existing Recruitment Rules(RR's). So, the committee recommends relaxation of qualification for such teachers to consider them for CAS in the grade of Lecturer (i.e. from Lecturer to senior grade & from senior grade to selection grade) and also for those who were promoted before the implementation of revised AICTE pay scale & service conditions. (For the date of AICTE notification to the date of implementation of the same by the concerned State Govt. / Union Territory). |

- ಸರ್ಕಾರದ ಆದೇಶ ಸಂಖ್ಯೆ: ಇಡಿ 39 ಡಿಟಿಇ 2004, ದಿನಾಂಕ: 18.05.2005 ರಲ್ಲಿ ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ತಾಂತ್ರಿಕ ವಿಷಯಗಳಲ್ಲಿ ಸ್ನಾತಕ ಪದವಿಯನ್ನು ಪಾಸ್ ದರ್ಜೆಯಲ್ಲಿ ಹಾಗೂ ಮಾನವಶಾಸ್ತ್ರ ಮತ್ತು ವಿಜ್ಞಾನ ವಿಷಯಗಳಲ್ಲಿ ಸ್ನಾತಕೋತ್ತರ ಪದವಿಗಳಲ್ಲಿ ಪಾಸ್ ದರ್ಜೆಯಲ್ಲಿ ಉತ್ತೀರ್ಣರಾಗಿರುವ ಹಾಗೂ ದಿನಾಂಕ: 01.04.1993 ಕ್ಕಿಂತ

| | | |
|---|---|---|
| | | ಮುಂಚಿತವಾಗಿ ನೇಮಕಾತಿ ಹೊಂದಿರುವ ಉಪನ್ಯಾಸಕರುಗಳಿಗೆ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯನ್ನು ವಿಸ್ತರಿಸಲು ಅವಕಾಶ ಕಲ್ಪಿಸಲಾಗಿದೆ. |
| ಇ) | ಪ್ರಸ್ತುತ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರಿಗೆ ಮೇಲಿನ ಕ್ರಮ ಸಂಖ್ಯೆ (2)ರಲ್ಲಿ ತಿಳಿಸಿರುವಂತಹ ಆದೇಶದ ಪ್ರಕಾರ ವಿದ್ಯಾರ್ಹತೆ ಪಡೆಯಲಾಗಿದೆಯೇ; ಸದರಿ ಅಧಿಕಾರಿಯವರು ನಿಗಧಿಪಡಿಸಿರುವ ವಿದ್ಯಾರ್ಹತೆ ಪಡೆಯದಿದ್ದಲ್ಲಿ ಇವರಿಗೆ ಎ.ಐ.ಸಿ.ಟಿ.ಇ ವೇತನ ಶ್ರೇಣಿಯನ್ನು ವಿಸ್ತರಿಸಲು ಕರ್ನಾಟಕ ರಾಜ್ಯ ಸರ್ಕಾರದ ಆರ್ಥಿಕ ಇಲಾಖೆಯಿಂದ ಅನುಮೋದನೆ ಪಡೆದಿದೆಯೇ; (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಇಡಿ 79 ಡಿಟಿಇ 91, ದಿನಾಂಕ: 18.07.1994 ರ ಕಂಡಿಕೆ(4) ರಲ್ಲಿ ತಿಳಿಸಿರುವಂತೆ ಪ್ರಸ್ತುತ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು ವಿದ್ಯಾರ್ಹತೆಯನ್ನು ಹೊಂದಿರುತ್ತಾರೆ. ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿ ಚಾಲ್ತಿಯಲ್ಲಿರುವ 2006ರ ವೃಂದ ಮತ್ತು ನೇಮಕಾತಿ ನಿಯಮಾವಳಿಗಳ ಅನ್ವಯ ನಿರ್ದೇಶಕರ ಹುದ್ದೆಯು "Scale Less Post" ಆಗಿದ್ದು, ನಿರ್ದೇಶಕರು ತಮ್ಮ ಸ್ವಂತ ಎಐಸಿಟಿಇ ವೇತನ ಶ್ರೇಣಿ ಮತ್ತು ದರ್ಜೆಯಲ್ಲಿ ಮುಂದುವರೆಯುತ್ತಾರೆ. |
| ಈ) | ಎ.ಐ.ಸಿ.ಟಿ.ಇ ಐದನೇ ವೇತನ ಶ್ರೇಣಿಯ ಪ್ರಕಾರ ಸರ್ಕಾರಿ ಹಾಗೂ ಅನುದಾನಿತ ಪಾಲಿಟೆಕ್ನಿಕ್‌ಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಓರ್ವ ಉಪನ್ಯಾಸಕನಿಗೆ ಹಿರಿಯ ಉಪನ್ಯಾಸಕರ ಹುದ್ದೆಯಿಂದ ಕೇರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್‌ನಡಿಯಲ್ಲಿ ಆಯ್ಕೆ ಶ್ರೇಣಿ ಉಪನ್ಯಾಸಕರಾಗಿ ಮುಂಬಡ್ತಿ ನೀಡಲು ನಿಗದಿಪಡಿಸಿರುವಂತಹ ಮಾನದಂಡಗಳೇನು; | ಸರ್ಕಾರದ ಆದೇಶ ಸಂಖ್ಯೆ: ಇಡಿ 15 ಡಿಟಿಇ 2000, ದಿನಾಂಕ: 28.07.2000 ರಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಮತ್ತು ಅನುದಾನಿತ ಪಾಲಿಟೆಕ್ನಿಕ್‌ನ ಬೋಧಕ ಸಿಬ್ಬಂದಿಗಳಿಗೆ ಎಐಸಿಟಿಇ 5ನೇ ವೇತನ ಶ್ರೇಣಿಯನ್ನು ಪರಿಷ್ಕರಿಸಲಾಗಿದೆ. ಸದರಿ ಆದೇಶದ ಕಂಡಿಕೆ(14) ರಲ್ಲಿ ಸರ್ಕಾರಿ ಹಾಗೂ ಅನುದಾನಿತ ಪಾಲಿಟೆಕ್ನಿಕ್‌ಗಳಲ್ಲಿನ ಉಪನ್ಯಾಸಕರಿಗೆ ಕೇರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್‌ನಡಿಯಲ್ಲಿ ಹಿರಿಯ ಉಪನ್ಯಾಸಕರ ಹುದ್ದೆಯಿಂದ ಆಯ್ಕೆ ಶ್ರೇಣಿ ಉಪನ್ಯಾಸಕರಾಗಿ ಮುಂಬಡ್ತಿ ನೀಡಲು ಕೆಳಕಂಡಂತೆ ಮಾನದಂಡ ನಿಗಧಿಪಡಿಸಲಾಗಿದೆ.<br><br>"A lecturer (Senior scale) with 5 years experience as lecturer (senior Scale) and who has consistently satisfactory performance appraisal reports will be eligible to be placed as lecturer (selection grade) subject to the recommendation of the selection Grade". |

<table>
<tr>
<td>ಊ)</td>
<td>ತಾಂತ್ರಿಕ ಶಿಕ್ಷಣ ಇಲಾಖೆಯಡಿಯ ಅಧೀನದಲ್ಲಿ ಬರುವಂತಹ ಸರ್ಕಾರಿ / ಅನುದಾನಿತ ಪಾಲಿಟೆಕ್ನಿಕ್‌ಗಳಲ್ಲಿ ಮೇಲಿನ ಕ್ರಮ ಸಂಖ್ಯೆ (4)ರಲ್ಲಿ ತಿಳಿಸಿರುವಂತಹ ಮಾನದಂಡಗಳನ್ನು ಅನುಸರಿಸಿ ಅಥವಾ ಅನುಸರಿಸದೇ ಎಷ್ಟು ಅಧ್ಯಾಪಕರುಗಳಿಗೆ ಮುಂಬಡ್ತಿ ನೀಡಲಾಗಿದೆ (ವಿವರ ನೀಡುವುದು)</td>
<td>ಸರ್ಕಾರದ ಆದೇಶ ಸಂಖ್ಯೆ: ಇಡಿ 15 ಡಿಟಿಇ 2000, ದಿನಾಂಕ: 28.07.2000 ರಲ್ಲಿ ನೀಡಿರುವ ಮಾನದಂಡವನ್ನು ಅನುಸರಿಸಿ ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಮತ್ತು ಅನುದಾನಿತ ಪಾಲಿಟೆಕ್ನಿಕ್‌ನ ಬೋಧಕ ಸಿಬ್ಬಂದಿಗಳಿಗೆ ಎಐಸಿಟಿಇ 5ನೇ ವೇತನ ಶ್ರೇಣಿಯನ್ವಯ ಕೇರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್‌ನಡಿಯಲ್ಲಿ ಹಿರಿಯ ಶ್ರೇಣಿ ಉಪನ್ಯಾಸಕರಿಂದ ಆಯ್ಕೆ ಶ್ರೇಣಿ ಉಪನ್ಯಾಸಕರಾಗಿ ಮುಂಬಡ್ತಿ ನೀಡಿರುವ ಸಂಖ್ಯಾ ಮಾಹಿತಿ ಕೆಳಕಂಡಂತಿವೆ.
<table>
<tr><td>ಸರ್ಕಾರಿ ಪಾಲಿಟೆಕ್ನಿಕ್</td><td>633</td></tr>
<tr><td>ಅನುದಾನಿತ ಪಾಲಿಟೆಕ್ನಿಕ್</td><td>781</td></tr>
</table>
</td>
</tr>
</table>

ಇಡಿ 044 ಟಿಪಿಇ 2020.

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)

ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 21 ಎಸ್‌ಟಿಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು,ದಿನಾಂಕ:19–03–2020.

217
4/S
19/3/20

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ:– ಮಾನ್ಯ ವಿಧಾನ ಸಭೆ ಸದಸ್ಯರಾದ **ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2426ಕ್ಕೆ** ಉತ್ತರವನ್ನು ಒದಗಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ **ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2426ಕ್ಕೆ** ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,
19/03/2020
(ಹೆಚ್.ಸಿ.ಹರ್ಷರಾಣಿ )
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
ಕುಟುಂಬ ಕಲ್ಯಾಣ

# ಕರ್ನಾಟಕ ವಿಧಾನ ಸಭೆ.

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2426 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ |
| ಉತ್ತರಿಸಬೇಕಾದ ದಿನಾಂಕ | : | 19.03.2020 |
| ಉತ್ತರಿಸುವ ಸಚಿವರು | : | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

<table>
<tr><th>ಕ್ರ. ಸಂ</th><th>ಪ್ರಶ್ನೆಗಳು</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ಅಂಗಾಂಗ ಕಸಿ ಯೋಜನೆಯು ಜಾರಿಗೆ ಬಂದಿರುವುದು ನಿಜವೇ; ಹಾಗಾದರೆ ಸದರಿ ಯೋಜನೆಯ ವೈಶಿಷ್ಟ್ಯವೇನು; (ವಿವರ ನೀಡುವುದು)</td><td>ಹೌದು.<br><br>ಸದರಿ ಯೋಜನೆಯ ವೈಶಿಷ್ಟ್ಯಗಳನ್ನು <u>ಅನುಬಂಧ-1</u>ರಲ್ಲಿ ನೀಡಲಾಗಿದೆ.</td></tr>
<tr><td>ಆ)</td><td>ಈ ಯೋಜನೆಯು ಜಾರಿಗೆ ಬಂದಿದ್ದು ಯಾವಾಗ; ಈ ಯೋಜನೆಯಿಂದ ಇದುವರೆಗೂ ಎಷ್ಟು ರೋಗಿಗಳು ಯೋಜನೆಯ ಸೌಲಭ್ಯವನ್ನು ಪಡೆದುಕೊಂಡಿದ್ದಾರೆ (ವಿವರ ಒದಗಿಸುವುದು)</td><td>ರಾಜ್ಯ ಸರ್ಕಾರವು ಬಿಪಿಎಲ್ ರೋಗಿಗಳಿಗೆ ಅಂಗಾಂಗ ಕಸಿ ಯೋಜನೆಯನ್ನು ದಿನಾಂಕ:03.12.2018 ರಿಂದ ಜಾರಿಗೊಳಿಸಿದೆ.<br><br>ಈ ಯೋಜನೆಯಡಿಯಲ್ಲಿ ಇದುವರೆವಿಗೂ 23 ರೋಗಿಗಳು ಸೌಲಭ್ಯವನ್ನು ಪಡೆದುಕೊಂಡಿದ್ದಾರೆ. ವಿವರಗಳು ಕೆಳಕಂಡಂತಿವೆ<br><br>
<table>
<tr><th>Sl. No.</th><th>Procedure Code</th><th>No of Cases</th><th>Expenditure</th></tr>
<tr><td>1</td><td>HTC001 : Heart Transplant Cadaveric</td><td>8</td><td rowspan="4">Rs.1,18,60,000/-</td></tr>
<tr><td>2</td><td>KTC002 : Kidney Transplant Cadaveric</td><td>8</td></tr>
<tr><td>3</td><td>KTL001 : Kidney Transplant Live</td><td>7</td></tr>
<tr><td colspan="2">Total</td><td>23</td></tr>
</table></td></tr>
<tr><td>ಇ)</td><td>ಈ ಯೋಜನೆಯಿಂದ ಯಾವ ಯಾವ ಅಂಗಾಂಗಗಳನ್ನು ಕಸಿ ಮಾಡಿಸಿ ಕೊಳ್ಳಬಹುದಾಗಿದೇ; ಈ ಯೋಜನೆಗೆ ಯಾರು ಅರ್ಹರು.</td><td>ಈ ಯೋಜನೆಯಡಿಯಲ್ಲಿ ಕಿಡ್ನಿ, ಹೃದಯ ಮತ್ತು ಲಿವರ್ ಅಂಗಾಂಗಗಳ ಕಸಿಯನ್ನು ಮಾಡಿಸಿಕೊಳ್ಳಬಹುದಾಗಿದೆ. ಈ ಯೋಜನೆಯು ಬಿಪಿಎಲ್ ಕಾರ್ಡ್ ಹೊಂದಿರುವ ರೋಗಿಗಳಿಗೆ ಮಾತ್ರ ಅನ್ವಯಿಸುತ್ತದೆ</td></tr>
</table>

...2

| | | |
|---|---|---|
| ಈ) | ಸದರಿ ಯೋಜನೆಯ ಸಂಪೂರ್ಣ ವೆಚ್ಚವನ್ನು ರಾಜ್ಯ ಸರ್ಕಾರವು ಭರಿಸುವುದೇ; ಈ ಯೋಜನೆಯ ಸದುಪಯೋಗವನ್ನು ಯಾವ ಯಾವ ಆಸ್ಪತ್ರೆಗಳಲ್ಲಿ ಪಡೆಯಬಹುದಾಗಿದೆ. | ಈ ಯೋಜನೆಯ ಪ್ಯಾಕೇಜ್ ದರಗಳನ್ನು ಮಾತ್ರ ರಾಜ್ಯ ಸರ್ಕಾರವು ಭರಿಸುತ್ತದೆ. ಈ ಯೋಜನೆಯ ಸದುಪಯೋಗವನ್ನು ಸರ್ಕಾರಿ ಹಾಗೂ ಖಾಸಗಿ ಆಸ್ಪತ್ರೆಗಳಲ್ಲಿ ಪಡೆಯಬಹುದಾಗಿದೆ. (ಆಸ್ಪತ್ರೆಗಳ ಪಟ್ಟಿಯನ್ನು <u>ಅನುಬಂಧ-2</u> ರಲ್ಲಿ ನೀಡಲಾಗಿದೆ) |
| ಉ) | ಸದರಿ ಯೋಜನೆಯು ಬಡ ರೋಗಿಗಳಿಗೆ ದೊರೆಯುವಂತೆ ಪ್ರಚಾರ ಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು) | ಈ ಯೋಜನೆಯು ಬಡ ರೋಗಿಗಳಿಗೆ ದೊರೆಯುವಂತೆ ಪ್ರಚಾರ ಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳು ಕೆಳಕಂಡಂತಿವೆ;<br>• ದಿನ ಪತ್ರಿಕೆಗಳಲ್ಲಿ ಪತ್ರಿಕಾ ಜಾಹಿರಾತು ಪ್ರಕಟಿಸಲಾಗುತ್ತಿದೆ.<br>• ದೂರದರ್ಶನ ವಾಹಿನಿ ಹಾಗೂ ಆಕಾಶವಾಣಿ ವಾಹಿನಿಗಳ ಮೂಲಕ ಯೋಜನೆಯ ಕುರಿತು ಪ್ರಚಾರ ಮಾಡಲಾಗುತ್ತಿದೆ.<br>• ಸರ್ಕಾರಿ ಬಸ್ ನಿಲ್ದಾಣಗಳಲ್ಲಿ ಯೋಜನೆಯ ಕುರಿತು ಮಾಹಿತಿ ಪ್ರಸಾರ ಮಾಡಲಾಗುತ್ತಿದೆ.<br>• ಸಾರ್ವಜನಿಕ ಆಸ್ಪತ್ರೆಗಳಲ್ಲಿ ಹಾಗೂ ನೋಂದಾಯಿತ ಆಸ್ಪತ್ರೆಗಳಲ್ಲಿ ಯೋಜನೆಯ ಮಾಹಿತಿ ಬೋರ್ಡ್‌ಗಳನ್ನು ಅಳವಡಿಸುವ ಮೂಲಕ ಪ್ರಚಾರ ಮಾಡಲಾಗುತ್ತಿದೆ.<br>• ಸಾರ್ವಜನಿಕರಿಗೆ ಹೆಚ್ಚಿನ ಮಾಹಿತಿ ನೀಡುವ ಸಲುವಾಗಿ ಕರ ಪತ್ರಗಳು ಮತ್ತು ಬ್ರೋಚರ್‌ಗಳನ್ನು ವಿತರಿಸಲಾಗುತ್ತಿದೆ ಹಾಗೂ ವಾಟ್ಸ್‌ಅಪ್ ಗ್ರೂಪ್‌ಗಳ ಮೂಲಕ ಯೋಜನೆಯ ಸಂದೇಶಗಳನ್ನು ರವಾನಿಸಲಾಗುತ್ತಿದೆ. |

**ಕಡತ ಸಂಖ್ಯೆ:ಆಕುಕ 22 ಎಸ್‌ಟಿಕ್ಯೂ 2020.**

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

2. ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು:

- ಪಿಯುಸಿ, ಪದವಿ, ಸ್ನಾತಕೋತ್ತರ ಪದವಿ, ಬಿ.ಇ, ಎಂಬಿಬಿಎಸ್, ಡಿಪ್ಲೋಮ, ವೃತ್ತಿಶಿಕ್ಷಣ ಇತ್ಯಾದಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪ್ರವೇಶ.
- 508 ಬಾಲಕರ ವಿದ್ಯಾರ್ಥಿ ನಿಲಯಗಳಲ್ಲಿ 52473 ವಿದ್ಯಾರ್ಥಿಗಳಿಗೆ ಪ್ರವೇಶ
- 628 ಬಾಲಕಿಯರ ವಿದ್ಯಾರ್ಥಿ ನಿಲಯಗಳಲ್ಲಿ 65077 ವಿದ್ಯಾರ್ಥಿಗಳಿಗೆ ಪ್ರವೇಶ
- ಒಟ್ಟು 1136 ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ 117550 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ

ಪ್ರತಿ ವಿದ್ಯಾರ್ಥಿಗೆ ನೀಡಲಾಗುವ ಸೌಲಭ್ಯಗಳು:

- ಮಾಹೆಯಾನ ರೂ.1600/-ರ ವೆಚ್ಚದಲ್ಲಿ 10 ತಿಂಗಳ ಅವಧಿಗೆ ಆಹಾರದ ವೆಚ್ಚ ನೀಡಿಕೆ.
- ಪ್ರತಿ ಮಾಹೆ ರೂ.108/- (ಬಾಲಕಿ) ರೂ.91/-(ಬಾಲಕ) ರ ದರದಲ್ಲಿ ಶುಚಿ ಸಂಭ್ರಮ ಕಿಟ್ ವಿತರಣೆ.
- 3 ವರ್ಷಕ್ಕೊಮ್ಮೆ ರೂ.878/- ರ ದರದಲ್ಲಿ ಜಮಖಾನ ಹೊದಿಕೆ ಸರಬರಾಜು
- ಪ್ರತಿ ನಿಲಯಕ್ಕೆ 2 ದಿನ-ಪತ್ರಿಕೆಗಳ ಪೂರೈಕೆ (ಒಂದು ಆಂಗ್ಲ ಭಾಷೆ ಹಾಗೂ ಒಂದು ಕನ್ನಡ ದಿನಪತ್ರಿಕೆಗಳು) ವಾಸ್ತವಿಕ ವೆಚ್ಚದಲ್ಲಿ.
- ವೈದ್ಯಕೀಯ ಸೌಲಭ್ಯ (ವಾಸ್ತವ ದರದಂತೆ)
- ಸ್ನಾತಕೋತ್ತರ / ವೃತ್ತಿಪರ ವಿದ್ಯಾರ್ಥಿನಿಲಯಗಳ ಗ್ರಂಥಾಲಯಕ್ಕಾಗಿ ಪ್ರಥಮ ಬಾರಿಗೆ ರೂ.1.25 ಲಕ್ಷ, ನಂತರದ ಪ್ರತಿ ವರ್ಷಕ್ಕೆ ರೂ.30,000/-
- ಇತರೆ ವಿದ್ಯಾರ್ಥಿನಿಲಯಗಳಿಗೆ ಪ್ರಥಮ ಬಾರಿಗೆ ರೂ.1.00 ಲಕ್ಷ, ನಂತರದ ಪ್ರತಿ ವರ್ಷಕ್ಕೆ ರೂ.20,000/-

3. ಸರ್ಕಾರಿ ಆಶ್ರಮ ಶಾಲೆಗಳ ನಿರ್ವಹಣೆ:

- ಪ್ರವರ್ಗ- 1ರ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಶಿಕ್ಷಣಕ್ಕೆ ಅವಕಾಶ ಕಲ್ಪಿಸುವ ದೃಷ್ಟಿಯಿಂದ 18 ಆಶ್ರಮಶಾಲೆಗಳನ್ನು ನಿರ್ವಹಿಸಲಾಗುತ್ತಿದೆ.
- 1ರಿಂದ 4ನೇ ತರಗತಿಯವರೆಗೆ ವ್ಯಾಸಂಗ ಮಾಡುವ ಮಕ್ಕಳಿಗೆ ಶಿಕ್ಷಣದ ಜೊತೆಗೆ ಊಟ ಮತ್ತು ವಸತಿ ಸೌಲಭ್ಯ

ನೀಡಲಾಗುತ್ತಿರುವ ಸೌಲಭ್ಯ: ಪ್ರತಿ ವಿದ್ಯಾರ್ಥಿಗೆ

- ಮಾಹೆಯಾನ ರೂ. 1200/- ರ ವೆಚ್ಚದಲ್ಲಿ 10 ತಿಂಗಳ ಅವಧಿಗೆ ಆಹಾರ ನೀಡಿಕೆ
- ವರ್ಷಕ್ಕೆ ರೂ.1000/- ರ ದರದಲ್ಲಿ 2 ಜೊತೆ ಸಮವಸ್ತ್ರ ಪೂರೈಕೆ
- ವಿದ್ಯಾರ್ಥಿಗಳಿಗೆ ಜಮಖಾನ ಹೊದಿಕೆ ಸರಬರಾಜು.
- ಪ್ರತಿ ಬಾಲಕ ವಿದ್ಯಾರ್ಥಿಗೆ ವಾರ್ಷಿಕ ರೂ.30/-ರಂತೆ ಕ್ಷೌರದ ವೆಚ್ಚ.
- ಶೇಕಡ 75 ರಷ್ಟನ್ನು ಪ್ರವರ್ಗ-1 ಹಾಗೂ ಶೇಕಡ 25 ರಷ್ಟನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ.
- ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ ಹಾಗೂ ಪ್ರವರ್ಗ 2ಎ, 2ಬಿ, 3ಎ, 3ಬಿ ಸೇರಿದ ವಿದ್ಯಾರ್ಥಿಗಳಿಗೆ ರೂ.44,500/- ಗಳ ವಾರ್ಷಿಕ ಆದಾಯ ಮಿತಿ

4. ಖಾಸಗಿ ಹಿಂದುಳಿದ ವರ್ಗಗಳ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು:

- 228 ಖಾಸಗಿ ಹಿಂದುಳಿದ ವರ್ಗಗಳ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳ ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ.1000/- ರಂತೆ 10 ತಿಂಗಳ ಅವಧಿಗೆ ಭೋಜನಾ ವೆಚ್ಚವನ್ನು ನೀಡಲಾಗುತ್ತಿದೆ.

ನಿಬಂಧನೆಗಳು:

- ಪ್ರವರ್ಗ-1 ರ ವಿದ್ಯಾರ್ಥಿಗಳಿಗೆ ರೂ.1.00ಲಕ್ಷ ಹಾಗೂ ಪ್ರವರ್ಗ-2ಎ, 2ಬಿ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ ರೂ.44,500/- ಗಳ ಆದಾಯಮಿತಿ

- 5 ರಿಂದ 10ನೇ ತರಗತಿವರೆಗಿನ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ

**5. ಖಾಸಗಿ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು:**

- 24 ಖಾಸಗಿ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಿಗೆ ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ.1100/- ರಂತೆ 10 ತಿಂಗಳ ಅವಧಿಗೆ ಭೋಜನಾ ವೆಚ್ಚವನ್ನು ನೀಡಲಾಗುತ್ತಿದೆ.
- ಪ್ರವರ್ಗ-1 ರ ವಿದ್ಯಾರ್ಥಿಗಳಿಗೆ ರೂ.2.50ಲಕ್ಷ ಹಾಗೂ ಪ್ರವರ್ಗ-2ಎ, 2ಬಿ, 3ಎ, ಮತ್ತು 3ಬಿ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ ಆದಾಯಮಿತಿ ನಿಗದಿಪಡಿಸಿದೆ.
- ಪದವಿ ಪೂರ್ವ ಕೋರ್ಸಿನಿಂದ ಸ್ನಾತಕೋತ್ತರ ಪದವಿಗಳವರೆಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ

**6.ಖಾಸಗಿ ಅನುದಾನಿತ ಅನಾಥಾಲಯಗಳು:**

- ಸ್ವಯಂ ಸೇವಾ ಸಂಸ್ಥೆಗಳು ಅನಾಥ ಮತ್ತು ನಿರ್ಗತಿಕ ಮಕ್ಕಳ ಶಿಕ್ಷಣಕ್ಕೆ ಅನುಕೂಲವಾಗುವಂತೆ ಅನಾಥಾಲಯಗಳ ನಿರ್ವಹಣೆ
- 7686 ಸಂಖ್ಯಾಬಲದ 54 ಖಾಸಗಿ ಅನಾಥಾಲಯಗಳ ನಿರ್ವಹಣೆ
- ಮಾಹೆಯಾನ ರೂ.800/-ರ ದರದಲ್ಲಿ ವರ್ಷದ 12 ತಿಂಗಳುಗಳಿಗೆ ಆಹಾರದ ಬಾಬ್ತು ಸಹಾಯಧನ ಮಂಜೂರು.

ನಿಬಂಧನೆಗಳು:

- ಅನಾಥ ವಿದ್ಯಾರ್ಥಿಗಳಿಗೆ ಆದಾಯಮಿತಿ ಇರುವುದಿಲ್ಲ.
- ನಿರ್ಗತಿಕ ವಿದ್ಯಾರ್ಥಿಗಳು ವಾರ್ಷಿಕ ಆದಾಯಮಿತಿ- ಪ್ರವರ್ಗ-1 ರೂ.1.00 ಲಕ್ಷ ಪ್ರವರ್ಗ-2ಎ, 2ಬಿ, 3ಎ, ಮತ್ತು 3ಬಿ ರೂ.44,500/- ನಿಗದಿ.
- 1 ರಿಂದ 10ನೇ ತರಗತಿವರೆಗೆ ವ್ಯಾಸಂಗ ಮಾಡುತ್ತಿರುವ ನಿರ್ಗತಿಕ ಹಾಗೂ ಅನಾಥ ಮಕ್ಕಳು ಸೌಲಭ್ಯಕ್ಕೆ ಅರ್ಹರು.

## II. ವಿದ್ಯಾರ್ಥಿವೇತನ ಕಾರ್ಯಕ್ರಮ

**1. ಮೆಟ್ರಿಕ್-ಪೂರ್ವ ವಿದ್ಯಾರ್ಥಿವೇತನ:**

**ದರಗಳ ವಿವರ:**

| ತರಗತಿ | ಬಾಲಕ/ ಬಾಲಕಿ | Adhoc Grant | ಒಟ್ಟು |
|---|---|---|---|
| 1 ರಿಂದ 5 | 250/- | 500/- | 750/- |
| 6 ರಿಂದ 8 | 400/- | 500/- | 900/- |
| 9 ರಿಂದ 10 | 500/- | 500/- | 1000/- |

**2. ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ:**

**ಮೆಟ್ರಿಕ್-ನಂತರದ ವಿದ್ಯಾರ್ಥಿವೇತನದ ದರಗಳು**

| ಕ್ರ ಸಂ. | ಗುಂಪು | ಮಂಜೂರು ಮಾಡಲಾಗುವ ವಿದ್ಯಾರ್ಥಿವೇತನದ ದರ (ವಾರ್ಷಿಕ) |
|---|---|---|
| 1 | ಗುಂಪು-ಎ | 3500/- |
| 2 | ಗುಂಪು-ಬಿ | 3350/- |
| 3 | ಗುಂಪು-ಸಿ | 2100/- |
| 4 | ಗುಂಪು-ಡಿ | 1600/- |

3. ವಿದ್ಯಾಸಿರಿ– ಊಟ ಮತ್ತು ವಸತಿ ಸಹಾಯ ಯೋಜನೆ:

**ಅರ್ಹತೆಗಳು:**

- ಇಲಾಖೆಯ ವಿದ್ಯಾರ್ಥಿನಿಲಯಗಳಲ್ಲಿ, ಪ್ರವೇಶ ದೊರೆಯದ ಹಾಗೂ ಮೆಟ್ರಿಕ್–ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಮಂಜೂರಾತಿ.

ಆಯ್ಕೆಯಾದ ವಿದ್ಯಾರ್ಥಿಗಳಿಗೆ, ಪ್ರತಿ ತಿಂಗಳಿಗೆ ರೂ.1500/–ರಂತೆ, ಶೈಕ್ಷಣಿಕ ಅವಧಿಯ 10 ತಿಂಗಳಿಗೆ ಒಟ್ಟು ರೂ.15,000/– ಸಹಾಯಧನ ಮಂಜೂರು

4. ಶುಲ್ಕ ವಿನಾಯಿತಿ

- ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಶಿಕ್ಷಣ ಪಡೆಯಲು ನೆರವಾಗುವ ದೃಷ್ಟಿಯಿಂದ ಸರ್ಕಾರವು, ನಿಗದಿಪಡಿಸುವ ಶುಲ್ಕದ ದರಗಳನ್ನು ಪಾವತಿಸಲಾಗುವುದು.

**ಶುಲ್ಕ ವಿನಾಯಿತಿಗೆ ಅರ್ಹ ಇರುವ ಶುಲ್ಕಗಳು:**

ಅ) ಬೋಧನಾ ಶುಲ್ಕ
ಆ) ಪ್ರಯೋಗಾಲಯ ಶುಲ್ಕ
ಇ) ಪರೀಕ್ಷಾ ಶುಲ್ಕ
ಈ) ಕ್ರೀಡಾ ಶುಲ್ಕ
ಉ) ಗ್ರಂಥಾಲಯ ಶುಲ್ಕ

5. ಪಿಎಚ್.ಡಿ ಪೂರ್ಣಾವಧಿ ಫೆಲೋಶಿಪ್

- ಪೂರ್ಣಾವಧಿ ಪಿಎಚ್.ಡಿ. ಅಧ್ಯಯನದಲ್ಲಿ ತೊಡಗಿರುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಮಾಸಿಕ ರೂ.10,000/– ದಂತೆ ವ್ಯಾಸಂಗ ವೇತನ/ಫೆಲೋಶಿಪ್ ಅನ್ನು ನೀಡಿ, ಉನ್ನತ ಶಿಕ್ಷಣ/ಸಂಶೋಧನೆಯಲ್ಲಿ ತೊಡಗಿಕೊಳ್ಳಲು ನೆರವು ನೀಡಲಾಗುತ್ತಿದೆ.

6. ಡಿ.ದೇವರಾಜ ಅರಸು ಪ್ರತಿಭಾ ಪುರಸ್ಕಾರ

- ಎಸ್.ಎಸ್.ಎಲ್.ಸಿ, ಪಿ.ಯು.ಸಿ, ಪದವಿ, ಸ್ನಾತಕೋತ್ತರ ಪದವಿಗಳಲ್ಲಿ ಶೇ.90 ಕ್ಕಿಂತ ಹೆಚ್ಚು ಅಂಕಗಳಿಸಿದ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹವನ್ನು ನೀಡುವ ದೃಷ್ಟಿಯಿಂದ "ಡಿ.ದೇವರಾಜ ಅರಸು ಪ್ರತಿಭಾ ಪುರಸ್ಕಾರ" ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.

7. ಡಿ. ದೇವರಾಜ ಅರಸು ವಿದೇಶಿ ವ್ಯಾಸಂಗ ವೇತನ

- ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಪದವಿ ಮತ್ತು ಪಿಹೆಚ್.ಡಿ/ಸಂಶೋಧನೆ ಮಾಡುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಾರ್ಷಿಕ ಗರಿಷ್ಠ ರೂ.10.00 ಲಕ್ಷಗಳ ಧನಸಹಾಯ ನೀಡಲಾಗುವುದು.

8. ನಿಲಯಾರ್ಥಿಗಳಿಗೆ ಪ್ರೋತ್ಸಾಹಧನ:

- ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯಗಳಲ್ಲಿ ವ್ಯಾಸಂಗ ಮಾಡುತ್ತಿದ್ದು, ಪಬ್ಲಿಕ್ ಪರೀಕ್ಷೆಗಳಲ್ಲಿ ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಿಗೆ ಪ್ರೋತ್ಸಾಹಧನ ಮಂಜೂರು.
- ಎಸ್.ಎಸ್.ಎಲ್.ಸಿ – ರೂ.1000/–, ಪಿ.ಯು.ಸಿ. ಡಿಪ್ಲೋಮ – ರೂ.1500/–ಪದವಿ – ರೂ.2000/– ಹಾಗೂ ಸ್ನಾತಕೋತ್ತರ ಪದವಿಗಳು –ರೂ.3000/–

9. **ರಾಷ್ಟ್ರೀಯ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ**
   - ರಾಷ್ಟ್ರೀಯ ಉನ್ನತ ಶಿಕ್ಷಣ ಸಂಸ್ಥೆಗಳಾದ ಐ.ಐ.ಟಿ., ಐ.ಐ.ಎಂ. ಮತ್ತು ಐ.ಐ.ಎಸ್ಸಿ ಮುಂತಾದ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಒಂದು ಬಾರಿಯ ಪ್ರೋತ್ಸಾಹ ಧನ ರೂ.2.00 ಲಕ್ಷಗಳನ್ನು ಮಂಜೂರು ಮಾಡಲಾಗುತ್ತಿದೆ.
   - 2019-20ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕೆ ರೂ.150.00 ಲಕ್ಷ ಅನುದಾನ ಹಂಚಿಕೆ ಮಾಡಿಕೊಳ್ಳಲಾಗಿದ್ದು, 75 ವಿದ್ಯಾರ್ಥಿಗಳ ಗುರಿ ಹೊಂದಲಾಗಿದೆ.

## III. ತರಬೇತಿ ಕಾರ್ಯಕ್ರಮಗಳು

### 1. ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿ:

- ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಐ.ಎ.ಎಸ್, ಕೆ.ಎ.ಎಸ್ ಮತ್ತು ಬ್ಯಾಂಕಿಂಗ್ ಪ್ರೋಬೇಷನರಿ ಆಫೀಸರ್ಸ್ ಪರೀಕ್ಷೆಗಳ ಪರೀಕ್ಷಾ ಪೂರ್ವ ತರಬೇತಿಗಳಲ್ಲಿ ಯಾವುದಾದರೂ ಒಂದಕ್ಕೆ ಉಚಿತ ಪರೀಕ್ಷಾ ಪೂರ್ವ ತರಬೇತಿಯನ್ನು ಪ್ರತಿಷ್ಠಿತ ಖಾಸಗಿ ತರಬೇತಿ ಸಂಸ್ಥೆಗಳ ಮೂಲಕ ನೀಡಲಾಗುತ್ತಿದೆ.

### 2. ಹಿಂದುಳಿದ ವರ್ಗಗಳ ನರ್ಸಿಂಗ್ ವಿದ್ಯಾರ್ಥಿಗಳಿಗೆ ಶಿಷ್ಯವೇತನ, ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹ

ಅವಧಿ

- ಡಿ.ಜಿ.ಎನ್.ಎಂ – 3 1/2 ವರ್ಷಗಳು
- ಬಿ.ಎಸ್ಸಿ, ನರ್ಸಿಂಗ್ – 4 ವರ್ಷಗಳು
- ಪ್ಯಾರಾ ಮೆಡಿಕಲ್ (ಎಸ್.ಎಸ್.ಎಲ್.ಸಿ.) – 3 ವರ್ಷಗಳು
- ಪ್ಯಾರಾ ಮೆಡಿಕಲ್ (ಪಿ.ಯು.ಸಿ.) – 2 ವರ್ಷಗಳು

### 3. ವಿಶ್ವವಿದ್ಯಾಲಯಗಳಲ್ಲಿ ಹಿಂದುಳಿದ ವರ್ಗಗಳ ಕೋಶಕ್ಕೆ ಅನುದಾನ

- ಕರ್ನಾಟಕ ರಾಜ್ಯದ ಸರ್ಕಾರಿ ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಹಾಗೂ ಉದ್ಯೋಗ ಮಾರ್ಗದರ್ಶನ ನೀಡಲು ಪ್ರತಿ ವಿಶ್ವವಿದ್ಯಾಲಯಗಳಿಗೆ ರೂ.5.00 ಲಕ್ಷಗಳ ಧನಸಹಾಯವನ್ನು ಒದಗಿಸುವುದು.

### 4. ಕಾನೂನು ಪದವೀಧರರಿಗೆ ತರಬೇತಿ

- ಕಾನೂನು ಪದವಿಯನ್ನು ಪಡೆದಿರುವ ಹಿಂದುಳಿದ ವರ್ಗಗಳ ನಿರುದ್ಯೋಗಿ ಅಭ್ಯರ್ಥಿಗಳಿಗೆ ವಕೀಲಿ ವೃತ್ತಿಯಲ್ಲಿ ಜಿಲ್ಲಾಮಟ್ಟದಲ್ಲಿ ತರಬೇತಿ ನೀಡಲಾಗುತ್ತಿದೆ.
- ಮಾಸಿಕ ರೂ.4000/- ಗಳ ಶಿಷ್ಯವೇತನ ನೀಡಿಕೆ.

### 5. ಹೊಲಿಗೆ ತರಬೇತಿ ಕೇಂದ್ರಗಳು

- ಹಿಂದುಳಿದ ವರ್ಗಗಳಿಗೆ ಸೇರಿದ ಮಹಿಳೆಯರು ಹೊಲಿಗೆ ವೃತ್ತಿಯಲ್ಲಿ ತರಬೇತಿ ಹೊಂದಿ ಸ್ವಯಂ ಉದ್ಯೋಗದೊಡನೆ ತಮ್ಮ ಜೀವನೋಪಾಯವನ್ನು ನಡೆಸಲು ಸಾಧ್ಯವಾಗುವಂತೆ ಈ ಯೋಜನೆಯನ್ನು ಜಿಲ್ಲಾವಲಯ ಕಾರ್ಯಕ್ರಮದಡಿ ಅನುಷ್ಠಾನಗೊಳಿಸಲಾಗುತ್ತಿದೆ.

### 6. ಭಾರತೀಯ ಸೇನೆಗೆ ಸೇರ ಬಯಸುವ ರಾಜ್ಯದ ಹಿಂದುಳಿದ ವರ್ಗಗಳ ಅರ್ಹ ಅಭ್ಯರ್ಥಿಗಳಿಗೆ ಆಯ್ಕೆಯ ಪೂರ್ವ ಸಿದ್ಧತೆ ಬಗ್ಗೆ ವೃತ್ತಿ ಮಾರ್ಗದರ್ಶನ ಮತ್ತು ತರಬೇತಿ

- ಭಾರತೀಯ ಸೇನೆಗೆ ಸೇರ ಬಯಸುವ ರಾಜ್ಯದ ಹಿಂದುಳಿದ ವರ್ಗಗಳ ಅರ್ಹ ಅಭ್ಯರ್ಥಿಗಳಿಗೆ ಆಯ್ಕೆಯ ಪೂರ್ವ ಸಿದ್ಧತೆ ಬಗ್ಗೆ ವೃತ್ತಿ ಮಾರ್ಗದರ್ಶನ ಮತ್ತು ತರಬೇತಿ.

7. ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿರುವ ವಿದ್ಯಾರ್ಥಿಗಳಿಗೆ ವೃತ್ತಿ ಮಾರ್ಗದರ್ಶನ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ.

- ಅಂತಿಮ ಪದವಿ ಮತ್ತು ಸ್ನಾತಕೋತ್ತರ ಪದವಿಯನ್ನು ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಲ್ಲಿ ಐ.ಎ.ಎಸ್., ಐ.ಪಿ.ಎಸ್., ಕೆ.ಎ.ಎಸ್., ಬ್ಯಾಂಕಿಂಗ್ ಇತ್ಯಾದಿ ಸ್ಪರ್ಧಾತ್ಮಕ ಪರೀಕ್ಷೆಗಳ ಬಗ್ಗೆ ತಿಳುವಳಿಕೆ ಹೆಚ್ಚಿಸಲು ಮತ್ತು ಮಾರ್ಗದರ್ಶನ ನೀಡಲು ತಾಲ್ಲೂಕುಮಟ್ಟದಲ್ಲಿ ವರ್ಷದಲ್ಲಿ 3 ದಿನಗಳ ಕಾರ್ಯಾಗಾರವನ್ನು ನಡೆಸಲಾಗುತ್ತಿದೆ.

## IV. ಅಲೆಮಾರಿ ಮತ್ತು ಅರೆಅಲೆಮಾರಿ ಜನಾಂಗದ ಅಭಿವೃದ್ಧಿ ಕಾರ್ಯಕ್ರಮಗಳು

1. ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ವಿಶೇಷ ಪ್ರೋತ್ಸಾಹಧನ

- ಅಲೆಮಾರಿ ಹಾಗೂ ಅರೆ ಅಲೆಮಾರಿ ಜನಾಂಗಕ್ಕೆ ಸೇರಿದ ವಿದ್ಯಾರ್ಥಿಗಳ ಮಾಧ್ಯಮಿಕ ಹಾಗೂ ಪ್ರೌಢ ಶಿಕ್ಷಣಕ್ಕೆ ಆರ್ಥಿಕ ನೆರವು ನೀಡುವುದರ ಮೂಲಕ ಶೈಕ್ಷಣಿಕ ಪ್ರೋತ್ಸಾಹ ನೀಡಲು ಈ ಕೆಳಕಾಣಿಸಿದ ದರಗಳಲ್ಲಿ ಪ್ರೋತ್ಸಾಹ ಧನ ಮಂಜೂರು ಮಾಡಲಾಗುತ್ತಿದೆ.

| ಕ್ರ ಸಂ. | ತರಗತಿ | ಮಾಹೆಯಾನ ಪ್ರೋತ್ಸಾಹ ಧನ ದರಗಳು | | ಅವಧಿ |
|---|---|---|---|---|
| | | ಬಾಲಕರು | ಬಾಲಕಿಯರು | |
| 1 | 1 ರಿಂದ 10ನೇ ತರಗತಿ | ರೂ.200/- | ರೂ.200/- | 10 ತಿಂಗಳು |

2. ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಅರ್ಹತಾ ವಿದ್ಯಾರ್ಥಿ ವೇತನ

- ಅಲೆಮಾರಿ/ಅರೆ ಅಲೆಮಾರಿ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳ ಮೆಟ್ರಿಕ್ ನಂತರದ ಶಿಕ್ಷಣವನ್ನು ಮುಂದುವರೆಸಲು ಹಾಗೂ ಈ ಹಂತದ ವಿದ್ಯಾರ್ಥಿಗಳಿಗೆ ಶಿಕ್ಷಣದಲ್ಲಿ ಉತ್ತೇಜನ ನೀಡುವ ಉದ್ದೇಶದಿಂದ ಈ ಕೆಳಕಾಣಿಸಿದ ದರಗಳಲ್ಲಿ ಅರ್ಹತಾ ವಿದ್ಯಾರ್ಥಿ ವೇತನವನ್ನು ಮಂಜೂರು ಮಾಡಲಾಗುವುದು.

| ಕ್ರ ಸಂ. | ವಿವರ | ಮಾಸಿಕ ವಿದ್ಯಾರ್ಥಿ ವೇತನದ ದರ | ಅವಧಿ |
|---|---|---|---|
| 1 | ಪಿ.ಯು.ಸಿ. ಮತ್ತು ಡಿಪ್ಲೊಮೊ | ರೂ.300/- | 10 ತಿಂಗಳು |
| 2 | ಪದವಿ ಮತ್ತು ಸ್ನಾತಕೋತ್ತರ ಪದವಿ | ರೂ.400/- | 10 ತಿಂಗಳು |
| 3 | ಸಿಇಟಿ ಮೂಲಕ ಸರ್ಕಾರಿ ಕೋಟಾದಲ್ಲಿ ಬಿಇ, ಎಂ.ಬಿ.ಬಿ.ಎಸ್., ಬಿ.ಡಿ.ಎಸ್., ತತ್ಸಮಾನವಾದ ಇನ್ನಿತರ ತಾಂತ್ರಿಕ/ವೃತ್ತಿಪರ ಕೋರ್ಸ್‌ಗಳಿಗೆ | ರೂ.500/- | 10 ತಿಂಗಳು |

2. ಆಶ್ರಮ ಶಾಲೆಗಳ ಪ್ರಾರಂಭ ಹಾಗೂ ನಿರ್ವಹಣೆ

- ಅಲೆಮಾರಿ ಹಾಗೂ ಅರೆ ಅಲೆಮಾರಿ ಜನಾಂಗದವರ ಕುಟುಂಬಕ್ಕೆ ಸೇರಿದ ಮಕ್ಕಳ ಪ್ರಾಥಮಿಕ ಶಿಕ್ಷಣಕ್ಕೆ ನೆರವು ಹಾಗೂ ಉತ್ತೇಜನ ನೀಡುವ ದೃಷ್ಟಿಯಿಂದ 125 ಸಂಖ್ಯಾಬಲದ 4 ಆಶ್ರಮ ಶಾಲೆಗಳನ್ನು ಕೊಪ್ಪಳ, ಕಲಬುರಗಿ, ಚಿಕ್ಕಮಗಳೂರು ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ನಿರ್ವಹಿಸಲಾಗುತ್ತಿದೆ.

4. ರಾಜ್ಯದ ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶಾವಕಾಶ ಸೌಲಭ್ಯ

- ಸರ್ಕಾರದ ಆದೇಶ ಸಂಖ್ಯೆ: ಹಿಂವಕ 424 ಬಿಎಂಎಸ್ 2013, ದಿನಾಂಕ:17.07.2013ರಲ್ಲಿ ಗುರುತಿಸಿರುವ ಪ್ರತಿಷ್ಠಿತ ಶಾಲೆಗಳಲ್ಲಿ ನಿಬಂಧನೆಗಳಿಗೊಳಪಟ್ಟು, ಅಲೆಮಾರಿ/ಅರೆ ಅಲೆಮಾರಿ ಜನಾಂಗದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ಕಲ್ಪಿಸಲಾಗುತ್ತಿದೆ ಹಾಗೂ ನವೀಕರಣ ವಿದ್ಯಾರ್ಥಿಗಳಿಗೆ ಅವರ ಶಾಲಾ ವಿದ್ಯಾಭ್ಯಾಸ ಮುಗಿಯುವವರೆಗೆ ಶಾಲಾ ಹಾಗೂ ವಸತಿ ಶುಲ್ಕವನ್ನು ಇಲಾಖೆಯಿಂದ ಭರಿಸಲಾಗುತ್ತಿದೆ.

5. ಅರಿವು ಮೂಡಿಸುವ ಕಾರ್ಯಕ್ರಮ

- ಗೊಲ್ಲ ಜನಾಂಗದವರು ಹೆಚ್ಚಾಗಿ ವಾಸಿಸುವ ಕಾಲೋನಿಗಳಲ್ಲಿ ಕಂದಾಚಾರಗಳಿಂದ ಇರುವ ಪದ್ಧತಿಯನ್ನು ಕೊನೆಗಾಣಿಸಲು ಹಾಗೂ ಅಲೆಮಾರಿ ಹಾಗೂ ಅರೆ ಅಲೆಮಾರಿ ಸಮುದಾಯದವರಿಗೆ ಸರ್ಕಾರದಿಂದ ದೊರೆಯುವ ಸೌಲಭ್ಯಗಳ ಬಗ್ಗೆ ಅರಿವು ಮೂಡಿಸಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

6. ಮೂಲಭೂತ ಸೌಕರ್ಯಗಳು

- ಅಲೆಮಾರಿ/ಅರೆ ಅಲೆಮಾರಿ ಜನಾಂಗದವರು ಹೆಚ್ಚಾಗಿ ವಾಸಿಸುತ್ತಿರುವ ಕಾಲೋನಿಗಳಲ್ಲಿ ಹಾಗೂ ಹೊಸದಾಗಿ ನಿರ್ಮಾಣ ಮಾಡಿದ ಬಡಾವಣೆಗಳಲ್ಲಿ ಕಾಂಕ್ರೀಟ್ ರಸ್ತೆ ಮತ್ತು ಚರಂಡಿ ನಿರ್ಮಾಣವನ್ನು ಮಾಡಿ ನಾಗರೀಕ ಸೌಲಭ್ಯವನ್ನು ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶ.

7. ವಸತಿ ಯೋಜನೆ

- ಅಲೆಮಾರಿ/ಅರೆ ಅಲೆಮಾರಿ ಜನಾಂಗದ ವಸತಿ ರಹಿತರಿಗೆ ಅತಿ ಅಗತ್ಯ ಮೂಲಭೂತ ಸೌಕರ್ಯವಾದ ವಸತಿ ಸೌಲಭ್ಯವನ್ನು ಒದಗಿಸುವುದು ಈ ಕಾರ್ಯಕ್ರಮದ ಉದ್ದೇಶವಾಗಿದೆ.
- ಘಟಕ ವೆಚ್ಚ- 1.20 ಲಕ್ಷ

## V. ವಿವಿಧ ಸಮುದಾಯಗಳ ಅಭಿವೃದ್ಧಿ

**1. ಹಿಂದುಳಿದ ವರ್ಗಗಳ ಸಮುದಾಯಗಳಿಗೆ, ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ:**

- ಹಿಂದುಳಿದ ವರ್ಗಗಳ ಜಾತಿ/ಜನಾಂಗಗಳ ಸಮುದಾಯದ ಚಟುವಟಿಕೆಗಳನ್ನು ಹಾಗೂ ವಿದ್ಯಾರ್ಥಿ ನಿಲಯಗಳನ್ನು ನಡೆಸಲು ವಿವಿಧ ಹಿಂದುಳಿದ ವರ್ಗಗಳ ಜಾತಿಗಳಿಗೆ ಸೇರಿದ ಸಂಘ ಸಂಸ್ಥೆಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣಕ್ಕೆ ಸರ್ಕಾರದಿಂದ ಅನುದಾನವನ್ನು ಮಂಜೂರು ಮಾಡುವ ಉದ್ದೇಶವನ್ನು ಹೊಂದಿರುತ್ತದೆ.

ಈ ಕೆಳಗಿನ ಪ್ರದೇಶಗಳಲ್ಲಿ ನಿರ್ಮಿಸುವ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡಗಳಿಗೆ ಅನುದಾನದ ಗರಿಷ್ಠ ಮಿತಿಯನ್ನು ಕೆಳಕಂಡಂತೆ ನಿಗದಿಪಡಿಸಿದೆ.

| ಕ್ರ ಸಂ | ಸ್ಥಳ | ಗರಿಷ್ಠ ಸಹಾಯಧನ |
|---|---|---|
| 1 | ಗ್ರಾಮ ಪಂಚಾಯಿತಿ /ಪಟ್ಟಣ ಪಂಚಾಯಿತಿ | ರೂ.10.00 ಲಕ್ಷ |
| 2 | ತಾಲ್ಲೂಕು ಕೇಂದ್ರ ಸ್ಥಾನ, | ರೂ.25.00 ಲಕ್ಷ |
| 3 | ಜಿಲ್ಲಾ ಕೇಂದ್ರಸ್ಥಾನ | ರೂ.50.00 ಲಕ್ಷ |

2. ವಿದ್ಯಾರ್ಥಿನಿಲಯಗಳಿಗೆ ಸ್ವಂತ ಕಟ್ಟಡ ನಿರ್ಮಾಣ

- ಒಟ್ಟು 2438 ವಿದ್ಯಾರ್ಥಿ ನಿಲಯಗಳ ಪೈಕಿ 1325 ವಿದ್ಯಾರ್ಥಿ ನಿಲಯಗಳಿಗೆ ಸ್ವಂತ ಕಟ್ಟಡ
- 82 ಉಚಿತ ಕಟ್ಟಡಗಳಲ್ಲಿ ನಿರ್ವಹಣೆ
- 1031 ಬಾಡಿಗೆ ಕಟ್ಟಡಗಳಲ್ಲಿ ನಿರ್ವಹಣೆ
- 340 – ಪ್ರಗತಿಯಲ್ಲಿರುವ ಕಟ್ಟಡಗಳು

**ಅನುದಾನದ ವಿವರ**

| ಕ್ರ. ಸಂ. | ವಿವರ | 2019-20ನೇ ಸಾಲಿನಲ್ಲಿ ಒದಗಿಸಿರುವ ಆಯವ್ಯಯ (ರೂ.ಲಕ್ಷಗಳಲ್ಲಿ) |
|---|---|---|
| 1 | ವಿಶೇಷ ಅಭಿವೃದ್ಧಿ ಯೋಜನೆ | 8296.00 |
| 2 | ಪರಿಶಿಷ್ಟ ಜಾತಿ ಉಪಯೋಜನೆ | 6081.00 |
| 3 | ಗಿರಿಜನ ಉಪಯೋಜನೆ | 2987.00 |
| 4 | ಮುಂದುವರೆದ ಕಾಮಗಾರಿ ಹಾಗೂ ಕಟ್ಟಡಗಳ ದುರಸ್ತಿ ಮತ್ತು ನಿವೇಶನ ಖರೀದಿಗಾಗಿ | 15556.00 |
| | ಒಟ್ಟು | 32920.00 |

**3. ತಾಲ್ಲೂಕು ಕೇಂದ್ರಗಳಲ್ಲಿ ದೇವರಾಜ ಅರಸು ಭವನ ನಿರ್ಮಾಣ**

- ಪ್ರತಿ ತಾಲ್ಲೂಕು ಕೇಂದ್ರದಲ್ಲಿ ರೂ.1.00 ಕೋಟಿ ವೆಚ್ಚದಲ್ಲಿ ಡಿ.ದೇವರಾಜ ಅರಸು ಭವನ ನಿರ್ಮಾಣ
- 2019-20ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕೆ ರೂ.1000.00 ಲಕ್ಷಗಳ ನಿಗದಿ
- 55 ಮುಂದುವರೆದ ಕಾಮಗಾರಿಗಳಿಗೆ ವಿನಿಯೋಗ
- 14 ಭವನಗಳ ನಿರ್ಮಾಣ ಕಾರ್ಯ ಪೂರ್ಣಗೊಂಡಿದೆ.

# ಅನುಬಂಧ-1(ಅ)

## ವಿಧಾನಸಭಾ ಮಾನ್ಯ ಸದಸ್ಯರಾದ ಶ್ರೀ ಸಿದ್ದು ಸವದಿ (ತೇರದಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2507ಕ್ಕೆ ಅನುಬಂಧ-1.

* * *

<u>ನಿಗಮದಿಂದ ಸೌಲಭ್ಯ ಒದಗಿಸಲಾವ ಯೋಜನೆಗಳ ಸಂಪೂರ್ಣ ಮಾಹಿತಿ ಈ ಕೆಳಕಡಂತಿದೆ.</u>

1. **<u>ಚೈತನ್ಯ ಸಹಾಯಧನ ಯೋಜನೆ:</u>** ಈ ಯೋಜನೆಯನ್ನು ವ್ಯಾಪಾರ, ಗೃಹಕೈಗಾರಿಕೆ, ಸೇವಾವಲಯ, ಕೃಷಿಯೇತರ ಚಟುವಟಿಕೆಗಳಿಗೆ ಆರ್ಥಿಕ ನೆರವು ನೀಡಲು ಬ್ಯಾಂಕ್‌ಗಳ ಸಹಯೋಗದೊಂದಿಗೆ ಅನುಷ್ಠಾನಗೊಳಿಸಲಾಗುತ್ತಿದೆ. ರೂ.25000/-ಗಳಿಂದ ರೂ.5.00ಲಕ್ಷಗಳ ವರೆಗೆ ಶೇ.20ರಷ್ಟು ಗರಿಷ್ಠ ರೂ.25000/-ಗಳ ಸಹಾಯಧನ ಮಾತ್ರ ನಿಗಮದಿಂದ ಮಂಜೂರು ಮಾಡಲಾಗುವುದು. ಉಳಿಕೆ ಮೊತ್ತ ಬ್ಯಾಂಕ್‌ಗಳ ಪಾಲಿನದಾಗಿರುತ್ತದೆ.
2. **ಡಿ.ದೇವರಾಜ ಅರಸು ಸ್ವಯಂ ಉದ್ಯೋಗ ಸಾಲ ಯೋಜನೆ:** ಹಿಂದುಳಿದ ವರ್ಗಗಳ ಜನರು ಸ್ವಯಂ ಉದ್ಯೋಗ ಕೈಗೊಳ್ಳಲು ಆರ್ಥಿಕ, ಚಟುವಟಿಕೆಗಳಾದ ಸಣ್ಣ ವ್ಯಾಪಾರ, ಸೇವಾ ವಲಯ, ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಗರಿಷ್ಠ ರೂ.2,00,000/-ಗಳ ವರೆಗೆ ಆರ್ಥಿಕ ನೆರವು ಮಂಜೂರು ಮಾಡಲಾಗುವುದು. ಇದರಲ್ಲಿ ಗರಿಷ್ಠ ಶೇ.15 ರಷ್ಟು ಸಹಾಯಧನ ಹಾಗೂ ಉಳಿಕೆ ಮೊತ್ತ ವಾರ್ಷಿಕ ಶೇ.4ರ ಬಡ್ಡಿದರದಲ್ಲಿ ಸಾಲವಾಗಿರುತ್ತದೆ.
3. **ಕಿರುಸಾಲ ಯೋಜನೆ:** ಕುಶಲಿ ಮತ್ತು ಕುಶಲಿಯಲ್ಲದ, ಬಡತನ ರೇಖೆಗಿಂತ ಕೆಳಗಿರುವ ಹಿಂದುಳಿದ ವರ್ಗಗಳ ಸಮುದಾಯಕ್ಕೆ ಸೇರಿದ ಅರ್ಜಿದಾರರು ಕೈಗೊಳ್ಳುವ ಸಣ್ಣ-ಪುಟ್ಟ ವ್ಯಾಪಾರ ಚಟುವಟಿಕೆಗಳಿಗೆ ಪ್ರತಿ ಫಲಾನುಭವಿಗಳಿಗೆ ರೂ.5,000/- ಗಳ ಸಹಾಯಧನ ಹಾಗೂ ವಾರ್ಷಿಕ ಶೇ.4ರ ಬಡ್ಡಿದರದಲ್ಲಿ ರೂ.10000/- ಗಳ ಸಾಲವನ್ನು ಹೀಗೆ ಒಟ್ಟು ರೂ.15,000/- ಗಳಂತೆ ಮಂಜೂರು ಮಾಡಲಾಗುತ್ತದೆ.
4. **<u>ಅರಿವು-ಶೈಕ್ಷಣಿಕ ಸಾಲ ಯೋಜನೆ:</u>** ಹಿಂದುಳಿದ ವರ್ಗಗಳ ಎಲ್ಲಾ ಪ್ರವರ್ಗಗಳಿಗೆ ಸೇರಿದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವೃತ್ತಿಪರ ಉನ್ನತ ಕೋರ್ಸ್‌ಗಳಲ್ಲಿ ಸಿ.ಇ.ಟಿ. ಮೂಲಕ ಪ್ರವೇಶ ಪಡೆದ ಇಂಜಿನಿಯರಿಂಗ್, ವೈದ್ಯಕೀಯ, ದಂತ ವೈದ್ಯಕೀಯ ಮುಂತಾದ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡಲು ವಾರ್ಷಿಕ ಶೇ.2ರ ಬಡ್ಡಿದರದಲ್ಲಿ ಗರಿಷ್ಠ ರೂ.1.00ಲಕ್ಷ ಸಾಲ ಮಂಜೂರು ಮಾಡಲಾಗುತ್ತದೆ.
5. **ವಿದೇಶಿ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಬಡ್ಡಿ ರಹಿತ ಸಾಲ ಯೋಜನೆ:** ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಪ್ರತಿ ವರ್ಷಕ್ಕೆ ರೂ.3.50ಲಕ್ಷಗಳಂತೆ ಕೋರ್ಸ್‌ನ ಅವಧಿಗೆ ಗರಿಷ್ಠ ರೂ.10.00ಲಕ್ಷಗಳ ಬಡ್ಡಿರಹಿತ ಸಾಲ ಮಂಜೂರು ಮಾಡಲಾಗುತ್ತದೆ.

6. **ಗಂಗಾ ಕಲ್ಯಾಣ ನೀರಾವರಿ ಯೋಜನೆ:**

**ವೈಯಕ್ತಿಕ ನೀರಾವರಿ ಯೋಜನೆ:** ಹಿಂದುಳಿದ ವರ್ಗಗಳ ಪ್ರವರ್ಗಗಳಿಗೆ ಸೇರಿದ ಸಣ್ಣ ಮತ್ತು ಅತಿ ಸಣ್ಣ ರೈತರ ಜಮೀನಿಗೆ ವೈಯಕ್ತಿಕ ನೀರಾವರಿ ಯೋಜನೆಯಲ್ಲಿ ಸೌಲಭ್ಯ ಒದಗಿಸಲಾಗುವುದು. ಕೊಳವೆ ಬಾವಿ ಕೊರೆದು, ಪಂಪ್ ಮತ್ತು ಮೋಟಾರ್ ಸರಬರಾಜು ಮಾಡಿ ಹಾಗೂ ವಿದ್ಯುತ್ ಸಂಪರ್ಕ ಒದಗಿಸಲಾಗುವುದು. ಈ ಯೋಜನೆಯಲ್ಲಿ ಘಟಕ ವೆಚ್ಚ ರೂ.2.50ಲಕ್ಷಗಳು ಆಗಿರುತ್ತದೆ. ಈ ಘಟಕ ವೆಚ್ಚದಲ್ಲಿ ರೂ.2.00ಲಕ್ಷ ಸಹಾಯಧನ ಹಾಗೂ ಶೇ.4ರ ಬಡ್ಡಿದರದಲ್ಲಿ ರೂ.0.50ಲಕ್ಷಗಳ ಸಾಲ ಒಳಗೊಂಡಿರುತ್ತದೆ.

ಬೆಂಗಳೂರು ನಗರ, ಬೆಂಗಳೂರು ಗ್ರಾ, ತುಮಕೂರು, ಕೋಲಾರ, ಚಿಕ್ಕಬಳ್ಳಾಪುರ ಮತ್ತು ರಾಮನಗರ ಜಿಲ್ಲೆಗಳಲ್ಲಿ ಘಟಕ ವೆಚ್ಚ ರೂ.4.00 ಲಕ್ಷಗಳು ಇದರಲ್ಲಿ ರೂ.3.50 ಲಕ್ಷಗಳ ಸಬ್ಸಿಡಿ ರೂ.0.50 ಲಕ್ಷಗಳ ಸಹಾಯಧನವಾಗಿರುತ್ತದೆ.

**ಸಾಮೂಹಿಕ ನೀರಾವರಿ ಯೋಜನೆಯಲ್ಲಿ** ಹಿಂದುಳಿದ ವರ್ಗಗಳಿಗೆ ಸೇರಿದ ವಾರ್ಷಿಕ ಆದಾಯ ರೂ.40000/-ಗಳ ಒಳಗಿರುವ ಸಣ್ಣ ಮತ್ತು ಅತಿ ಸಣ್ಣ ರೈತರ 8 ರಿಂದ 15 ಎಕರೆ ಜಮೀನಿಗೆ ಸೌಲಭ್ಯ ಒದಗಿಸಲಾಗುವುದು. 8 ಎಕರೆ ಜಮೀನಿಗೆ ರೂ.4.00ಲಕ್ಷ ಗಳ ಘಟಕ ವೆಚ್ಚದಲ್ಲಿ ಮತ್ತು 15 ಎಕರೆಗಿಂತ ಹೆಚ್ಚು ಜಮೀನು ಇರುವ ಕಡೆಗಳಲ್ಲಿ ರೂ.6.00 ಲಕ್ಷಗಳ ವೆಚ್ಚದಲ್ಲಿ ಕೊಳವೆ ಬಾವಿ ಕೊರೆಯಿಸಿ, ಪಂಪ್‌ಸೆಟ್ ಒದಗಿಸಿ, ವಿದ್ಯುತ್ ಸಂಪರ್ಕ ಕಲ್ಪಿಸಿ ನೀರಾವರಿ ಸೌಲಭ್ಯ ಒದಗಿಸಲಾಗುವುದು.

6. **ಸಾಂಪ್ರದಾಯಿಕ ವೃತ್ತಿದಾರರಿಗೆ ಆರ್ಥಿಕ ನೆರವು:** ಹಿಂದುಳಿದ ವರ್ಗಕ್ಕೆ ಸೇರಿದ ಸಾಂಪ್ರದಾಯಿಕ ವೃತ್ತಿದಾರರಿಗೆ ತಮ್ಮ ವೃತ್ತಿಯ ಕೌಶಲ್ಯತೆ ಹಾಗೂ ತಾಂತ್ರಿಕತೆ ಹೆಚ್ಚಿಸಿಕೊಳ್ಳಲು ಅಗತ್ಯವಿರುವ ದುಡಿಮೆ ಬಂಡವಾಳಕ್ಕೆ ಮತ್ತು ಉಪಕರಣಗಳನ್ನು ಕೊಳ್ಳಲು ಪ್ರತಿ ವೃತ್ತಿದಾರರಿಗೆ ಗರಿಷ್ಠ ರೂ.2,00,000/-ಗಳ ಸಾಲ. ಇದರಲ್ಲಿ ಗರಿಷ್ಠ ಶೇ.15 ರಷ್ಟು ಸಹಾಯಧನ ಹಾಗೂ ಉಳಿಕೆ ಮೊತ್ತ ವಾರ್ಷಿಕ ಶೇ.2ರ ಬಡ್ಡಿದರದಲ್ಲಿ ಸಾಲವಾಗಿರುತ್ತದೆ.

ಕರ್ನಾಟಕ ಸರ್ಕಾರ

ಸಂ:ಬಿಸಿಡಬ್ಲ್ಯೂ 196 ಬಿಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 17/3/20

ಇವರಿಂದ:
ಸರ್ಕಾರದ ಕಾರ್ಯದರ್ಶಿಗಳು,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ,
ವಿಕಾಸಸೌಧ,
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ/ಪರಿಷತ್ತು,
ವಿಧಾನಸೌಧ,
ಬೆಂಗಳೂರು.

85
19/3/20

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭೆ/ಪರಿಷತ್ತಿನ ಸದಸ್ಯರಾದ ಡಾ. ಅಜಯ್ ಸಿಂಗ್ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರ.ಸಂ. 1985 ಕ್ಕೆ ಉತ್ತರಿಸುವ ಕುರಿತು.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಸಭೆ/ಪರಿಷತ್ತಿನ ಸದಸ್ಯರಾದ ಡಾ. ಅಜಯ್ ಸಿಂಗ್ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರ.ಸಂ. 1985 ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

ಸರ್ಕಾರದ ಅಧೀನ ಕಾರ್ಯದರ್ಶಿ-2
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1925 |
| ಮಾನ್ಯ ಸದಸ್ಯರ ಹೆಸರು | ಶ್ರೀ ಲಾಲಾಜಿ ಆರ್. ಮೆಂಡನ್ (ಕಾಪು) |
| ಉತ್ತರಿಸಬೇಕಾದ ದಿನಾಂಕ | 19.03.2020 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ನಿಗಮ, ಅಂಬಿಗರ ಚೌಡಯ್ಯ ನಿಗಮ ಸೇರಿದಂತೆ ಇನ್ನಿತರ ನಿಗಮಗಳ ಮೂಲಕ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಕನಿಷ್ಠ ಗುರಿ ನಿಗದಿಪಡಿಸಲಾಗಿದೆಯೇ; | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ನಿಗಮ, ಅಂಬಿಗರ ಚೌಡಯ್ಯ ನಿಗಮದಿಂದ ಕನಿಷ್ಠ ಗುರಿ ನಿಗದಿಪಡಿಸುತ್ತಿರುವುದಿಲ್ಲ. ನಿಗಮಗಳಿಗೆ ಸರ್ಕಾರವು ಆಯವ್ಯಯದಲ್ಲಿ ಒದಗಿಸುವ ಅನುದಾನವನ್ನು ಯೋಜನಾವಾರು ವಿಧಾನಸಭಾ ಕ್ಷೇತ್ರವಾರು/ಜಿಲ್ಲಾವಾರು ಹಂಚಿಕೆ ಮಾಡಿ ಗುರಿ ನಿಗದಿಪಡಿಸಲಾಗುವುದು. |
| ಆ) | ವಿವಿಧ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಿಗೆ ಸ್ವೀಕಾರವಾಗುತ್ತಿರುವ ಅರ್ಜಿಗಳಿಗೆ ಎದುರಾಗಿ ತೀರಾ ಕಡಿಮೆ ಆಯ್ಕೆಯ ಗುರಿ ನಿಗದಿಪಡಿಸಲಾಗುತ್ತಿದೆ; ಈ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಇ) | ಬಂದಿದ್ದಲ್ಲಿ, ವಿವಿಧ ಸಾಲ ಸಹಾಯಧನ ಯೋಜನೆಗಳಿಗೆ ಹೆಚ್ಚಿನ ಅನುದಾನ ಒದಗಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ; | ಆಯವ್ಯಯದಲ್ಲಿ ಒದಗಿಸುವ ಸಂಪನ್ಮೂಲ ಆಧರಿಸಿ ಅನುದಾನ ಒದಗಿಸಲಾಗುವುದು. |
| ಈ) | ಮುಂದಿನ ಆರ್ಥಿಕ ವರ್ಷದಿಂದ ವಿಧಾನಸಭಾ ಕ್ಷೇತ್ರವಾರು ಹೆಚ್ಚಿನ ಸಂಖ್ಯೆಯ ಫಲಾನುಭವಿಗಳ ಆಯ್ಕೆಗೆ ಅನುದಾನ ಒದಗಿಸಲು ಕ್ರಮಕೈಗೊಳ್ಳಲಾಗುವುದೇ? | 2020-21ನೇ ಸಾಲಿಗೆ ಆಯವ್ಯಯದಲ್ಲಿ ರೂ.109.19 ಕೋಟಿಗಳನ್ನು ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಒದಗಿಸಿದ್ದು, ಈ ಮೊತ್ತದಲ್ಲಿ 2019-20ನೇ ಸಾಲಿನಲ್ಲಿ ಆಯವ್ಯಯ ಕಡಿತದ ರೂ.60.00 ಕೋಟಿಗಳನ್ನು ಗಂಗಾ ಕಲ್ಯಾಣ ಯೋಜನೆಗೆ ಹೊಂದಾಣಿಕೆ ಮಾಡಿಕೊಳ್ಳಲಾಗುವುದು ಹಾಗೂ ಅರಿವು ಶೈಕ್ಷಣಿಕ ಸಾಲ ಯೋಜನೆಯಲ್ಲಿ ಕಳೆದ ವರ್ಷಗಳಲ್ಲಿ ಸಾಲ ಮಂಜೂರು ಮಾಡಿದ ವಿದ್ಯಾರ್ಥಿಗಳಿಗೆ ಮುಂದಿನ 2,3,4,5ನೇ ಕಂತುಗಳನ್ನು ಬಿಡುಗಡೆ ಮಾಡಲು ಸುಮಾರು ರೂ.30.00ಕೋಟಿ ಕಾಯ್ದಿರಿಸಬೇಕಾಗುತ್ತದೆ. ಉಳಿಕೆ ರೂ.19.19 ಕೋಟಿಗಳು ಲಭ್ಯವಾಗಿದ್ದು, ರಾಷ್ಟ್ರೀಯ ನಿಗಮದ ಯೋಜನೆಗಳಲ್ಲಿ ಸಾಲ ಫಲಾನುಭವಿಗಳ ಕಂತು ಪಾವತಿಸಲು ಹಾಗೂ ಆಡಳಿತಾತ್ಮಕ ವೆಚ್ಚಕ್ಕೆ ಈ ಮೊತ್ತವನ್ನು ವಿನಿಯೋಗಿಸಬೇಕಾಗಿರುತ್ತದೆ. ಆದ್ದರಿಂದ 2020-21ನೇ ಸಾಲಿನಲ್ಲಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವಿವಿಧ ಯೋಜನೆಗಳಲ್ಲಿ ಗುರಿ ನಿಗದಿಪಡಿಸಿ ಸೌಲಭ್ಯ ಒದಗಿಸಲು ಅನುದಾನ ಲಭ್ಯವಿರುವುದಿಲ್ಲ. |

ಸಂ:ಹಿಂವಕ 196 ಬಿಎಂಎಸ್ 2020

(ಬಿ.ಶ್ರೀರಾಮುಲು)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ